

ಕರ್ನಾಟಕ

# ಲೋಚನ

## ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಸಂಪುಟ : ೩೩, ಸಂಚಿಕೆ : ೦೧

ಜನವರಿ–ಜೂನ್ ೨೦೧೯

ಸಂಪಾದಕ

**ಪ್ರೊ. ಬಿ.ಪಿ. ವೀರೇಂದ್ರ ಕುಮಾರ್**

ಬಿ.ಎಂ.ಶ್ರೀ. ಪ್ರತಿಷ್ಠಾನ

ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ

ಬಿ.ಎಂ.ಶ್ರೀ. ಕಲಾಭವನ (ರಿ)

೩ನೆಯ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ ಬೆಂಗಳೂರು–೫೬೦೦೧೯.

ದೂರವಾಣಿ : ೨೬೬೧೫೮೭೭, ೨೬೬೭೬೭೭೩

ಎ–ಅಂಚೆ : bmsritrust@gmail.com bmsrilochana@gmail.com

ಬಿ.ಎಂ.ಶ್ರೀ. ಪ್ರತಿಷ್ಠಾನದ ಪದಾಧಿಕಾರಿಗಳು

ಪ್ರೊ॥ ಎಂ. ಎಚ್. ಕೃಷ್ಣಯ್ಯ
ಗೌ॥ ಅಧ್ಯಕ್ಷರು

ಡಾ॥ ಆರ್. ಲಕ್ಷ್ಮೀ ನಾರಾಯಣ
ಅಧ್ಯಕ್ಷರು

ಡಾ॥ ವಿಜಯಾ ಸುಬ್ಬರಾಜ್
ಶ್ರೀ ಬಿ. ಆರ್. ರವೀಂದ್ರನಾಥ್
ಗೌ॥ ಕಾರ್ಯದರ್ಶಿಗಳು

ಡಾ॥ ಎಸ್. ಅನಿಲ್ ಕುಮಾರ್
ಕೋಶಾಧಿಕಾರಿಗಳು

# ಕರ್ನಾಟಕ
# ಲೋಚನ

## ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಸಂಪುಟ : ೩೩, ಸಂಚಿಕೆ : ೦೧
ಜನವರಿ–ಜೂನ್ ೨೦೧೯

ಸಂಪಾದಕ

**ಪ್ರೊ. ಬಿ.ಪಿ. ವೀರೇಂದ್ರ ಕುಮಾರ್**



**ಬಿ.ಎಂ.ಶ್ರೀ. ಪ್ರತಿಷ್ಠಾನ**
**ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ**
**ಬಿ.ಎಂ.ಶ್ರೀ. ಕಲಾಭವನ (ರಿ)**
೩ನೆಯ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ
ಬೆಂಗಳೂರು–೫೬೦೦೧೯.
ದೂರವಾಣಿ : ೨೬೬೧೫೮೭೭, ೨೬೬೭೬೭೭೩
ವಿ–ಅಂಚೆ : bmsritrust@gmail.com bmsrilochana@gmail.com

**KARNATAKA LOCHANA**
Half yearly Research Journal
Edited by Prof. B.P. Veerendra Kumar and
Published by B.M.Sri. Prathistana
M.V.Si. P.G. Research Centre
B.M.Sri. Kalabhavan(R), 3rd Main Road
Narasimharaja Colony, Bangalore 560 019.
Ph.No. 080-26615877, 26676773
e-mail
bmsritrust@gmail.com
bmsrilochana@gmail.com

January-June 2019 (Vol. 33, No. 1)
Pages: viii + 134

Subscription Details :
**Annual : Rs. 100/-**
**Life : Rs. 1500/-**

ಚಂದಾ ವಿವರ:
ವಾರ್ಷಿಕ : ರೂ. ೧೦೦/-
ಆಜೀವ : ರೂ. ೧೫೦೦/-

## ಸಂಪಾದಕರ ನುಡಿ...

ಸಂಶೋಧನ ಬರಹಗಳಿಗೆಂದೇ ಪತ್ರಿಕೆಗಳನ್ನು ಹೊರತರುವುದು ಒಂದು ಸಾಹಸದ ಕೆಲಸವೇ ಆಗಿರುವುದು ವಿಷಾದದ ಸಂಗತಿಯಾಗಿದೆ. ವಿದ್ವತ್‌ವಲಯ ಕ್ಷೀಣಿಸುತ್ತಿರುವುದು, ಶಿಕ್ಷಣದ ದಿಕ್ಕು ಯಾವುದರ ಕಡೆ ಚಲಿಸುತ್ತದೆ ಎಂಬುದನ್ನು ಸೂಚಿಸುತ್ತದೆ. ಹಿರಿಯ ತಲೆಮಾರಿನ ಕೆಲವು ಹಾಗೂ ಕಿರಿಯ ತಲೆಮಾರಿನ ಬೆರಳಣಿಕೆಯ ಸಂಶೋಧಕರಿಂದಲೇ ವಿದ್ವತ್ ಪರಿಸರ ಉಸಿರಾಡಬೇಕಾಗಿದೆ. ಈ ದೃಷ್ಟಿಯಿಂದ 'ಲೋಚನ' ಪತ್ರಿಕೆಯ ಮಹತ್ವ ತಿಳಿದುಬರುತ್ತದೆ. ಹಿರಿಯರಿಂದ ಪ್ರೇರಣೆ ಪಡೆದ ಕಿರಿಯ ಸಂಶೋಧಕರ ಪಡೆ ವೃದ್ಧಿಯಾಗಲಿ ಎಂಬ ಹಾರೈಕೆ ಎಲ್ಲರದೂ ಆಗಿದೆ.

'ಲೋಚನ' ದ ಈ ಸಂಚಿಕೆಯಲ್ಲಿ ಕೆಲವು ಮಹತ್ವದ ಸಂಶೋಧನಾತ್ಮಕ ಲೇಖನಗಳನ್ನೂ ಗಮನಿಸಬಹುದು. ನಾಡಿನ ಶ್ರೇಷ್ಠ ವಿದ್ವಾಂಸರಲ್ಲಿ ಒಬ್ಬರಾದ ಷ. ಶೆಟ್ಟರ್‌ರವರ 'ಪ್ರಾಕೃತ ಜಗದ್ವಲಯ' ಎಂಬ ವಿದ್ವತ್‌ಕೃತಿಯನ್ನು ವಿದ್ವಾಂಸರಾದ ಡಾ. ಕೃಷ್ಣಪರಮೇಶ್ವರಭಟ್ಟ ಅವರು ವಿಮರ್ಶಿಸಿದ್ದಾರೆ. 'ಇಸಿಲ' ಕುರಿತ ಶೆಟ್ಟರ ಇತ್ತೀಚಿನ ಅಭಿಪ್ರಾಯಗಳನ್ನು ಮರುಪರಿಶೀಲನೆಗೆ ಒಳಪಡಿಸಿದ್ದಾರೆ. ಸಾಮಾಜಿಕ ಭಾಷಾ ಶಾಸ್ತ್ರದ ತಿಳುವಳಿಕೆಯ ಕೊರತೆ ಅವರ ಕೃತಿಯಲ್ಲಿ ಕಂಡು ಬಂದಿರುವುದನ್ನು ಗುರಿತಿಸಿದ್ದಾರೆ.

ಎಂ.ಎನ್. ಪ್ರಭಾಕರ್‌ರವರ 'ವಾಸ್ತುಶಿಲ್ಪಶಾಸ್ತ್ರದಲ್ಲಿ ಕರ್ನಾಟಕ ಸಂಸ್ಕೃತಿ' ಎನ್ನುವ ಲೇಖನ ಕನ್ನಡ ಪ್ರಾದೇಶಿಕ ಸಂಸ್ಕೃತಿಯನ್ನು ಅಭ್ಯಾಸ ಮಾಡುವವರಿಗೆ ಮಹತ್ವದ ಮಾಹಿತಿಗಳನ್ನು ಒದಗಿಸುತ್ತದೆ. ಸಂಧ್ಯಾ ಅವರು ಅಜ್ಞಾನ ಕವಿಯತ್ರಿ ಶ್ರೀಮತಿ ಬಗೆಗೆ 'ಶ್ರೀಮತಿ' ಎನ್ನುವುದು ಅಂಕಿತನಾಮವೆಂದು ಸಂಶೋಧನೆ ಮಾಡುವುದರ ಮೂಲಕ ಗೊಂದಲವನ್ನು ಪರಿಹರಿಸಿದ್ದಾರೆ.

ಡಾ. ಎಚ್.ಎಸ್. ಅನಂತನಾರಾಯಣರವರು ನಾಗವರ್ಮನು, ಕಾರ್ಯತಂತ್ರ ವ್ಯಾಕರಣದಿಂದಲೇ ಹೆಚ್ಚು ಪ್ರಭಾವಿತನಾದುದರ ಬಗೆಗೆ ತಿಳಿಸಿದ್ದಾರೆ. ಆಜಪ್ಪ ಬಾಬು ಕಂಬಾರರ 'ಪಿಕಳಿಹಾಳ' ಸಪ್ರಬಂಧವು ಪಿಕಳಿಹಾಳದ ಸಾಂಸ್ಕೃತಿಕ ಮಹತ್ವವನ್ನು ಬಿಚ್ಚಿಡುತ್ತದೆ. ಡಾ. ಆರ್. ಲಕ್ಷ್ಮೀನಾರಾಯಣರು ತಮ್ಮ ಸಂಪ್ರಬಂಧದಲ್ಲಿ ರತ್ನಾಕರನ ಸಮನ್ವಯ ದೃಷ್ಟಿಯನ್ನು ವಿವರಿಸಿ, ಇದು ಭಾರತೀಯ ಧರ್ಮ ಮತ್ತು ದರ್ಶನದ ತಿರುಳಾಗಿರುವುದನ್ನು ಗುರುತಿಸಿದ್ದಾರೆ. ಹಾಗೆಯೇ 'ಶ್ಲೋಕ'ದ ಬಗೆಗೆ ಬಿ.ಎಸ್. ಚಂದ್ರಶೇಖರವರು ಒದಗಿಸಿರುವ ಮಾಹಿತಿ ಹೊಸ ಚಿಂತನೆಗೆ ಅನುವು ಮಾಡಿಕೊಡುತ್ತದೆ. 'ಶಮದ' ವನ್ನು ಸಂಪೂರ್ಣ ನಿರಾಕರಿಸುವುದು ಎಷ್ಟುಸರಿ? ಎನ್ನುವ ಡಾ. ಎಂ.ಜಿ. ವಾರಿಯರ ಪ್ರಬಂಧದ ಪ್ರಶ್ನೆ ಕುತೂಹಲವನ್ನೂ ಕೆರಳಿಸುತ್ತದೆ. ಡಾ. ಬಸವರಾಜ ಕೋಡಗುಂಟಿಯವರು ಯಾದಗಿರಿ ಪರಿಸರದ ಪ್ರಾದೇಶಿಕ ಕನ್ನಡದ ಬಗೆಗೆ ತಮ್ಮ ಸಂಪ್ರಬಂಧದಲ್ಲಿ ಹೊಸ ಬೆಳಕು ಮೂಡಿಸಿದ್ದಾರೆ. ಒಟ್ಟಿನಲ್ಲಿ ಈ ಸಂಚಿಕೆ ವಿಭಿನ್ನವಸ್ತುಗಳನ್ನು ಹೊಂದಿ ಭಿನ್ನ ಆಯಾಮಗಳನ್ನು ಪ್ರಕಟಿಸಿವೆ. ಎಲ್ಲಾ ಲೇಖಕರಿಗೂ ಅಭಿನಂದನೆಗಳು

ಸಂಪಾದಕತ್ವದ ಈ ಜವಾಬ್ದಾರಿಯನ್ನು ವಿಶ್ವಾಸದಿಂದ ನನ್ನ ಮೇಲೆ ಹೊರಿಸಿದ ಬಿ.ಎಂ.ಶ್ರೀ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಆರ್. ಲಕ್ಷ್ಮೀನಾರಾಯಣರವರಿಗೆ, ಸಹಕರಿಸಿದ ಕಾರ್ಯದರ್ಶಿಯವರುಗಳಾದ ಶ್ರೀ ಬಿ.ಆರ್. ರವೀಂದ್ರನಾಥ್ ಹಾಗೂ ಡಾ. ವಿಜಯಾಸುಬ್ಬರಾಜ್‌ರವರಿಗೆ ಹಾಗೂ ಸಿಬ್ಬಂದಿ ವರ್ಗದವರಿಗೆ ಸುಂದರವಾಗಿ ಮುದ್ರಿಸಿಕೊಟ್ಟ ಅನ್ನಪೂರ್ಣೇಶ್ವರಿ ಪ್ರಿಂಟರ್ಸ್‌ರವರಿಗೆ ಗೌರವ ಪೂರ್ವಕ ವಂದನೆಗಳು.

10-7-2019

**ಪ್ರೊ. ಬಿ.ಪಿ. ವೀರೇಂದ್ರಕುಮಾರ್**

ಸಂಪಾದಕರು

## ಲೇಖಕರಿಗೆ ಸೂಚನೆಗಳು...

೧. ಸಾಹಿತ್ಯ-ಸಂಸ್ಕೃತಿಗಳಿಗೆ ಸಂಬಂಧಿಸಿದ ಸಂಶೋಧನೆ ವಿಮರ್ಶೆಗಳ ಅಪ್ರಕಟಿತ ಬರಹಗಳನ್ನು 'ಕರ್ನಾಟಕ ಲೋಚನ' ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಸ್ವೀಕರಿಸಲಾಗುವುದು.

೨. ಲೇಖನಗಳು ನುಡಿ ಅಥವಾ ಬರಹ ತಂತ್ರಾಂಶದಲ್ಲಿ ಬೆರಳಚ್ಚು ಮಾಡಿದವಾಗಿರಬೇಕು ಅಥವಾ ಸ್ಫುಟವಾದ ಕೈಬರಹದಲ್ಲಿರಬೇಕು.

೩. ಲೇಖನಗಳು ಒಪ್ಪಿತವಾದ ಮಾದರಿಯಲ್ಲಿ ಸೂಕ್ತ ಉಲ್ಲೇಖಗಳು ಮತ್ತು ಟಿಪ್ಪಣಿಗಳಿಂದ ಕೂಡಿರಬೇಕು.

೪. ಚಿತ್ರಗಳು, ನಕ್ಷೆಗಳು ಮೊದಲಾದುವನ್ನು ಸ್ಕ್ಯಾನ್ ಮಾಡಿದ ತಂತ್ರಾಂಶದಲ್ಲಿ ನೀಡಬೇಕು.

೫. ಲೇಖಕರು ತಮ್ಮ ವಿಳಾಸ, ದೂರವಾಣಿ ಸಂಖ್ಯೆ ಮತ್ತು ವಿ-ಅಂಚೆಗಳನ್ನು ತಪ್ಪದೆ ನೀಡಬೇಕು.

೬. ಅಸ್ವೀಕೃತ ಬರಹಗಳನ್ನು ಹಿಂದಿರುಗಿಸಲಾಗುವುದಿಲ್ಲ ಮತ್ತು ಈ ಬಗೆಗೆ ಪತ್ರವ್ಯವಹಾರಕ್ಕೆ ಅವಕಾಶವಿರುವುದಿಲ್ಲ.

೭. ಲೇಖನಗಳನ್ನು ಪ್ರತಿಷ್ಠಾನದ ಅಂಚೆವಿಳಾಸಕ್ಕೆ ಅಥವಾ bmsrilochana@gmail.com ಈ ವಿ-ಅಂಚೆಗೆ ಕಳುಹಿಸಬಹುದು.

೮. ಪ್ರಕಟವಾದ ಬರಹಗಳಿಗೆ ಪ್ರತಿಷ್ಠಾನವು ಸಾಂಕೇತಿಕ ಗೌರವ ಸಂಭಾವನೆಯನ್ನು ನೀಡುತ್ತದೆ.

೯. ಲೇಖನದಲ್ಲಿನ ಅಭಿಪ್ರಾಯಗಳು ಲೇಖಕರದೇ ಆಗಿದ್ದು ಪ್ರತಿಷ್ಠಾನದ ನಿಲುವುಗಳನ್ನು ಪ್ರತಿನಿಧಿಸುವುದಿಲ್ಲ.

## ಈ ಸಂಚಿಕೆಯಲ್ಲಿ...


೧. ಪ್ರಾಕೃತ ಜಗದ್ವಲಯ : ಕೆಲವು ವಿಚಾರಗಳು ೧

**– ಕೃಷ್ಣ ಪರಮೇಶ್ವರ ಭಟ್ಟ**

೨. ಶತಕಗಳು ಮತ್ತು ಹಾಡುಗಳಲ್ಲಿ ಕಂಡು ಬರುವ ರತ್ನಾಕರನ ಜೀವನ ದರ್ಶನದ ಸ್ವರೂಪ ೧೩

**–ಡಾ. ಆರ್. ಲಕ್ಷ್ಮೀನಾರಾಯಣ**

೩. ಅಜ್ಞಾತ ಕವಯತ್ರಿ 'ಶ್ರೀಮತಿ' ೨೭

**– ಸಂಧ್ಯಾ ವಿ.**

೪. ವಾಸ್ತುಶಿಲ್ಪಶಾಸ್ತ್ರದಲ್ಲಿ ಕರ್ನಾಟಕ ಸಂಸ್ಕೃತಿ ೩೫

**– ಎಂ.ಎನ್.ಪ್ರಭಾಕರ್**

೫. ಲಿಂಗ ವಿಂಗಡಣೆಯ ಸಾಮಾಜಿಕ ಮತ್ತು ಸಾಂಸ್ಕೃತಿಕ ನೆಲೆ–ಒಂದು ಚಿಂತನೆ ೬೦

**–ಡಾ. ಎಂ.ಜಿ.ವಾರಿ**

೬. ಶ್ಲೋಕ – ಸರಳ ಸಂಸ್ಕೃತ ಛಂದ ೭೧

**– ಶ್ರೀ ಬಿ.ಎಸ್. ಚಂದ್ರಶೇಖರ್**

೭. ಪಿಕಿಳಿಹಾಳ ೭೭

**– ಆಜಪ್ಪಬಾಬು ಕಂಬಾರ**

೮. ಯಾದಗಿರಿ ಪರಿಸರದ ಕನ್ನಡದಾಗ 'ಅ' ಕೊನೆ ಪದಗಳು ೯೭

**– ಬಸವರಾಜ ಕೋಡಗುಂಟಿ**

೯. ನಾಗವರ್ಮನ ಕರ್ನಾಟಕ ಭಾಷಾಭೂಷಣ ೧೦೬

**– ಡಾ. ಎಚ್.ಎಸ್. ಅನಂತನಾರಾಯಣ**

೧೦. ಕಣವಿಯವರ ಕಾವ್ಯಮೀಮಾಂಸೆ ೧೨೩

**–ಡಾ.ಜಿ.ಎಂ. ಹೆಗಡೆ**

# ಪ್ರಾಕೃತ ಜಗದ್ವಲಯ : ಕೆಲವು ವಿಚಾರಗಳು

*

## –ಕೃಷ್ಣ ಪರಮೇಶ್ವರ ಭಟ್ಟ

ಷ. ಶೆಟ್ಟರ್ ಅವರ **ಪ್ರಾಕೃತ ಜಗದ್ವಲಯ** (ಪ್ರಾಕೃತ, ಸಂಸ್ಕೃತ. ಕನ್ನಡ ಭಾಷೆಗಳ ಅನುಸಂಧಾನ) ಎಂಬುದು ಕನ್ನಡದ ಮಟ್ಟಿಗೆ ಒಂದು ವಿಶಿಷ್ಟಕೃತಿ, ವಿಸ್ತಾರವಾದ ಶಾಸನಾಧ್ಯಯನಗಳ ಹಿನ್ನೆಲೆಯಲ್ಲಿ, ಜೊತೆಗೆ ಪೂರಕವಾಗಿ ಸಾಹಿತ್ಯಕೃತಿಗಳನ್ನೂ ಅನುಲಕ್ಷಿಸಿ, ಧರ್ಮ, ರಾಜಕಾರಣಗಳ ಹಾಗೂ ಸಂಸ್ಕೃತ, ಕನ್ನಡಗಳ ಸಂಬಂಧದ ಹಿನ್ನೆಲೆಯಲ್ಲಿ ಪ್ರಾಕೃತ ಭಾಷೆಯ(ಗಳ) ವಿಸ್ತೃತ ಹಿನ್ನೆಲೆ ಹಾಗೂ ಏಳುಬೀಳುಗಳ ಪರಿಚಯವನ್ನು ಮಾಡಿಕೊಡಬಯಸುವ ಕೃತಿ. ಸಂಸ್ಕೃತ, ಪ್ರಾಕೃತ, ಕನ್ನಡ ಭಾಷೆಗಳಲ್ಲಿಯ ಶಾಸನಗಳ ಸಂಖ್ಯಾಪ್ರಮಾಣ (statistics)ದ ಜೊತೆಗೆ ಈ ಭಾಷೆಗಳ ದ್ವಿಭಾಷಿಕ ಮಿಶ್ರಣವನ್ನು ವಿಶ್ಲೇಷಣನೆಗೆ, ಪ್ರಾಯಶಃ ಮೊದಲಬಾರಿಗೆ, ನಡೆಸಿದ ಅಧ್ಯಯನವಿದು. ಈ ಕೃತಿಗೆ ಕೆ.ವಿ.ತಿರುಮಲೇಶ್ ಅವರ ಉತ್ತಮವಾದ ಮುನ್ನುಡಿಯೂ ಇದೆ. ಆದರೆ ಈ ಕೃತಿಯನ್ನು ಮತ್ತೆ ಮತ್ತೆ ಓದಿದದ ಮೇಲೆಯೂ ಅದರಲ್ಲಿಯ ಅನೇಕ ಅರ್ಥೈಕೆ (interpretation)ಗಳನ್ನು, ಅಭಿಪ್ರಾಯಗಳನ್ನು ಒಪ್ಪುವುದು ಕಷ್ಟವೆಂದೇ ತೋರಿತು. ಮುಖ್ಯವಾಗಿ ಇದು ಶಾಸನಗಳಲ್ಲಿಯ ಭಾಷಾಬಳಕೆಯನ್ನೇ ಪ್ರಮುಖವಾಗಿ ಆಧರಿಸಿದ ಅಧ್ಯಯನವಾದುದರಿಂದ ಭಾಷಾಶಾಸ್ತ್ರದ–ಅದರಲ್ಲಿಯೂ ವಿಶೇಷತಃ ಸಾಮಾಜಿಕ ಭಾಷಾಶಾಸ್ತ್ರದ ತಿಳುವಳಿಕೆಯನ್ನು ಇದು ಹೆಚ್ಚಾಗಿ ಅಪೇಕ್ಷಿಸುವಂಥದು. ಈ ಹಿನ್ನೆಲೆಯಿದ್ದಿದ್ದರೆ ಈ ಕೃತಿಯ ನಿರೂಪಣೆ ತುಂಬ ಬೇರೆಯಾಗಬಹುದಿತ್ತೆನಿಸುತ್ತದೆ. ಈ ವಿಷಯಕವಾದ ಹಾಗೂ ಇನ್ನಿತರ ಕೆಲವು (ನನ್ನ ಅಭಿಪ್ರಾಯದಲ್ಲಿ) ಚರ್ಚಾಸ್ಪದವಾದ ಅಥವಾ ಸ್ವೀಕಾರಾರ್ಹವಲ್ಲದ ವಿಷಯಗಳನ್ನು ಕುರಿತು ನನ್ನ ಅನಿಸಿಕೆಗಳನ್ನು ವ್ಯಕ್ತಪಡಿಸಬಯಸುತ್ತೇನೆ. ಕೃತಿಯ ಕೊನೆಯ ಅಧ್ಯಾಯವಾಗಿ "ಪ್ರಾಕೃತ, ಕನ್ನಡ ಮತ್ತು ಸಂಸ್ಕೃತ ಪದಗಳ ಅನುಸಂಧಾನ" ಎಂಬೊಂದು ಭಾಗವಿದೆ. 'ಅನುಸಂಧಾನ' ಎಂಬುದು "ಸಂಘರ್ಷ" ಎಂಬುದರ ಪರ್ಯಾಯವಾಗಿ ಬಳಕೆಯಾಗಿದೆ ಎಂಬಂತೆ ಹಾಗೂ ಈ ಪದದ ಆಯ್ಕೆ ಉತ್ತಮವಾಗಿದೆ ಎಂದು ತಿರುಮಲೇಶ್ ಮುನ್ನುಡಿಯಲ್ಲಿ ಹೇಳಿದ್ದಾರೆ. ಆದರೆ 'ಅನುಸಂಧಾನ' ಎಂಬ ಸಂಸ್ಕೃತ ಪದಾರ್ಥ ಇಲ್ಲಿ ಬಳಕೆಯಾಗಿಲ್ಲ

ಹಾಗೂ ಇಲ್ಲಿ ಆ ಪದದ ಅರ್ಥವೇನೆಂಬುದೂ ನನಗೆ ಸ್ಪಷ್ಟವಾಗಿಲ್ಲ. ಕೃತಿಗೆ ಅನುಬಂಧದ ರೀತಿಯಲ್ಲಿ (ಭಾಷಾವಾರು) ವಿಂಗಡಿಸಿಕೊಟ್ಟ ಪದಗಳ ಪಟ್ಟಿಯಾಗಿ ಮಾತ್ರ ನನಗೆ ತೋರುತ್ತದೆ. ಅದರಿಂದ ಏನನ್ನೂ ನಿಷ್ಪನ್ನಗೊಳಿಸಲು ಸಾಧ್ಯವಾಗದು. ಆದ್ದರಿಂದ ಈ ಕುರಿತು ಏನನ್ನೂ ಹೇಳಲಾರೆ. ಐದನೆಯ ಅಧ್ಯಾಯವಾಗಿ 'ಇಸಿಲ ಪದದ ಮರುಚಿಂತನೆ' ಎಂಬ ಚಿಕ್ಕದಾದರೂ ಗಮನ ಸೆಳೆಯುವ ಅಧ್ಯಾಯವೊಂದಿದೆ. ಅಶೋಕನ ಶಾಸನದಲ್ಲಿ ಬಳಕೆಯಾದ 'ಇಸಿಲ' ಎಂಬ ಪದವು ಕನ್ನಡದಲ್ಲಿ ದೊರೆತ ಅತ್ಯಂತ ಪ್ರಾಚೀನ ಕನ್ನಡಪದ ಎಂಬ (ಡಿ.ಎಲ್. ನರಸಿಂಹಾಚಾರ್ ಅವರಿಂದ ಶುರುವಿಟ್ಟ) ವಿದ್ವಜ್ಜನರ ನಂಬಿಕೆಯನ್ನು ಸಾಧಾರವಾಗಿ ಅಲ್ಲಗಳೆದಿದ್ದಾರೆ. ಚಿತ್ರದುರ್ಗ ಜಿಲ್ಲೆಯ ಕಲ್ಬರೆಹದಲ್ಲಿಯ ಪ್ರಾಕೃತ ಶಾಸನದಲ್ಲಿ ಬಳಕೆಯಾದ 'ಇಸಿಲ' ಎಂಬುದು ಸ್ಥಳನಾಮವಾಗಿದ್ದು ಇದೊಂದು ಅತಿ ಪ್ರಾಚೀನವಾದ (ಕ್ರಿ.ಪೂ. ೩ನೇ ಶ.) ಅಚ್ಚ ಕನ್ನಡ ಪದ ಎಂಬುದು ನಂಬಿಕೆ. ಆದರೆ ಈ ಪದ ಉತ್ತರ ಭಾರತದ ಹಲವಾರು ಪ್ರಾಕೃತ ಶಾಸನಗಳಲ್ಲಿ ದೊರೆಯುತ್ತದೆ ಹಾಗೂ ಸ್ತ್ರೀ-ಪುಂ. ವಾಚಕ ವ್ಯಕ್ತಿನಾಮವಾಗಿ ಬಳಕೆಯಾಗಿಲ್ಲ ಎಂಬ ಸಂಗತಿಯನ್ನು ಶೆಟ್ಟರ್ ಹೊರಗಡೆಹಿದ್ದಾರೆ. ಅಲ್ಲದೇ ಈ ಪದವು ಕನ್ನಡದ ಶಾಸನಗಳಲ್ಲಿ ಯಾವುದರಲ್ಲಿಯೂ ಬಳಕೆಯಾಗಿದೆ ಎಂಬುದನ್ನೂ ಗಮನಿಸಿದ್ದಾರೆ. ಈ ಕಾರಣಗಳಿಂದ ಇದು ಕನ್ನಡ ಪದವಲ್ಲವೆಂಬ ನಿರ್ಧಾರಕ್ಕೆ ಬಂದಿದ್ದಾರೆ. ತಾತ್ಪರ್ಯದಲ್ಲಿ, 'ಇಸಿಲ'ವು ಕನ್ನಡ ಪದವಲ್ಲ ಎಂಬ ಅವರ ನಿರ್ಧಾರ ಸರಿಯೆಂದೇ ತೋರುತ್ತದೆ. ಆದರೆ 'ಇಸಿಲ'ವು ಕನ್ನಡದಲ್ಲಲ್ಲದೇ ಕೇವಲ ಪ್ರಾಕೃತ ಶಾಸನಗಳಲ್ಲಿ ಮಾತ್ರ ದೊರೆಯುತ್ತದೆ ಎಂಬುದು ಇದನ್ನು ನಿರ್ಧರಿಸುವ ಸಂಗತಿಯಾಗದು ಮಾತ್ರವಲ್ಲ, ಇದು ಕರ್ನಾಟಕದಲ್ಲಿಯ ಸ್ಥಳನಾಮವಾಗಿ ಬಳಕೆಯಾಗಿದ್ದರೂ ಅದು ಕನ್ನಡ ಪದವಾಗಿರಬೇಕಾಗಿಲ್ಲ. ಅದು ಬೇರಾವುದೋ ಪ್ರಾಚೀನ ಭಾಷೆಯೊಂದರ ಶಬ್ದವೂ ಆಗಿರಬಹುದು. ಸ್ಥಳನಾಮ, ವ್ಯಕ್ತಿನಾಮ ಹಾಗೂ ಅನುಕರಣ ವಾಚಕ ಪದಗಳನ್ನು ಅವು ದೊರೆಯುವ ಭಾಷೆಯದೇ ಒಂದು ಅಂಗ ಎಂದು ಪರಿಗಣಿಸಲಾಗದು. ಕನ್ನಡ ಭಾಷೆಯ ಚೌಕಟ್ಟಿನಲ್ಲಿ ಆ ಪದದ ನಿಷ್ಪತ್ತಿಯನ್ನು ಹೇಳಲು ಸಾಧ್ಯವಾದರೆ ಮಾತ್ರ ಅದನ್ನು ಕನ್ನಡಪದವೆಂದು ಹೇಳಬಹುದು. ಈ ಪದ ಪ್ರಾಕೃತ ಶಾಸನಗಳಲ್ಲಿ ಮಾತ್ರ ದೊರೆಯುತ್ತದೆ ಎಂಬುದೂ ಸರಿಯಾದ ಕಾರಣವಲ್ಲ. ಸ್ಥಳನಾಮ, ವ್ಯಕ್ತಿನಾಮಗಳು ಇಂಥದೇ ಭಾಷೆಯಲ್ಲಿ ಬಳಕೆಯಾಗುತ್ತದೆ/ ಬಳಕೆಯಾಗದು ಎಂಬುದನ್ನು ನಿಯಮವಾಗಿ ಹೇಳಲಾಗದು.

ಶೆಟ್ಟರ್ ಅವರ ಕೃತಿಯಲ್ಲಿ ಒಪ್ಪಲು ಕಷ್ಟವಾದ ಒಂದು ಮುಖ್ಯ ವಿಷಯವೆಂದರೆ ಸಂಸ್ಕೃತ-ಪ್ರಾಕೃತ ಭಾಷೆಗಳ ವಿಷಯವಾಗಿ ಅವರು ಇಟ್ಟುಕೊಂಡ ಸಿದ್ಧ ಮಾದರಿಯ ಗ್ರಹಿಕೆ ಹಾಗೂ ಇದರಿಂದಾಗಿ ಅವರು ನೀಡಿರುವ ಹಲವು ವ್ಯಕ್ತಿನಿಷ್ಠ ಹಾಗೂ ಭಾವನಾತ್ಮಕ ಹೇಳಿಕೆಗಳು. ಇವು ಈಚಿನ ಸಾಹಿತ್ಯವಿಮರ್ಶೆಗಳಲ್ಲಿ ವ್ಯಕ್ತಪಡಿಸಲಾಗುತ್ತಿರುವ ಭಾವನಾತ್ಮಕ

ಹೇಳಿಕೆಗಳಿಂತ ಭಿನ್ನವಲ್ಲ. ಪ್ರಾಕೃತವೆನ್ನುವದು ಕ್ರಿ.ಶ.ದ ಹೊತ್ತಿಗೆ ಅನೇಕ ಪ್ರಾದೇಶಿಕ(ಪ್ರತ್ಯೇಕವಾಗಿ ಹೇಳದಿದ್ದರೂ ಸಾಮಾಜಿಕವಾಗಿ ಕೂಡ) ಭೇದಗಳಾಗಿ ರೂಪುಗೊಂಡಿದ್ದವು ಎಂಬುದು ತಿಳಿದ ವಿಚಾರವೇ ಮಹಾರಾಷ್ಟ್ರೀ, ಮಾಗಧೀ, ಗೌಡೀ ಇತ್ಯಾದಿ ಪ್ರತ್ಯೇಕ ಭಾಷೆಗಳೇ ಆಗಿದ್ದವು. 'ಪ್ರಾಕೃತ' 'ಪ್ರಾಕೃತ' ಎಂಬುದು ಇಂತಹ ಹಲವಾರು ಭಾಷೆಗಳನ್ನೊಂಡ ಸಾಮಾನ್ಯ ಹೆಸರಷ್ಟೇ.(cover term)ಈ ಪದದ ಇನ್ನೂ ವಿಸ್ತಾರವಾದ ಅರ್ಥದಲ್ಲಿ ಕನ್ನಡ, ತಮಿಳು ಇತ್ಯಾದಿಗಳೂ ಪ್ರಾಕೃತಗಳೇ. ಶೆಟ್ಟರ್ ಅವರೂ ಈ ಅರ್ಥದಲ್ಲಿಯೇ ಬಳಸಿದ್ದಾರೆ. (ತಿರುಮಲೇಶ್ ಅವರ ಅಭಿಪ್ರಾಯವೂ ಸಹಮತ ಹೊಂದಿದೆ.) ಸರಿಯೇ, ಹೀಗೆಂದಾಗ 'ಪ್ರಾಕೃತ'ವೆಂದರೆ ಸಹಜವಾಗಿ ರೂಢಿಯಲ್ಲಿ ಬಳಕೆಯಲ್ಲಿರುವ ಭಾಷೆ ಎಂದರ್ಥ. ಆದರೆ 'ಪ್ರಾಕೃತ' ಎಂಬ ಪದ/ಹೆಸರು ಕನ್ನಡ, ತಮಿಳು, ಮರಾಠಿ ಇತ್ಯದಿಗಳಂತೆ (ದೇಶ. ಜನರ ಹೆಸರುಗಳಿಂದ ರೂಪಿತವಾದ) ಸಹಜವಾದ ಹೆಸರಲ್ಲ. ಅದು 'ಸಂಸ್ಕೃತ' ಶಬ್ದಕ್ಕೆ ವಿರುದ್ಧವಾಗಿ ರೂಪಿಸಲ್ಪಟ್ಟ ಹೆಸರು. 'ಸಂಸ್ಕೃತ' ಎಂಬುದು (ಮೊದಲು ಬಳಕೆಯಲ್ಲಿದ್ದ ಸಹಜ/ ಸಾಮಾನ್ಯ ಭಾಷೆಯೊಂದಕ್ಕೆ) ಸಂಸ್ಕಾರ ನೀಡಿದ ನಂತರದಲ್ಲಿ ನೀಡಿದ ಹೆಸರಷ್ಟೇ. ಇದು ಸಂಸ್ಕೃತದಲ್ಲಿ ವ್ಯಾಕರಣಗಳು ಹುಟ್ಟಿ ಪ್ರಸಿದ್ಧವಾದ ನಂತರ (ಕ್ರಿ.ಪೂರ್ವ ೬೦೦ಕ್ಕಿಂತಲೂ ಮೊದಲೇ) ಬಂದ ನಂತರದ ಹೆಸರು. ಇದು ಲೌಕಿಕ ಸಂಸ್ಕೃತ ಎಂದೂ ಪ್ರಸಿದ್ಧವಾಗಿದೆ ಹಾಗೂ ಕಾವ್ಯಶಾಸ್ತ್ರಗಳು ಇದರಲ್ಲಿ ವಿಪುಲವಾಗಿ ರಚನೆಯಾಗಿವೆ. ವೇದದ ಭಾಷೆ ವ್ಯಾಕರಣಗಳಿಂದ ಪ್ರಮಾಣಿತವಾದ(standardised) 'ಸಂಸ್ಕೃತ'ವಲ್ಲ. ಅದು ಆ ಕಾಲದ (ವೇದ ಋಷಿಗಳ) ಆಡುಭಾಷೆಯಾಗಿತ್ತೆಂದು ಊಹಿಸಬಹುದು. ವೇದಮಂತ್ರಗಳು ಸ್ಫೂರ್ತಿಯಿಂದ ಹುಟ್ಟಿದವುಗಳಾಗಿದ್ದಲ್ಲಿ ಅವು ಅವರಿಗೆ ಸಹಜವಾಗಿ ದೊರೆತ('ಕಲಿಯದ') ಭಾಷೆಯಲ್ಲಿಯೇ ಬಂದಿರಬೇಕಲ್ಲವೇ? ಈ ಅರ್ಥದಲ್ಲಿ ವೇದಭಾಷೆಯೂ ಪ್ರಾಕೃತವೇ. ವೇದಕಾಲದಲ್ಲಿಯೇ ವೇದಭಾಷೆಗಿಂತ ಸ್ವಲ್ಪ ಭಿನ್ನವಾಗಿ, ಆದರೆ ಅದನ್ನೇ ಹೋಲುವ ಇತರ (ವೃತ್ತಿ) ವರ್ಗಗಳ ಭಾಷೆಯೊಂದು, ಇತರ ದೇಸಿ ಭಾಷೆಗಳೊಡನೆ ಸಹಜೀವನ ನಡೆಸಿರಬೇಕಷ್ಟೇ? ಮುಂದೆ ಈ ವೇದಭಾಷೆಯನ್ನಾಧರಿಸಿ (ಪಾಣಿನಿ ಮೊದಲಾದವರಿಂದ) ವ್ಯಾಕರಣಗಳು ಹುಟ್ಟಿ ಪ್ರಸಿದ್ಧವಾದ ನಂತರ ಅದು 'ಸಂಸ್ಕೃತ' ವಾಯಿತು. ಹಾಗೂ ಶಿಷ್ಟರ ಭಾಷೆಯಾಗಿ ಔಪಚಾರಿಕವಾದ ರೀತಿಯಲ್ಲಿ 'ಕಲಿತ' ಭಾಷೆಯಾಗಿ ಶಿಷ್ಟ ಸಂದರ್ಭಗಳಲ್ಲಿ ಬಳಕೆಯಾಗಿರಬೇಕು. ವೇದಭಾಷೆ ಸಂಸ್ಕಾರಗೊಂಡು ಒಂದೆಡೆ ಮೇಲ್ಮಟ್ಟದ 'ಸಂಸ್ಕೃತ' ವಾದರೆ(upgraded)ಇನ್ನೊಂದು ದಿಕ್ಕಿನಲ್ಲಿ ಇತರ ವರ್ಗಗಳ ಪ್ರಾಕೃತಗಳೊಡನೆ ಹಾಗೂ ದೇಸಿಗಳೊಡನೆ ಸಂಕರಗೊಳ್ಳುತ್ತ ಶಿಷ್ಟ ಪ್ರಾಕೃತ, ಅಪಭ್ರಂಶ, ಪೈಶಾಚೀ ಇತ್ಯಾದಿ ಒಂದಕ್ಕಿಂತ ಒಂದು ಕೆಳಮಟ್ಟದ (downgraded)ಭಾಷೆಗಳಾಗಿ ಕಾಣಿಸಿಕೊಂಡಿರಬೇಕು. ಹೀಗಾಗಿದ್ದಲ್ಲಿ ಮೇಲ್ವರ್ಗದ ವೈದಿಕ-ಕ್ಷತ್ರಿಯರು ಔಪಚಾರಿಕ ಸಂದರ್ಭಗಳಲ್ಲಿ

ಸಂಸ್ಕೃತವನ್ನು ಬಳಸಿದರೂ ಉಳಿದ ದೈನಂದಿನ ವ್ಯವಹಾರಗಳಲ್ಲಿ ಮನೆಭಾಷೆಯಾಗಿ ಸ್ತ್ರೀಯರೊಡನೆ, ಇತರರೊಡನೆ ಪ್ರಾಕೃತದ ಒಂದು ಸಾಮಾಜಿಕ ಪ್ರಭೇದವನ್ನೇ ಬಳಸುತ್ತಿದ್ದಿರಬೇಕು. ಹಾಗೂ ಸಂಸ್ಕೃತ ಹಾಗೂ ಪ್ರಾಕೃತದ ಸಾಮಾಜಿಕ ಪ್ರಭೇದಗಳ ಮಧ್ಯೆ ಸಂಭಾಷಣೆ ಸಾಧ್ಯವಾಗುವಷ್ಟು ಅಂತರವಿರಬೇಕು. ಸಂಸ್ಕೃತ ನಾಟಕಗಳಲ್ಲಿಯ ಪಾತ್ರಗಳು ಸಂಭಾಷಣೆ ಮಾಡುವಾಗ ಬಳಸುವ ಸಂಸ್ಕೃತ ಹಾಗೂ ವಿವಿಧ ಬಗೆಯ ಪ್ರಾಕೃತಗಳು ಇದೇ ಸಂದರ್ಭವನ್ನೇ ಸೂಚಿಸುತ್ತವೆಯಲ್ಲವೇ? ಪ್ರಚಲಿತ ಸಾಮಾಜಿಕ ಭಾಷಾವಿಜ್ಞಾನದ ಪರಿಚಯವುಳ್ಳವರಿಗೆ ಇದು ಅಸಂಭವನೀಯವಾದ ಊಹೆಯೇನೂ ಅಲ್ಲ. ಪ್ರಸ್ತುತ ಕನ್ನಡದ ಬಳಕೆಯ ಸಂದರ್ಭಗಳನ್ನೇ ಗಮನಿಸಿ; ಕನ್ನಡದ ಅಧಿಕೃತ ಬರೆಹದ ಭಾಷೆಯು ಬಹುತೇಕವಾಗಿ ಮೈಸೂರು–ಬೆಂಗಳೂರು ಕಡೆಯ ಕನ್ನಡವನ್ನು ಹೆಚ್ಚು ಹೋಲುತ್ತಿದ್ದರೂ ಹಾಗೂ ಅದು ಸಾಪೇಕ್ಷವಾಗಿ ಇಲ್ಲಿಯ ಮೇಲ್ಜಾತಿಯ ಕನ್ನಡಕ್ಕೆ ಹತ್ತಿರವಾಗಿದೆಯೆಂದು ಹೇಳಲಾಗುತ್ತಿದ್ದರೂ ಅದರ ಹಾಗೂ ಅದಕ್ಕಿಂತ ಭಿನ್ನವಾದ ಹಲವಾರು ಬಗೆಯ ಪ್ರಾದೇಶಿಕ ಹಾಗೂ ಸಾಮಾಜಿಕ ಕನ್ನಡಗಳ ನಡುವೆ ಸಾಮಾನ್ಯವ್ಯವಹಾರಗಳಿಗೆ ಸಂಬಂಧಿಸಿದಂತೆ ಸಂಭಾಷಣೆ ಸಾಧ್ಯವಲ್ಲವೇ? ಪ್ರಾಕೃತ ಭಾಷೆಗಳೂ, ಶಿಷ್ಟವಾಗಿ, ವ್ಯಾಕರಣಗಳನ್ನು ಹೊಂದಿ ಅಧಿಕೃತ ಭಾಷೆಗಳೆನಿಸಿದ್ದು ಕ್ರಿ.ಶ. ಸುಮಾರು ೪–೫ಶ.ದ ಹೊತ್ತಿಗೆ, ಆದರೆ ಇಲ್ಲಿಯೂ ಕೆಲಬಗೆಯ ಪ್ರಾದೇಶಿಕ–ಸಾಮಾಜಿಕ ಪ್ರಭೇದಗಳಷ್ಟೇ ವ್ಯಾಕರಣ ಹೊಂದುವ ಭಾಗ್ಯ ಹೊಂದಿದವು. ಅವೂ ಮುಂದೆ ಅಲ್ಲಲ್ಲಿಯ ಇತರ ಸಾಮಾಜಿಕ ಪ್ರಭೇದಗಳೊಡನೆ ಸಂಕರಗೊಳ್ಳುತ್ತ ೯–೧೦ನೇ ಶ.ದ ಆಸುಪಾಸಿನಲ್ಲಿ ಮರಾಠಿ, ಗುಜರಾತಿ, ಬಂಗಾಲಿ ಇತ್ಯಾದಿ ಪ್ರತ್ಯೇಕ ಭಾಷೆಗಳಾದವು. ಅಶೋಕನ ಕಾಲದ ಶಾಸನಗಳು ಪ್ರಾಕೃತದಲ್ಲಿದ್ದರೂ ಅದು ಜನಸಾಮಾನ್ಯರ ಪ್ರಾಕೃತವೇ ಆಗಿರಬೇಕಾಗಿಲ್ಲ; ಆಗಿರುವ ಸಂಭವವೂ ಕಡಿಮೆ ಎಂದು ಊಹಿಸಬಹುದೇನೋ. ಇಲ್ಲಿ ಇನ್ನೊಂದು ಸಂಗತಿಯನ್ನೂ ಗಮನಿಸಬೇಕು; ಈಗಿನ ಉತ್ತರಭಾರತದ ಭಾಷಾಸಂದರ್ಭವನ್ನು ಲಕ್ಷಿಸಿ ಭಾಷಾವಿದ್ವಾಂಸರು ಒಂದು ಮಾತನ್ನು ಹೇಳುತ್ತಾರೆ. ಅದು, ಉತ್ತರ ಭಾರತದಲ್ಲಿ (ವಿವಿಧ ಪ್ರಾಕೃತಗಳಿಂದ ಹುಟ್ಟಿದ) ರಾಜಸ್ಥಾನಿ, ಪಂಜಾಬಿ, ಹಿಂದಿ ಇತ್ಯಾದಿ ವಿವಿಧ ಭಾಷೆಗಳಿದ್ದರೂ ಉತ್ತರದಿಂದ ದಕ್ಷಿಣಕ್ಕೆ (ಅಥವಾ ವಿರುದ್ಧ ದಿಕ್ಕಿನಲ್ಲಿ) ಬಂದಂತೆ ಖಚಿತವಾದ ಭಾಷಾ ಗಡಿಪ್ರದೇಶಗಳಿಲ್ಲ; ಒಂದು ಭಾಷೆ ಕ್ರಮೇಣ ಇನ್ನೊಂದಾಗಿ ಬದಲಾಗುತ್ತದೆ. ಹೀಗೆಂದರೆ ಒಂದು ರಾಜ್ಯದ ಗಡಿಪ್ರದೇಶದ ವ್ಯಕ್ತಿಗೆ ತನ್ನದೇ ರಾಜ್ಯದ ಇನ್ನೊಂದು ತುದಿಯ ತನ್ನ ಭಾಷೆಗಿಂತ ತನ್ನ ಪಕ್ಕದ ರಾಜ್ಯದ ಇನ್ನೊಂದು ಭಾಷೆ ಸುಲಭವಾಗಿ ಅರ್ಥವಾಗುವಂತಿರುತ್ತದೆ. ಸ್ಪಷ್ಟವಾದ ಭಾಷಾಗಡಿಗಳಿಲ್ಲದುದೇ ಇದಕ್ಕೆ ಕಾರಣ. ಇಂತಹುದೇ ಸನ್ನಿವೇಶ ಹಿಂದೆಯೂ ಇದ್ದಿರುವ ಸಾಧ್ಯತೆ ಇದೆ. ಒಂದು ಕಾಲಕ್ಕೆ (ಅಶೋಕನ ಕಾಲದಲ್ಲಿ–ಶಾಸನಗಳ ಲಭ್ಯತೆಯನ್ನಾಧರಿಸಿ) ಪ್ರಾಕೃತವು ಭಾರತವನ್ನೆಲ್ಲ ಮಾತ್ರವಲ್ಲ, ಭಾರತದ ಹೊರಗೆ

ಅಪಘಾನಿಸ್ತಾನವನ್ನು ವ್ಯಾಪಿಸಿದ, (ಸಂಸ್ಕೃತಕ್ಕಿಂತಲೂ ವಿಸ್ತೃತವಾದ ಪ್ರದೇಶವನ್ನು ವ್ಯಾಪಿಸಿದ) ಭಾಷೆಯಾಗಿತ್ತು. ಎಂಬರ್ಥದ ವಾಕ್ಯಗಳನ್ನು ಶೆಟ್ಟರ್ ಬಳಸುತ್ತಾರೆ. ಆದರೆ ವಾಸ್ತವವಾಗಿದ್ದ ಸನ್ನಿವೇಶ ಬೇರೆ.

ಬೇರೆ ಬೇರೆ ಪ್ರದೇಶದ ಬೇರೆ ಬೇರೆ ಭಾಷೆಗಳನ್ನೆಲ್ಲ 'ಪ್ರಾಕೃತ' ಎಂಬ ಹೆಸರಿನಿಂದ ಕರೆದಿದ್ದರಿಂದ ಎಲ್ಲೆಡೆಯೂ ಅದು (ಜನಭಾಷೆಯಾಗಿ) ವ್ಯಾಪಿಸಿತ್ತು ಎಂಬ ಭ್ರಮೆ ಉಂಟಾಗಲು ಸಾಧ್ಯ. ಪ್ರಾಕೃತವೆಂದರೆ (ಆಯಾ ಪ್ರದೇಶದ) ಜನಭಾಷೆ ಎಂಬರ್ಥ ಕೊಟ್ಟುಕೊಂಡರೆ 'ಆಯಾಪ್ರದೇಶದಲ್ಲಿ ಅಲ್ಲಿಯ ಜನಭಾಷೆ ಬಳಕೆಯಲ್ಲಿತ್ತು' ಎಂಬ ಅರ್ಥವಿಲ್ಲದ ಹೇಳಿಕೆಯಾಗುತ್ತದೆ. ಇಲ್ಲಿ ಇನ್ನೂ ಒಂದು ಅರ್ಥವನ್ನೂ ತರ್ಕಿಸಬಹುದು; ಬ್ರಹ್ಮಗಿರಿ/ಅಪಘಾನಿಸ್ತಾನದಲ್ಲಿ ಅಶೋಕನ ಪ್ರಾಕೃತ ಶಾಸನವೊಂದಿದೆಯಾದರೆ, ಅದನ್ನು ಕೆತ್ತಿದವನು ಅಶೋಕನ ಪ್ರದೇಶದಿಂದ ಕಳುಹಲ್ಪಟ್ಟವನಾದರೆ ಶಾಸನದಲ್ಲಿ ಬಳಕೆಯಾದ ಪ್ರಾಕೃತವು ಇಲ್ಲಿಗೆ ವಲಸೆಬಂದ ಕೆಲವೇ ಕೆಲವರಿಗೆ (ಇತರರಿಗೆ ಅರ್ಥವಾಗದ) ಭಾಷೆಯಾಗಿರಬಹುದು. ಇಲ್ಲವೇ ಶಾಸನ ಕೊರೆದವನು ಸ್ಥಳಿಯನಾಗಿದ್ದರೆ ಇಲ್ಲಿಯ ಪ್ರಾಕೃತವು ಅಶೋಕನ ಪ್ರಾಕೃತವಲ್ಲದಿರಬಹುದು. ಇವನ್ನು ನಿರ್ಣಯಿಸಲು ಪ್ರಾಕೃತಗಳ ಒಳಭೇದಗಳ ವಿಶೇಷ ಅಧ್ಯಯನ ಹಾಗೂ ಇಲ್ಲಿಯ ಪ್ರಾಕೃತಶಾಸನಗಳಲ್ಲಿಯ ಹಾಗೂ ಕನ್ನಡದಲ್ಲಿಯ ಹೋಲಿಕೆಯ ಶಬ್ದಗಳಾವುವು, ಅವುಗಳ ಸಂಖ್ಯಾ ಪ್ರಮಾಣವೇನು ಎಂಬುದನ್ನು ಗಮನಿಸಿದ ನಂತರವೇ ಹೆಚ್ಚು ಖಚಿತವಾಗಿ ಹೇಳಲಾದೀತು.

ಕೃತಿಯ ಮುನ್ನುಡಿಯಲ್ಲಿ ಶ್ರೀ ತಿರುಮಲೇಶ್ ಅವರು, "ಪಾಲಿ, ಮಾಗಧಿ, ಅರ್ಧಮಾಗಧಿ ಮುಂತಾದವು ಮೂಲ ಸಂಸ್ಕೃತದಿಂದಲೇ ಮೂಡಿ ಬಂದಿರುವಂಥವು ಎನ್ನುವುದೇ ಹೆಚ್ಚು ಸೂಕ್ತ ಅನಿಸುತ್ತದೆ."(ಪು. XIV)ಎಂದಿದ್ದಾರೆ. ಇದಕ್ಕೆ ಆಧಾರವಾಗಿ ಸಂಸ್ಕೃತ ಶಬ್ದಗಳಿಂದ ಪ್ರಾಕೃತ ಶಬ್ದಗಳನ್ನು ನಿಷ್ಪನ್ನಗೊಳಿಸುವುದು ಸುಲಭ(ಉದಾ- ಅಗ್ನಿ>ಅಗ್ಗಿ, ಪುತ್ರ > ಪುತ್ತ) ಎಂಬ ಕಾರಣವನ್ನು ನೀಡಿದ್ದಾರೆ. ಈ ಮಾತಿನಲ್ಲಿ ತಕ್ಕಮಟ್ಟಿಗೆ ತಥ್ಯವಿದೆ. ಆದರೆ ಅವರು ಸಂಸ್ಕೃತವೆಂಬುದನ್ನು (ವೈದಿಕ ಹಾಗೂ ಲೌಕಿಕ ಭೇದವಿಲ್ಲದ) ಒಂದೇ ಎಂಬಂತೆ ಗ್ರಹಿಸಿದ್ದಾರೆಂದು ತೋರುತ್ತದೆ. ಇಲ್ಲಿ ಮೊದಲು ಸಂಸ್ಕೃತ ಅನಂತರ ಪ್ರಾಕೃತ ಎಂಬ ಗ್ರಹಿಕೆ ಇದ್ದಂತಿದೆ, ಆದರೆ ಸಂಸ್ಕೃತದ ಪೂರ್ವಾವಸ್ಥೆ ಹಾಗೂ ಆ ಕಾಲದಲ್ಲಿದ್ದ ಅದಕ್ಕೆ ಹತ್ತಿರವಾದ ಸಾಮಾಜಿಕ ಪ್ರಭೇದಗಳು ಹಾಗೂ ಇತರ ದೇಸಿ ಭಾಷೆಗಳ ಪಾತ್ರವೇನು ಎಂಬ ವಿಚಾರವಿದ್ದಂತಿಲ್ಲ. ಇದು ಸುಲಭವಾಗಿ ಉತ್ತರಿಸಲಾಗದ ಸಂಕೀರ್ಣಪ್ರಶ್ನೆ ಎಂಬುದೇನೋ ನಿಜ.

ಶೆಟ್ಟರ್ ಅವರೂ ಸಂಸ್ಕೃತವನ್ನು ಒಂದು ಅಖಂಡವಾದ ಭಾಷೆ ಎಂದೂ ಪ್ರಾಕೃತದಲ್ಲಿ ಹಲವು ಒಳಭೇದಗಳಿವೆ ಎಂದು ಅರಿವಿದ್ದೂ ಅವನ್ನು ಹೆಸರಿಸಿಯೂ, ಕನ್ನಡ, ತಮಿಳು ಮುಂತಾದ ಭಾಷೆಗಳೂ ಪ್ರಾಕೃತ ಸಮಾನ (ಎಂದರೆ ವಿಶಾಲಾರ್ಥದಲ್ಲಿ

ಜನಭಾಷೆ) ಎಂದು ಪರಿಗಣಿಸಿ ಅನೇಕ ಕಡೆ ಅದು ಒಂದು(ಅಥವಾ ಕೆಲವು) ನಿರ್ದಿಷ್ಟ ಭಾಷೆ ಎಂಬರ್ಥದಲ್ಲಿಯೂ ಗ್ರಹಿಸಿದ್ದಾರೆ. (ಶೆಟ್ಟರ್ ಅವರು 'ಛಂದಃ' ಎಂಬ ಶಬ್ದವನ್ನು ಬಳಸಿದ್ದಾರೆ. ಕೆಲವೆಡೆ 'ಛಂದಃ ಅಥವಾ ಸಂಸ್ಕೃತ ಎಂದೂ ಬಳಸಿದ್ದಾರೆ. ಪಾಣಿನಿ 'ಛಂದಃ' ಎಂಬ ಶಬ್ದವನ್ನು ಬಳಸಿದ್ದಾನೆ ಎಂದೂ ಹೇಳಿದ್ದಾರೆ. ತಿರುಮಲೇಶ್ ಅವರೂ ಇದನ್ನೇ ಪುನರುಚ್ಚರಿಸಿದ್ದಾರೆ. ಆದರೆ ನನ್ನ ತಿಳುವಳಿಕೆಯ ಮಿತಿಯಲ್ಲಿ ಪಾಣಿನಿ ಸಂಸ್ಕೃತ ಎಂಬರ್ಥದಲ್ಲಿ ಇದನ್ನು ಬಳಸಿಲ್ಲ. ನನ್ನ ವಿದ್ವಾಂಸ ಮಿತ್ರರ ಅಭಿಪ್ರಾಯವೂ ಅದೇ 'ಛಂದ' ಎಂಬ ಪದಕ್ಕೆ 'ಛದಿ' ಧಾತುಮೂಲದಿಂದ ಆಹ್ಲಾದ, ಆಚ್ಛಾದನ ಎಂಬರ್ಥಗಳಿವೆ. 'ವೇದ' ಎಂಬುದು ಇನ್ನೊಂದು ಪ್ರಸಿದ್ಧವಾದ ಅರ್ಥ. ಸಂಸ್ಕೃತ ಎಂಬರ್ಥದಲ್ಲಿ ಇದು ಎಲ್ಲಿ ಬಳಕೆಯಾಗಿದೆಯೋ ತಿಳಿಯದು. ಅರ್ಥಕೋಶಗಳಲ್ಲಿಯೂ ಈ ಅರ್ಥ ದೊರೆಯಲಿಲ್ಲ. ಏನಿದ್ದರೂ ಇಲ್ಲಿ ಇದೊಂದು ಗೌಣವಿಚಾರ.)

ಶೆಟ್ಟರ್ ಅವರ ಕೃತಿಯಲ್ಲಿ ಬಹುಚರ್ಚಾಸ್ಪದವಾದ ಹಾಗೂ ಸಮ್ಮತವಲ್ಲದ ಅನೇಕ ಹೇಳಿಕೆಗಳು-ಪೂರ್ವಗ್ರಹೀತ ಎನ್ನಬಹುದಾದ ಅಭಿಪ್ರಾಯಗಳು ವ್ಯಕ್ತವಾಗಿರುವುದು, ಮಿಶ್ರಭಾಷಾ ಬರೆಹವನ್ನೊಳಗೊಂಡ ಶಾಸನಗಳನ್ನು ಕುರಿತು ಹೇಳುವ ಪುಟಗಳಲ್ಲಿ. ಇದಕ್ಕೆ ಒಂದೆರಡು ಮುಖ್ಯ ಕಾರಣಗಳೆಂದರೆ-೧ ಪರಿಭಾಷೆಗಳನ್ನು ಸರಿಯಾಗಿ ನಿರ್ದಿಷ್ಟಾರ್ಥದಲ್ಲಿ ಬಳಸದೇ ಇರುವುದು. (ಅಥವಾ ಹೆಚ್ಚಿನ ಸಾಹಿತ್ಯ ವಿಮರ್ಶೆಗಳಲ್ಲಿ ಬಳಸುವಂತೆ ಬಳಸುವುದು) 'ಸಂಸ್ಕತ' 'ಪ್ರಾಕೃತ' ಪದಗಳ ಬಳಕೆಯ ಬಗೆಗೆ ಈ ಮೇಲೆಯೇ ಹೇಳಲಾಗಿದೆ. ಸಂಸ್ಕೃತ ಎಂಬ ಪರಿಚಿತ ಪದದ ಬದಲಾಗಿ ಅನವಶ್ಯಕವಾದ 'ಛಂದ', ಪದದ ಬಳಕೆಯ ಬಗ್ಗೆಯೂ ಮೇಲೆ ಹೇಳಿದೆ. ಸ್ವೀಕರಣ, ಒಂದು ಭಾಷೆಯ ಬರೆಹದೊಳಗೆ ಇನ್ನೊಂದರ ಪದ, ವಾಕ್ಯಾಂಗ, ವಾಕ್ಯಗುಚ್ಛಗಳು ತೂರಿ ಬರುವುದನ್ನೆಲ್ಲ ಒಟ್ಟಿಗೇ 'ಮಿಶ್ರಭಾಷೆ' ಎಂಬ ಒಂದೇ ಪದದಿಂದ ಸೂಚಿಸಲಾಗಿದೆ. (ಭಾಷಾಶಾಸ್ತ್ರದಲ್ಲಿ ಇವನ್ನು borrowing, codemixing, code switching ಎಂಬ ಬೇರೆ ಬೇರೆ ಪದಗಳಿಂದ ನಿರ್ದೇಶಿಸುವುದು ರೂಢಿ) ಈ ವಿಭಿನ್ನ ಪದಗಳು ಸೂಚಿಸುವ ಸಂದರ್ಭಗಳು ಕಾರಣವಾಗುವ ಸಾಮಾಜಿಕ ಸಂದರ್ಭಗಳು, ಬಳಸುವ ವ್ಯಕ್ತಿಗಳ ಹಿನ್ನೆಲೆ, ಉದ್ದೇಶಗಳು- ಇವೆಲ್ಲವೂ ಬೇರೆ ಬೇರೆ. ಪರಿಭಾಷೆಗಳ ನಿರ್ಮಾಣ ಹಾಗೂ ಅವುಗಳ ಬಳಕೆಯ ಸಮರ್ಪಕತೆ ಇಲ್ಲದಿದ್ದಲ್ಲಿ ತಾತ್ತ್ವಿಕ ಚರ್ಚೆ ವಸ್ತುನಿಷ್ಠವಾಗಿ, ಸೂಕ್ಷ್ಮವಾಗಿ ಮುಂದುವರಿಯಲು ಅಸಾಧ್ಯ ಎಂಬುದನ್ನಿಲ್ಲಿ ಹೇಳಬೇಕು. (ಪ್ರಾಸಂಗಿಕವಾಗಿ ಈ ಕೃತಿಯಲ್ಲಿ ಬಳಕೆಯಾದ ವಾಕ್ಯವೊಂದನ್ನು ಗಮನಿಸಿ: "ವೈದಿಕರ ಬಿಗಿಮುಷ್ಟಿಯಿಂದ ಹೊರಬರದಿದ್ದರೆ ಅದು (ಸಂಸ್ಕೃತ) ವಿಶ್ವದ ಉತ್ಕೃಷ್ಟ ಭಾಷೆಗಳಲ್ಲೊಂದೆಸುತ್ತಿತ್ತೇ?" (ಪು ೪೬) ಸಂಸ್ಕೃತವು ಉತ್ಕಷ್ಟ ಭಾಷೆಗಳಲ್ಲೊಂದು ಎಂಬುದು ಶೆಟ್ಟರ್ ಅವರ ಅಭಿಪ್ರಾಯ. ವಾಸ್ತವವಾಗಿ ಆಧುನಿಕ ಭಾಷಾತಜ್ಞರ ಅಭಿಪ್ರಾಯದಲ್ಲಿ ಉತ್ಕೃಷ್ಟ/ಕನಿಷ್ಠ

ಎಂಬ ಭೇದವುಳ್ಳ ಭಾಷೆಯೆಂಬುದಿಲ್ಲ. ಆದರೂ ಇದಕ್ಕೆ ಕಾರಣವಾಗಿರಬಹುದಾದ ಎರಡು ಸಂಗತಿಗಳನ್ನು ಹೆಸರಿಸಬಹುದು. ಒಂದು, ಸಂಸ್ಕೃತವು ವಿಪುಲ ಪ್ರಮಾಣದಲ್ಲಿ ಒಳಗೊಂಡಿರುವ ಧರ್ಮ, ಶಾಸ್ತ್ರ ವಿಷಯಕವಾದ ಸೂಕ್ಷ್ಮ ಚಿಂತನೆ, ವಿಶ್ಲೇಷಣೆಗಳು ಹಾಗೂ ಉತ್ತಮ ಸಾಹಿತ್ಯ ಕೃತಿಗಳು (ಬಹುಶಃ ಶೆಟ್ಟರ್ ಮನಸ್ಸಿನಲ್ಲಿಯೂ ಇದೇ ಇರಬಹುದು)- ಇವುಗಳಲ್ಲಿಯೂ ಚಿಂತನೆ, ವಿಶ್ಲೇಷಣೆಗಳ ಕಾಣಿಕೆಯೇ ಅತ್ಯಧಿಕವಾದುದು. ಎರಡು, ಸಂಸ್ಕೃತವು ಬಹುಮಟ್ಟಿಗೆ ಪರಿಪೂರ್ಣ ಭಾಷೆಯೆಂಬಂತೆ(well defined language) ನಿರೂಪಿತವಾಗಿರುವುದು ಹಾಗೂ ನಿಷ್ಠೆಯಿಂದ ಸಾವಿರಾರು ವರ್ಷಗಳ ಕಾಲದಿಂದ ಬಳಕೆಯಾದುದು. ಬಹುಶಃ ಸಾಮಾನ್ಯರಿಗೆ ದೊರೆತದ್ದರಿಂದಲೇ/ ಸಾಮಾನ್ಯರಿಂದಲೇ ಅದು ಉತ್ಕೃಷ್ಟವಾಗಿದೆ ಎಂಬುದು ಶೆಟ್ಟರ್ ಅವರ ಅಭಿಪ್ರಾಯವಿದ್ದಂತೆ ತೋರುತ್ತದೆ. ಆದರೆ ಇದು ತಪ್ಪು. ಬಳಕೆಯನ್ನು ಕುರಿತ ಕಡುನಿಷ್ಠೆಯೇ ಅದರ ಬಳಕೆ ವಿಕಾರಗೊಳ್ಳದೆ ಬರೆಹರೂಪದಲ್ಲಾದರೂ ಮುಂದುವರೆಯಲು ಸಾಧ್ಯ.)

ಸಂಸ್ಕೃತ-ಪ್ರಾಕೃತಗಳ ಬಳಕೆಯನ್ನು ಕುರಿತ ಮತ್ತೆ ಕೆಲವು ವಾಕ್ಯಗಳನ್ನು ಗಮನಿಸೋಣ:

೧. "ಬಹುಕಾಲ ಬರವಣಿಗೆಯನ್ನು ತಾತ್ಸಾರಿಸಿದ್ದ ವೈದಿಕರು ಸುಮಾರು ಕ್ರಿ.ಶ.ದ ಹೊರಳಿನಲ್ಲಿ ಅದರ ಅವಶ್ಯಕತೆಯನ್ನು ಮನಗಂಡಾಗ ತಮ್ಮ ಅಪೌರುಷೇಯ ಅಥವಾ ದೇವಭಾಷೆಗೆ ಸ್ವಂತಲಿಪಿ ಇಲ್ಲದಿರುವ ಕೊರತೆಯನ್ನು ಮನಗಂಡರು."(ಪು.೨೨)

೨. "ಪ್ರಾಕೃತವು ಒಂದು ಭಾಷೆಯೇ ಅಲ್ಲ, ಅದೊಂದು ಅನಾಗರಿಕರ ಗ್ರಾಮ್ಯಾಳಾಪ ಎಂದು ಹೀಗಳೆದು. ಈ ಅಪಭ್ರಂಶ, ಅಥವಾ ಅಪಭ್ರಷ್ಟ ನುಡಿಗಟ್ಟು, ಪೈಶಾಚಿಗಳ ಸಂಭಾಷಣೆಗೆ ಯೋಗ್ಯವೆನ್ನುತ್ತಾ ಬಂದಿದ್ದ ಸಂಸ್ಕೃತ ಆರಾಧಕ ವರ್ಗವೊಂದು ಆ ಭಾಷೆಯೊಡನೆ ಹೊಂದಾಣಿಕೆ ಮಾಡಿಕೊಳ್ಳಬೇಕಾದ ಸ್ಥಿತಿಯನ್ನೆದುರಿಸಿದಾಗ ತುಂಬಾ ಮುಜುಗರಕ್ಕೊಳಗಾಗಿರಬೇಕೆನಿಸುವುದು." (ಪು. ೨೨-೨೩)

೩. "ಅವರು (ವೈದಿಕರು) ಬ್ರಾಹ್ಮೀ ಲಿಪಿಯನ್ನು ಬೌದ್ಧ ಮತ್ತು ಜೈನರಿಂದ ಕಡಪಡೆದುಕೊಂಡು ಅವುಗಳ ಮೂಲಕ ವ್ಯವಹರಿಸತೊಡಗಿದರು. ಇದರ ಪ್ರಭಾವ ಮತ್ತು ಪರಿಣಾಮ ಕ್ರಿಶ. ಮೂರು-ನಾಲ್ಕನೆಯ ಶತಮಾನಗಳವರೆಗಿನ ವೈದಿಕ ಅಥವಾ ಹಿಂದೂಪರ ಬರಹಗಳಲ್ಲಿ ಕಂಡುಬಂದಿದ್ದು, ಇವು ಒಂದು ಪ್ರದೇಶಕ್ಕೆ ಅಥವಾ ವರ್ಗಕ್ಕೆ ಸೀಮಿತಗೊಳ್ಳದೆ ದೇಶಾದ್ಯಂತ ವಿಸ್ತರಿಸಿದ್ದನ್ನು ಕಾಣುವೆವು."(ಪು೨೩)

೩. "ದಕ್ಷಿಣಭಾರತದ ವೈದಿಕರು ಮೊದಲು ಬರೆದದ್ದು ಕ್ರಿಶ. ಮೂರನೇ ಶ.ದಲ್ಲಿ ಮತ್ತು ಪ್ರಾಕೃತದಲ್ಲಿ, ಬ್ರಾಹ್ಮೀಲಿಪಿಯಲ್ಲಿ. ಅನಿವಾರ್ಯ ಕಾರಣಗಳಿಂದಾಗಿ ಒಂದು ಶತಮಾನಕಾಲ ಇದರಲ್ಲಿ (ಪ್ರಾಕೃತದಲ್ಲಿ) ವ್ಯವಹರಿಸಿದರೂ ಈ ಕಾಲದುದ್ದಕ್ಕೂ ಅವರು ಸಂಸ್ಕೃತವನ್ನು ತಮ್ಮ ಬರಹಭಾಷೆಯನ್ನಾಗಿ ಮಾಡಿಕೊಳ್ಳುವ ತವಕದಲ್ಲಿದ್ದರೆನಿಸುವುದು.

ಒಂದೆರಡು ಶಾಸನಗಳನ್ನು ಪ್ರಾಕೃತದಲ್ಲಿ ಬರೆಸಿದ ನಂತರ ಈ ಭಾಷೆಯನ್ನು ಕೈಬಿಟ್ಟು ಸಂಸ್ಕೃತದಲ್ಲಿ ಬರೆಸಲಾರಂಭಿಸಿದ್ದು ಮತ್ತು ಮುಂದೆಂದೂ ಅವರು ಪ್ರಾಕೃತದಲ್ಲಿ ವ್ಯವಹರಿಸದಿದ್ದುದು ಇದಕ್ಕೆ ಸಮರ್ಥನೆ."

೪. ೩-೪ ನೇ ಶ.ದ ಹೊತ್ತಿಗೆ ಕರ್ನಾಟಕದಲ್ಲಿ, ಬೌದ್ಧರಲ್ಲಿ ಇದು (ಮಿಶ್ರ ಭಾಷಾ ಕಲ್ಬರಹ) ಜನಪ್ರಿಯವಾಯಿತು. "ಈ ದಾಖಲೆಗಳನ್ನು ಮೌನವಾಗಿಯೇ ಸ್ವೀಕರಿಸಿದ ಆರ್ಯಾವರ್ತದ ಅಗ್ರಜರು ಬದಲಾದ ವ್ಯವಸ್ಥೆಗೆ ಅವರೆಷ್ಟು ಹೊಂದಾಣಿಕೆ ಮಾಡಿಕೊಂಡಿದ್ದರೆಂಬುದನ್ನು ತೋರಿಸಿಕೊಡುವುದು"(ಪು. ೩೫)

೫. "ಬಹುತೇಕರು(ಮೀಮಾಂಸಾಕಾರರು) ಬದಲಾದ ಪರಿಸ್ಥಿತಿಗೆ ಹೊಂದಿಕೊಂಡು, ಪ್ರಾಕೃತದ ಬಗ್ಗೆ ತಾವು ಆಡಿದ ಕೊಂಕುನುಡಿಗಳನ್ನು ಮರೆತು, ವೈಚಾರಿಕ ಹಾಗೂ ಸೃಜನಾತ್ಮಕ ಸಂವೇದನೆಗೆ ಇದೂ ಒಂದು ಉತ್ತಮ ಮಾಧ್ಯಮವೆಂಬುದನ್ನು ಒಪ್ಪಿಕೊಳ್ಳುವಂತೆ ಮಾಡಿತೆಂದರ್ಥ."(ಪು.೪೪)

೬. (ಪೂರ್ಣವಾಗಿ ಚರ್ಚಿಸಿಲ್ಲದ) "ಎರಡು ಬಹುಮುಖ್ಯವಾದ ಪ್ರಶ್ನೆಗಳೆಂದರೆ;

೧.ಬೌದ್ಧರು ತಮ್ಮ ಆರಂಭಕಾಲದ ನಿಲುವನ್ನು ಬದಲಿಸಿ, ಸಂಸ್ಕೃತವನ್ನು ಸಂಕರಭಾಷೆಯನ್ನಾಗಿ ಪರಿವರ್ತಿಸಿ, ಸರ್ವ ಸಾಮಾನ್ಯರಿಗೆ ಅದನ್ನು ತಲುಪಿಸದಿದ್ದರೆ ಮೀಮಾಂಸಾಕಾರರ ಬಿಗಿಮುಷ್ಟಿಯಿಂದ ಸಂಸ್ಕೃತವು ಹೊರಬರುತ್ತಿತ್ತೆ? ೨. ವೈದಿಕರ ಬಿಗಿಮುಷ್ಟಿಯಿಂದ ಹೊರಬಾರದಿದ್ದರೆ ಅದು ವಿಶ್ವದ ಉತ್ಕೃಷ್ಟ ಭಾಷೆಗಳಲ್ಲೊಂದೆಸುತ್ತಿತ್ತೇ?"(ಪು. ೪೬)

ಮೇಲಿನ ವಾಕ್ಯಗಳನ್ನು ಕ್ರಮವಾಗಿ ನೋಡೋಣ. ವೇದಭಾಷೆಯನ್ನು ಆಡುಭಾಷೆಯನ್ನಾಗಿ ಹೊಂದಿರಬಹುದಾದ ವೈದಿಕರು ವೇದಗಳ ಪಾಠ-ಸ್ವರ ಶುದ್ಧಿಗಾಗಿ ಹಾಗೂ ಅನಂತರದಲ್ಲಿ ಅದು 'ಸಂಸ್ಕೃತ'ವಾಗಿ ಪರಿವರ್ತನೆಯಾದ ಮೇಲೆ ಶಾಸ್ತ್ರ-ಸ್ಮೃತಿ ಇತ್ಯಾದಿಗಳನ್ನು ಸಂಕ್ಷಿಪ್ತರೂಪದಲ್ಲಿ ಪದ್ಯ ರೂಪದಲ್ಲಿ, ಕಂಠಸ್ಥ ರೂಪದಲ್ಲಿ ಉಳಿಸಿಕೊಂಡು ಬಂದವರಾಗಿದ್ದಲ್ಲಿ ಬರೆಹದ ಅಗತ್ಯವೇ ಕಡಿಮೆಯಲ್ಲವೇ? ಮೇಲೆ ೩. ರಲ್ಲಿ "ಅವರು ಬ್ರಾಹ್ಮೀ ಲಿಪಿಯನ್ನು ಬೌದ್ಧ ಮತ್ತು ಜೈನರಿಂದ ಕಡಪಡೆದುಕೊಂಡು ಅವುಗಳ ಮೂಲಕ ವ್ಯವಹರಿಸತೊಡಗಿದರು." ಎಂಬಲ್ಲಿ ಇದು ಪ್ರಾಕೃತದ ಲಿಪಿ ಎಂಬರ್ಥವಿದೆ. ಕ್ರಿ.ಶ.ದ ಆಸುಪಾಸಿನಲ್ಲಿ ರಾಮಿಲ, ಬೋಧಾಯನ ಮುಂತಾದ ಅನೇಕರ ಹೆಸರು ಲಭ್ಯವಿದ್ದರೂ ಕೃತಿಗಳು ದೊರೆತಿಲ್ಲವೆಂಬ ಅಭಿಪ್ರಾಯವಿದೆ. ಇದು ತಪ್ಪಾದ ಅಭಿಪ್ರಾಯವಾಗಿರಲೂ ಬಹುದು. ಆಡಳಿತಾನುಕೂಲಕ್ಕಾಗಿ ಪ್ರಾಕೃತಕ್ಕಾಗಿಯೇ ಒಂದು ಲಿಪಿ ರೂಪಿತವಾಗಿರಬಹುದಾದರೂ ಅದು ಪ್ರಾಕೃತ ಲಿಪಿಯೆನ್ನುವುದು ರೂಢಿಯಬಲದಿಂದ- ಅದರಲ್ಲಿ ಪ್ರಾಕೃತ ಭಾಷೆ ಮೊದಲು ಸಿಕ್ಕಿದೆ ಎಂಬ ಕಾರಣದಿಂದ ಅಷ್ಟೇ. ವಾಸ್ತವವಾಗಿ ಭಾಷೆಗೂ ಲಿಪಿಗೂ ನಡುವೆ ನೇರ ಸಂಬಂಧವಿಲ್ಲ. ಇದೊಂದು ಮುಖ್ಯವಾದ ವಿಚಾರವೂ ಅಲ್ಲ.

ಮೇಲೆ ೩ನೇ ವಾಕ್ಯದಲ್ಲಿಯ ಅಭಿಪ್ರಾಯವನ್ನು ಚರ್ಚಿಸಲು ಶಾಸನಗಳಿಗೆ ಸಂಬಂಧಿಸಿದ ವಿಷಯ, ಹಾಕಿಸಿದವರು ಯಾರು ಇತ್ಯಾದಿ ವಿವರಗಳಿಲ್ಲದೇ ಸಾಧ್ಯವಾಗದು. ೩ನೇ ಶ.ಕ್ಕಿಂತ ಹಿಂದೆಯೇ ಸಂಸ್ಕೃತವು ಪ್ರತಿಷ್ಠಿತ ಭಾಷೆಯಾಗಿ ಬೆಳೆದದ್ದರಿಂದ ಪ್ರಾಕೃತವು ಆಡುಭಾಷೆಯಾಗಿದ್ದರೂ ಶಾಸನಕ್ಕಾಗಿ ಸಂಸ್ಕೃತವನ್ನೇ (ಅಪವಾದವನ್ನುಳಿದು) ಆರಿಸಿಕೊಂಡಿದ್ದರೆ ಆಶ್ಚರ್ಯವೇನಿಲ್ಲ. ೪ರಲ್ಲಿ 'ಮೌನವಾಗಿಯೇ ಸ್ವೀಕರಿಸಿದ' ಎಂಬುದರ ಅರ್ಥವೇನೋ ತಿಳಿಯದು. 'ಪ್ರತಿಭಟಿಸಲಿಲ್ಲ' ಎಂದರ್ಥವೇ? ಮನೆಯ ಭಾಷೆ ಸಂಸ್ಕೃತವಾಗಿರದೆ ಪ್ರಾಕೃತವೋ ಅಥವಾ ಆ ವೇಳೆಗೆ ರೂಪಿತವಾಗಿದ್ದ ಕನ್ನಡ ಮುಂತಾದ ದೇಸೀ ಭಾಷೆಯಾಗಿದ್ದಲ್ಲಿ ಶಾಸನಭಾಷೆ ಸಂಸ್ಕೃತವೇ ಆಗಿರಬೇಕು ಎಂಬ ಅಭಿಪ್ರಾಯವಿತ್ತು ಎಂದು ಅರ್ಥೈಸಬೇಕೆ? ಆದ್ದರಿಂದ "ಬದಲಾದ ವ್ಯವಸ್ಥೆಗೆ ಹೊಂದಾಣಿಕೆ ಮಾಡಿಕೊಂಡಿದ್ದರೆಂಬುದನ್ನು ತೋರಿಸಿಕೊಡುವುದು" ಎಂದರೇನು?

ಮೇಲೆ೧. ಹಾಗೂ ೫ರಲ್ಲಿ ಪ್ರಾಕೃತವನ್ನು ಕುರಿತಾಗಿ ಕೀಳಭಿಪ್ರಾಯವಿತ್ತೆಂದು ಹೇಳಲಾಗಿದೆ. ಕ್ರಿ.ಶ. ಪ್ರಾರಂಭದ ಹೊತ್ತಿನಲ್ಲಿ ಪ್ರಾಕೃತಗಳಿಗೆ ಇನ್ನೂ ವ್ಯಾಕರಣಗಳು ಸಿದ್ಧವಾಗದೇ, ಅದು ಶಿಷ್ಟಭಾಷೆಯೆನಿಸದೇ ಇರುವ ಕಾಲದಲ್ಲಿ ಅದರ ಬಗೆಗೆ ಇಂಥ ಅಭಿಪ್ರಾಯವಿರುವುದು ತೀರ ನಿರೀಕ್ಷಿತವೇ. ಕೇವಲ ಭಾಷೆ ಮಾತ್ರವಲ್ಲ, ಉಡಿಗೆ-ತೊಡಿಗೆ, ನಡವಳಿಕೆ ಇತ್ಯಾದಿ ವಿಷಯವಾಗಿಯೂ ಶಿಷ್ಟ-ಅಶಿಷ್ಟ ವ್ಯತ್ಯಾಸವನ್ನನುಸರಿಸಿ ಇಂಥ ಅಭಿಪ್ರಾಯಗಳು ಎಲ್ಲೆಡೆಗಳಲ್ಲಿಯೂ ಇರುತ್ತವೆ. ಉದಾಹರಣೆಗೆ, ಈ ಲೇಖಕನ ಸಾಮಾಜಿಕ ಭಾಷಾಪ್ರಭೇದವನ್ನು ಕುರಿತು ಇದೇ ಸಮಾಜದ ಅಲ್ಪವಿದ್ಯಾವಂತ ವ್ಯಕ್ತಿಯೊಬ್ಬ ಈ ಲೇಖಕನ ಜೊತೆಗೆ ಹೇಳಿದ ಮಾತು ಸುಮಾರಾಗಿ ಹೀಗಿದೆ. ಶಿಷ್ಟ ಕನ್ನಡದೊಂದಿಗೆ ಹೋಲಿಸಿ "ನಮ್ದೂ ಒಂದು ಭಾಷೇನಾ? ಅದಕ್ಕೆ ವ್ಯಾಕರಣ ಇಲ್ಲ, ಏನೂ ಇಲ್ಲ. ಒಂದು ಸುಡುಗಾಡು ಭಾಷೆ." ತನ್ನ ಭಾಷೆಯ ಬಗೆಗೇ ಆತನಿಗೆ ಕೀಳರಿಮೆಯಿದೆ. ಮೇಲ್ವರ್ಗದ ವ್ಯಕ್ತಿಗೆ ತನ್ನ ಬಗೆಗೆ ಮೇಲರಿಮೆಯಿರುತ್ತದೆ. ಇದು ನಿರೀಕ್ಷಿತವಾದ ಸಾಮಾನ್ಯ ಸಂಗತಿಯೇ (ಇದೇ ಲೇಖಕನ ಕೃತಿಯೊಂದರಲ್ಲಿ ಇದರ ಉಲ್ಲೇಖವಿದೆ)

ಈ ಮೇಲೆ ಪ್ರಾರಂಭದಲ್ಲಿಯೇ ಶೆಟ್ಟರ್ ಅವರು ಸಂಖ್ಯಾ ಪ್ರಮಾಣವನ್ನು ಬಳಸಿಕೊಳ್ಳುತ್ತಾರೆ ಎಂಬರ್ಥದ ಮಾತೊಂದನ್ನು ಹೇಳಿದೆ. ಇದರಲ್ಲಿ ತಪ್ಪೇನೂ ಇಲ್ಲ. ಆದರೆ ಒಂದು ವಿಷಯವನ್ನು ಲಕ್ಷಿಸಬೇಕಾದುದು ಅವಶ್ಯಕ. ಗಮನಿಸಬೇಕಾದ ಸಂಖ್ಯಾಪ್ರಮಾಣವು ಸಾಕಷ್ಟು ದೊಡ್ಡದಿರಬೇಕು. ಅವುಗಳ ಎಂಗಣೆ, ಪ್ರಮಾಣಗಳು ಸಂಬಂಧಿತ ಎಲ್ಲ ವಿಷಯಗಳನ್ನೂ ಆಧರಿಸಿರಬೇಕು. ಹಾಗಲ್ಲದಿದ್ದಲ್ಲಿ ತಪ್ಪು ನಿರ್ಣಯಗಳಿಗೆ ಎಡೆಯಾಗಬಹುದು. ಉದಾಹರಣೆಗೆ, ಇದೇ ಕೃತಿಯ ಪು. ೫೫ರಲ್ಲಿ ಕವಿರಾಜ ಮಾರ್ಗದಲ್ಲಿ ಕನ್ನಡ, ಸಂಸ್ಕೃತ/ಸಕ್ಕದ, ಪಾಗದ/ ಪ್ರಾಕೃತ ಪದಗಳು ಬಳಕೆಯಾದ ಸಂಖ್ಯಾವಿವರವನ್ನು ನೀಡುತ್ತಾ (ಕ್ರಮವಾಗಿ ೧೭,೧೧, ೦೧) "ಕನ್ನಡದ

ಚರ್ಚೆ ಪ್ರಧಾನ, ಸಂಸ್ಕೃತದ ಚರ್ಚೆ ಅನಿವಾರ್ಯ, ಪ್ರಾಕೃತದ ಚರ್ಚೆ ಅನಗತ್ಯ ಎಂಬ ಭಾವನೆ ಇದ್ದಂತೆ ತೋರುತ್ತದೆ. ಮಾರ್ಗಕಾರನು ಜೈನವೆಂಬ ಹಿನ್ನೆಲೆಯಲ್ಲಿ ಇದು ಗೊಂದಲಕ್ಕೆ ಎಡೆಮಾಡಿಕೊಡುತ್ತದೆ" ಎನ್ನಲಾಗಿದೆ. ಈ ಅಭಿಪ್ರಾಯ ತಕ್ಕಮಟ್ಟಿಗೆ ಸಮರ್ಪಕವಾಗಿದ್ದರೂ ಇಲ್ಲಿಯ ಸಂಖ್ಯಾವಿವರ ಇದನ್ನು ಸಮರ್ಥಿಸಲು ಸಾಲದು.

ಮಿಶ್ರಾಭಾಷಾ ಶಾಸನಗಳನ್ನು ಕುರಿತು ಈ ಹಿಂದೆಯೇ ಒಂದಿಷ್ಟು ಹೇಳಿದೆ. ಈ ವಿಷಯವನ್ನು ಚರ್ಚಿಸುವ ಕಡೆ ಶಾಸನ, ತಾಮ್ರಶಾಸನ, ಕಲ್ಬರೆಹ ಇತ್ಯಾದಿಗಳನ್ನು ಹೇಳಿದೆ. ಕೆಲವೆಡೆ 'ಶಾಸನ'ವೆಂಬುದು ತಾಮ್ರಶಾಸನವೋ ಕಲ್ಬರೆಹವೋ ತಿಳಿಯದು. ಈ ವಿಂಗಡಣೆ ತೀರ ಅವಶ್ಯಕ. ಇವು ಅನೇಕ ಭಾಷಾ ಸಂಬಂಧವಾದ ವ್ಯತ್ಯಾಸಗಳಿಗೂ ಕಾರಣವಾಗುತ್ತವೆ. ಕಲ್ಬರೆಹ ಹಾಗೂ ತಾಮ್ರಪಟಗಳ ಬರೆಹವನ್ನು ಕೆತ್ತುವವರು ಸಾಮಾಜಿಕವಾಗಿ ಸಾಮಾನ್ಯವಾಗಿ ವಿಭಿನ್ನ ಹಿನ್ನೆಲೆಯುಳ್ಳವರು. ಕಲ್ಬರೆಹ ಸಾಪೇಕ್ಷವಾಗಿ ಹೆಚ್ಚಿನ ಸಂದರ್ಭಗಳಲ್ಲಿ ಸ್ಥಳೀಯ ಭಾಷೆಯನ್ನು ಪ್ರತಿಬಿಂಬಿಸಬಹುದು ಅಥವಾ ಅದರ ಪ್ರಭಾವವನ್ನು ಹೆಚ್ಚಾಗಿ ತೋರಿಸುವ ಸಾಧ್ಯತೆ ಇದೆ. ಕಲ್ಬರೆಹಗಳು ಸಾಪೇಕ್ಷವಾಗಿ ಹೆಚ್ಚು ಲಿಪಿ ದೋಷಗಳನ್ನು ಹೊಂದಿರುವ ಸಾಧ್ಯತೆ ಇದೆ. ಇವುಗಳಲ್ಲಿ ಬಳಕೆಯಾದ ಮಿಶ್ರಭಾಷೆಯ ಸ್ವರೂಪಗಳೂ ಭಿನ್ನವಾಗಿರಬಹುದು. ಶಾಸನಗಳ ವಿಷಯವೂ ಅವು ಯಾರನ್ನು ಕುರಿತದ್ದು ಎಂಬುದೂ ಭಾಷಾಮಿಶ್ರಣದ ಸ್ವರೂಪವನ್ನು ನಿರ್ಧರಿಸುವ ಸಂಗತಿಯಾಗಬಹುದು. ಆದರೆ ಶಾಸನಗಳ ಪರಿಚಯವಿಲ್ಲದೇ ಊಹೆಯಿಂದಲೇ ಈ ಮಾತನ್ನು ಹೇಳುತ್ತಿದ್ದೇನೆ. ವಿಂಗಡಿಸಿ ನೋಡಿಯೇ ಇವುಗಳ ಸತ್ಯಾಸತ್ಯತೆಯನ್ನು ಖಚಿತಪಡಿಸಿಕೊಳ್ಳಬೇಕಷ್ಟೆ ಅನ್ಯಮೂಲದ ಪದಗಳನ್ನು 'ಸ್ವೀಕೃತ' ಹಾಗೂ 'ಮಿಶ್ರಿತ' ಎಂದು ಪ್ರತ್ಯೇಕಿಸಿಕೊಳ್ಳಬೇಕು. ಉದಾಹರಣೆಗೆ. "ಬಿಲ್ ತಗೊಂಡು ಕ್ಯಾಷ್ ಎಣಿಸಿಕೊಳ್ಳಿ" ಎಂಬಂತಹ ಕನ್ನಡ ವಾಕ್ಯವೊಂದರಲ್ಲಿ ಸದ್ಯದ ಮಟ್ಟಿಗೆ ಬಿಲ್ ಎಂಬುದನ್ನು ಸ್ವೀಕತ ಪದವಾಗಿಯೂ ಕ್ಯಾಷ್ ಎಂಬುದನ್ನು (ಇಂಗ್ಲಿಷಿನ) ಮಿಶ್ರಿತ ಪದವೆಂದೂ ಗ್ರಹಿಸಬಹುದು. ಆದರೆ ಇದು ಅಷ್ಟು ಸುಲಭವಾಗಿ ನಿರ್ಣಯಿಸಬಹುದಾದ ವಿಷಯವಲ್ಲ. ಆದರೆ 'ಬಿಲ್' ಎಂಬುದರ ಬದಲಾಗಿ 'ಬಿಲ್ಲು' ಎಂದಿದ್ದಲ್ಲಿ ಅದನ್ನು ಸ್ವೀಕೃತ ಪದ(ಕನ್ನಡ ಪದ) ವೆಂದು ಧೈರ್ಯವಾಗಿ ಹೇಳಬಹುದು. ಸಂಕ್ಷಿಪ್ತವಾಗಿ, ತದ್ಭವಗಳನ್ನೆಲ್ಲ ಸ್ವೀಕೃತಪದವಾಗಿ ದೇಸಿ ಪದವೆಂಬಂತೆ ಪರಿಗಣಿಸಬಹುದು. ಶಾಸನಗಳ ಭಾಷೆಯಂತಹ ಹಿಂದಿನ ಕಾಲದ ಭಾಷೆಯ ವಿಷಯದಲ್ಲಿ ಇವನ್ನು ನಿರ್ಧರಿಸುವುದು ಇನ್ನಷ್ಟು ತೊಡಕಿನ ವಿಷಯವೇ. ಆದರೆ ಇದನ್ನು ನಿರ್ಧರಿಸದೇ ಭಾಷೆಗಳ ಬಳಕೆಗೆ ಸಂಬಂಧಿಸಿದಂತೆ ಹೇಳುವ ಮಾತುಗಳು ಅಷ್ಟರಮಟ್ಟಿಗೆ ಕೆಳುವಾಗುತ್ತವೆ. ಅಲ್ಲದೇ ಭಾಷೆಗಳ ಬಳಕೆಯ ವಿಷಯದಲ್ಲಿ ಆಗುವ ವ್ಯತ್ಯಾಸಗಳಿಗೂ ಉಪಲಬ್ಧ ಶಾಸನಗಳ (ಸಂಖ್ಯೆಯ) ಭಾಷೆಗೂ ನೇರವಾದ ಸಂಬಂಧವನ್ನು ಕಲ್ಪಿಸುವುದು ಕಷ್ಟ.

ಮಿಶ್ರಭಾಷಾ ಪ್ರಭೇದವು ಮೊದಲು ಉತ್ತರದ ಮಥುರಾದ ಕಲ್ಬರೆಹಗಳಲ್ಲಿ

ಕಾಣಿಸಿಕೊಂಡು ಕಾಲಕ್ರಮೇಣ ಗುಜರಾತ್, ಮಹಾರಾಷ್ಟ್ರ, ಮಧ್ಯಪ್ರದೇಶ, ದಖ್ಖಣದ ನಾಗಾರ್ಜುನಕೊಂಡ (ಆಂಧ್ರ) ಮತ್ತು ಕರ್ನಾಟಕದ ಕೆಲ ಕೇಂದ್ರಗಳನ್ನು ತಲುಪಿತೆಂದೂ "ಈ ವಿಶಿಷ್ಟ ಬಗೆಯ ಬರಹವು ತನ್ನ ತನವನ್ನು ಗಳಿಸಿಕೊಂಡು, ಸಾಂಪ್ರದಾಯಿಕ ಸಂಸ್ಕೃತ ಬರಹಗಳಂತೆ ಪ್ರಚಾರ ಪಡೆದುಕೊಂಡಿತಲ್ಲದೆ, ಪ್ರಾಕೃತ ಕಲ್ಬರಹದೊಡನೆ ಸ್ಪರ್ಧಿಸಿತು" ..... "ಬೌದ್ಧರಡಿ ಈ ಭಾಷಾ ಪ್ರಭೇದವು ಎಷ್ಟು ಜನಪ್ರಿಯವಾಯಿತೆಂದರೆ, ಪಾಣಿನಿಯ ನಿಯಮಗಳಿಗೆ ನಿಷ್ಠರಾಗಿದ್ದ ಕೆಲವು ವೈದಿಕರೂ ಇದೇ ಭಾಷೆಯಲ್ಲಿ ವ್ಯವಹರಿಸುವಂತೆ ಮಾಡಿತು" (ಪು. ೩೫) ಎಂದು ಮಿಶ್ರಭಾಷಾ ಬರೆಹವನ್ನು ಕುರಿತಂತೆ ಒಂದೆಡೆ ಹೇಳಲಾಗಿದೆ. ಆದರೆ ಶಾಸನಗಳಲ್ಲಿ ಕಾಣಿಸಿಕೊಂಡ ಮಿಶ್ರಭಾಷೆ ಎಂಬುದು (ಇದರ ಸ್ವರೂಪವೂ ಸ್ಪಷ್ಟವಾಗಿ ವರ್ಣಿತವಾಗಿಲ್ಲವೆಂದು ಈ ಹಿಂದೆಯೇ ಹೇಳಿದೆ.) ಉದ್ದೇಶಪೂರ್ವಕವಾಗಿ ಒಂದು ಶೈಲಿಯಾಗಿ ರೂಪುಗೊಂಡದ್ದಲ್ಲ; ಭಾಷೆಯ ಸ್ಥಾನಮಾನ, ಸಾಮಾಜಿಕ ಸಂದರ್ಭ ಹಾಗೂ ಬಳಸುವ ವ್ಯಕ್ತಿಗಳ ಹಿನ್ನೆಲೆ ಇತ್ಯಾದಿಗಳನ್ನನುಸರಿಸಿ ಅಲ್ಲಲ್ಲಿಯ ಅವಶ್ಯಕತೆಗಳಿಗೆ ಅನ್ವಯಿಸಿ ಸಿದ್ಧವಾದದ್ದು. ಆದ್ದರಿಂದ ಇದು ಉತ್ತರದಿಂದ ದಕ್ಷಿಣದ ಕಡೆಗೆ ವ್ಯಾಪಿಸಿದ್ದು ಎಂಬ ಮಾತಿಗೆ ಅರ್ಥವಿರುವಂತೆ ತೋರದು. ವಾಸ್ತವದಲ್ಲಿ ಹಾಗೆ ತೋರುತ್ತಿದ್ದರೂ ಅದು ಆಕಸ್ಮಿಕವಷ್ಟೆ. (ಮಲೆಯಾಳಂ ಭಾಷೆಗೆ ಸಂಬಂಧಿಸಿದಂತೆ ಮಲೆಯಾಳಂ- ಸಂಸ್ಕೃತ ಮಿಶ್ರಣದ ಶೈಲಿಯೊಂದು 'ಮಣಿಪ್ರವಾಳಂ' ಎಂಬ ಹೆಸರಿನಲ್ಲಿ ೧೭ನೇ ಶ.ದ ಆಸುಪಾಸಿನಲ್ಲಿ ರೂಪುಗೊಂಡಿತು. ಕ್ರಮೇಣ ಮರೆಯಾಯಿತು. ಇದನ್ನೇ ವಿಶೇಷವಾಗಿ ಬಳಸಿದ ಒಬ್ಬರಿಗೆ 'ಮಣಿಪ್ರವಾಳಂ ಸುಬ್ಬಾಶಾಸ್ತ್ರಿ' ಎಂಬ ಬಿರುದೂ ಇದ್ದಂತೆ ತಿಳಿದು ಬಂದಿದೆ. ಇದು ಒಂದುಶೈಲಿಯಾಗಿಯೇ ರೂಪುಗೊಂಡದ್ದು.) ಭಾಷಾ ಮಿಶ್ರಣವನ್ನು ಕುರಿತು ಹೇಳುವ ಸಂದರ್ಭದಲ್ಲಿಯೇ ಶೆಟ್ಟರ್ ಅವರು ರಾಜಶೇಖರನ ಕಾವ್ಯಮೀಮಾಂಸೆಯಲ್ಲಿ ವರದಿಯಾಗಿ ಹೇಳಲಾದ ಕೆಲವು ಸಂಗತಿಗಳ ಕಡೆಗೆ ಗಮನ ಸೆಳೆದಿದ್ದಾರೆ. ಕಾವ್ಯಮೀಮಾಂಸೆಯ ಹತ್ತನೇ ಅಧ್ಯಾಯದಲ್ಲಿರುವ ಮಾತುಗಳನ್ನು ಕುತೂಹಲಕ್ಕಾಗಿ ಸ್ವಲ್ಪ ವಿವರದಲ್ಲಿಯೇ ಗಮನಿಸೋಣ:

.....ಪರಿಚಾರಕ ವರ್ಗದವರು ಅಪಭ್ರಂಶ ಭಾಷೆಯನ್ನು ಆಡುವವರೂ ಪರಿಚಾರಿಕೆಯರು ಮಾಗಧೀ ಭಾಷೆಯನ್ನಾಡುವವರೂ ಅಂತಃ ಪುರದವರು ಪ್ರಾಕೃತ ಮತ್ತು ಸಂಸ್ಕೃತ ಭಾಷೆಗಳನ್ನು ಬಲ್ಲವರೂ ಸ್ನೇಹಿತರಲ್ಲಿ ಎಲ್ಲ ಭಾಷೆಗಳನ್ನು ಅಂತವರೂ ಇರಬೇಕು. ....ಒಡೆಯರು ಹೆಗೆ ಮಾಡುವನೋ ಮಿಕ್ಕವರು ಹಾಗೆಯೇ ನಡೆಯುತ್ತಾರೆ. ಈ ವಿಷಯದಲ್ಲಿ ಕೆಲವು ದಂತಕಥೆಗಳಿವೆ:- ಮಗಧರಾಜ್ಯದಲ್ಲಿ ಶಿಶುನಾಗನೆಂಬ ರಾಜನು ತನ್ನ ಅಂತಃಪುರದಲ್ಲಿ ಉಚ್ಚಾರಣೆಗೆ ಕಷ್ಟವಾದ ಎಂಟುವರ್ಣಗಳನ್ನು (ಟ,ಠ,ಡ,ಢ,ಶ,ಷ, ಹ,ಕ್ಷ) ಯಾರೂ ಬಳಸಲಾಗದೆಂದು ಕಟ್ಟು ಮಾಡಿದ್ದನಂತೆ. ಶೂರಸೇನ ರಾಜ್ಯದಲ್ಲಿ ಕುವಿಂದನೆಂಬ ರಾಜನು ಅಂತಃಪುರದಲ್ಲಿ ಪರುಷ ಹಾಗೂ

ಸಂಯುಕ್ತಾಕ್ಷರಗಳನ್ನು ನಿಷೇಧಿಸಿದ್ದನಂತೆ. ಕುಂತಳದ ಸಾತವಾಹನನು ಅಂತಃಪುರದಲ್ಲಿ ಪ್ರಾಕೃತವೊಂದನ್ನೇ ಬಳಸಬೇಕೆಂಬ ನಿಯಮ ಮಾಡಿದ್ದನಂತೆ. ಉಜ್ಜನಿಯ ಸಾಹಸಾಂಕನ ಅಂತಃ ಪುರದವರೆಲ್ಲ ಸಂಸ್ಕೃತವನ್ನು ಮಾತ್ರ ಬಳಸುತ್ತಿದ್ದರಂತೆ. ....... ಗೌಡ ಮುಂತಾದ ದೇಶಗಳಲ್ಲಿ ಸಂಸ್ಕೃತದ ಬಳಕೆ ಹೆಚ್ಚು. ಲಾಟದಲ್ಲಿ ಪ್ರಾಕೃತದಲ್ಲಿ ಮರುಭೂಮಿ, ಭಾದಾಂಕ ಇತ್ಯಾದಿಗಳಲ್ಲಿ ಅಪಭ್ರಂಶ ಜನಪ್ರಿಯ, ಅವಂತೀ, ದಶಪುರ ಇತ್ಯಾದಿಗಳಲ್ಲಿ ಪೈಶಾಚೀ ಬಳಕೆ. ಲೋಕಾಭಿರುಚಿ ತಿಳಿದು ತನ್ನ ರುಚಿಯನ್ನು ಯಾರು ಮೆಚ್ಚುತ್ತಾರೆ ಎಂದರಿತು, ಜನಕ್ಕೆ ಬೇಡವಾದುದನ್ನು ಬಿಡಬೇಕು . ಬೇಕಾದುದನ್ನು ಹೆಚ್ಚಿಸಬೇಕು.

(ಪು. ೧೦೯)

(ಮೇಲಿನ ಪುಟ ಸಂಖ್ಯೆ ಡಾ.ಕೆ. ಕೃಷ್ಣಮೂರ್ತಿಯವರ ಕನ್ನಡಾನುವಾದ ಕೃತಿಯದು.)

ಮೇಲಿನ ಮಾತುಗಳಲ್ಲಿ ಕೆಲವು ಅಸಂಭವನೀಯ ಸಂಗತಿಯನ್ನು ಹೇಳುತ್ತವೆ ಮತ್ತೆ ಕೆಲವು ಸಂಭವನೀಯ ವಾಗಿರಬಹುದು.

ಸಂಸ್ಕೃತ ಪ್ರಾಕೃತ ಭಾಷಾಮಿಶ್ರಣ ಕುರಿತಾಗಿ ಹೇಳಿದ ನಂತರ ಶೆಟ್ಟರ್ ಅವರು ಹೌದೆನ್ನಿಸುವ ತಮ್ಮ ನಿಲುವನ್ನು ಹೀಗೆ ವ್ಯಕ್ತಪಡಿಸುತ್ತಾರೆ; "ಇದೇನೇ ಇದ್ದರೂ ಸಂಸ್ಕೃತ-ಪ್ರಾಕೃತ ಭಾಷಾ ಸಂಬಂಧವು ಹೊರತೋರಿಕೆಗೆ ಕಾಣುವಷ್ಟು ಸರಳವಾಗಿರಲಿಲ್ಲ." (ಪು.೩೫) ಈ ಮಾತು ಪ್ರಾಕೃತದ ಒಳಭೇದಗಳ ನಡುವಿನ ಸಂಬಂಧವನ್ನು ಕುರಿತಾಗಿಯೂ ನಿಜವಾದದ್ದು

# ಶತಕಗಳು ಮತ್ತು ಹಾಡುಗಳಲ್ಲಿ ಕಂಡುಬರುವ ರತ್ನಾಕರನ ಜೀವನದರ್ಶನದ ಸ್ವರೂಪ

ಡಾ. ಆರ್. ಲಕ್ಷ್ಮೀನಾರಾಯಣ

ಶತಕ ಸಾಹಿತ್ಯ ಪ್ರಕಾರ ಸಾಮಾನ್ಯವಾಗಿ ಎಲ್ಲ ಭಾರತೀಯ ಭಾಷೆಗಳಲ್ಲಿ ಕಂಡುಬರುತ್ತದೆ. ಕನ್ನಡದಲ್ಲೂ ಅನೇಕ ಶತಕಗಳು ಲಭ್ಯವಿರುವುವಾದರೂ ಬಹಳ ಜನಪ್ರಿಯವಾಗಿರುವ ಶತಕಗಳೆಂದರೆ ಸೋಮೇಶ್ವರ ಶತಕ, ಹರಿಹರನ ಪಂಪಾಶತಕ, ರಕ್ಷಾಶತಕ ಮತ್ತು 'ಶತಕತ್ರಯ' ವೆಂದು ಹೆಸರಾದ ರತ್ನಾಕರ ವರ್ಣಿಯ ರತ್ನಾಕರಾಧೀಶ್ವರ ಶತಕ, ಅಪರಾಜಿತೇಶ್ವರ ಶತಕ ಹಾಗೂ ತ್ರಿಲೋಕಶತಕಗಳೆಂಬ ಮೂರು ಶತಕಗಳು. ಆಧ್ಯಾತ್ಮ ತತ್ವ, ಜೀವನ ನೀತಿ, ಭಕ್ತಿ ಮತ್ತು ವೈರಾಗ್ಯಗಳು ಸಾಮಾನ್ಯವಾಗಿ ಶತಕಗಳ ವಸ್ತು. ರತ್ನಾಕರನ ಶತಕಗಳು ಕೂಡ ಇದಕ್ಕೆ ಅಪವಾದವೇನಲ್ಲ.

ಇಹಲೋಕದ ಭೋಗಜೀವನವನ್ನು ನಿರಾಕರಿಸಿ ವೈರಾಗ್ಯವನ್ನು ಅಂಗೀಕರಿಸಿ ತಪಸ್ಸಾದನೆಯಲ್ಲಿ ಆತ್ಮಚಿಂತನ ಮಾಡಿ ಮುಕ್ತರಾದವರ ಜೀವನಗಾಥೆಯನ್ನು ತೀರ್ಥಂಕರ ಪುರಾಣಗಳು ಕನ್ನಡದಲ್ಲಿ ಇನ್ನಿಲ್ಲದಂತೆ ಕಂಡರಿಸಿವೆ.

ರತ್ನಾಕರನಿಗೆ–

**"ಕವಿತಾಶಕ್ತಿಯೆ ಕಲ್ಪವಲ್ಲಿಯದನಾ ಸದ್ಧರ್ಮಮೆಂಬ ಮೇ**

**ರುವಿನೊಳ್ಬಿತ್ತಿ ಮನೋವಿಶುದ್ಧಿ ಬಲವೀರ್ಯಂ ಬುದ್ಧಿಸಾಫಲ್ಯಮಾ**

**ಕವಿಯುಂ ಸರ್ವರುಮುಣ್ಬರಾ ಫಲಮನ್"**– ಎಂದು ಚೆನ್ನಾಗಿ ಗೊತ್ತಿದೆ. ಆದರೂ– **"ಇತ್ತಲ್ಮಾಣ್ದು ಮಿಥ್ಯಾತ್ವಮಾ**

**ರವದೊಳ್ಬಿತ್ತಿ ಬಳಲ್ದರೇಕೆಯಕಟಾ!"** ಎಂದು ವಿಸ್ಮಯ ಪಡುತ್ತಾನೆ.

ಈ ಪದ್ಯದಲ್ಲಿ ಹೇಳಿರುವ ಪ್ರಕಾರವೇ ರತ್ನಾಕರ ತನ್ನ ಮಹಾಕಾವ್ಯ ಭರತೇಶ ವೈಭವ, ಮೂರು ಶತಕಗಳು ಮತ್ತು ಹಾಡುಗಳಲ್ಲಿ ತನ್ನ ಕಾವ್ಯಶಕ್ತಿಯ ಕಲ್ಪವಲ್ಲಿಯನ್ನು

ಸದ್ಧರ್ಮದ ಮೇರುವಿನಲ್ಲಿ ಬಿತ್ತಿ ಉತ್ಕೃಷ್ಟವಾದ ಫಲವನ್ನೇ ತೆಗೆದು ತಾನು ಉಣ್ಣುವುದರ ಜೊತೆಗೆ ಎಲ್ಲರಿಗೂ ಉಣಬಡಿಸಿದ್ದಾನೆ.

ಇಹದಲ್ಲಿದ್ದೇ ಇಲ್ಲಿಯ ಭೋಗಭಾಗ್ಯಗಳಲ್ಲಿ, ವೈಭೋಗದಲ್ಲಿ ತೇಲಿ ಮುಳುಗಾಡುತ್ತಲೇ ವೈರಾಗ್ಯವನ್ನು ಸಾಧಿಸಿ ಪರದತ್ತ ಸಾಗುವ ಪಥವನ್ನು ಭರತ ಚಕ್ರವರ್ತಿಯ ವಿಸ್ತಾರವಾದ ಚರಿತೆಯ ಮೂಲಕ ರತ್ನಾಕರವರ್ಣಿ ಅದ್ಭುತವಾಗಿ ತೆರೆದು ತೋರಿದ್ದಾನೆ. ತನ್ನ ಶತಕಗಳಲ್ಲಾದರೂ ಇದೇ ತತ್ತ್ವವನ್ನು ನೇರವಾಗಿ ಉಪಮೆ ರೂಪಕಗಳೊಂದಿಗೆ ಮುಂದಿಟ್ಟಿದ್ದಾನೆ. ಕಾವ್ಯಗುಣದಲ್ಲಿ ಉಳಿದೆರಡು ಶತಕಗಳಿಗಿಂತ ರತ್ನಾಕರಾಧೀಶ್ವರ ಶತಕವೇ ಮೇಲು. ಹಾಗೂ ರತ್ನಾಕರಾಧೀಶ್ವರ ಶತಕದಲ್ಲಿ ಜೈನ ತತ್ವಗಳ ಜೊತೆ ಜೊತೆಗೇ ಸಾಮಾನ್ಯವಾದ ಧಾರ್ಮಿಕ ವಿಚಾರಗಳನ್ನೂ ಹೇಳುತ್ತಾನೆ.

"ಇಹೈವ ತೈಹಿ ಜಿತಃ ಸ್ವರ್ಗಃ" - ಅರ್ಥಾತ್ ಇಹದಲ್ಲಿದ್ದೇ ಭವವನ್ನು ಗೆದ್ದವರು ಲೌಕಿಕರಿಗೆ ಆದರ್ಶಗಳಾಗುತ್ತಾರೆ ಎಂಬುದರ ಅರಿವಿದ್ದ ರತ್ನಾಕರ ತನ್ನ ಶತಕಗಳಲ್ಲಿ ಕೂಡ ಬೇಂದ್ರೆ ಹೇಳಿದಂತೆ ಜೈನರ ತ್ಯಾಗ, ಶೈವರ ಯೋಗ ಮತ್ತು ವೈಷ್ಣವರ ಭೋಗವನ್ನೇ ಪರ್ಯಾಯವಾಗಿ ಎತ್ತಿಹಿಡಿದಿದ್ದಾನೆ. ಅಂದರೆ ರತ್ನಾಕರವರ್ಣಿಯ ದೃಷ್ಟಿಕೋನ ಒಬ್ಬ ಶ್ರದ್ಧಾವಂತ ಜೈನನಾಗಿಯೂ ಆ ಧರ್ಮದ ಕಠೋರವಾದ ವ್ರತ ನಿಯಮಗಳ ಪ್ರತಿಪಾದನೆಗೆ ಮಾತ್ರವೇ ಬದ್ಧವಾದ ಇಲ್ಲವೆ ಸೀಮಿತವಾದ ದೃಷ್ಟಿಕೋನವಲ್ಲ. ಅದು ಒಳ್ಳೆಯ ಚಿಂತನೆ, ಒಳ್ಳೆಯ ಆಲೋಚನೆ ಯಾವೆಡೆಯಿಂದ ಬಂದರೂ ಅದು ವೈದಿಕ ಇಲ್ಲವೆ ಹಿಂದೂ ಆಗಬಹುದು ಅಥವಾ ವೀರಶೈವವಾಗಬಹುದು-ಅದನ್ನು ವಿಚಾರಮಾಡಿ ನೋಡಲು, ಅಗತ್ಯ ಬಿದ್ದರೆ ಸ್ವೀಕರಿಸಲು ಹಿಂದೆಗೆಯದ ಉದಾರ ದೃಷ್ಟಿ. ಆ ಕಾರಣದಿಂದಲೇ ಜಿನನನ್ನು ಶಿವ, ವಿಷ್ಣು, ಜಗನ್ನಾಥರೊಂದಿಗೆ ಸಮೀಕರಿಸಲು ಅವನಿಗೆ ಸಂಕೋಚವೆನಿಸುವುದಿಲ್ಲ.

**ತ್ರಿಜಗತ್ಸ್ವಾಮಿ ಜಿನೇಂದ್ರ ಸಿದ್ಧ ಶಿವಲೋಕಾರಾಧ್ಯ ಸರ್ವಜ್ಞ ಶಂ**

**ಭು ಜಗನ್ನಾಥ ಜಗತ್ಪಿತಾಮಹ ಹರ ಶ್ರೀಕಾಂತ ವಾಣೇಶ ವಿ**

**ಷ್ಣು ಜಿತಾನಂಗ ಜಿನೇಶ ಪಶ್ಚಿಮ ಸಮುದ್ರಾಧೀಶ್ವರಾ ಬೇಗದಿಂ**

**ನಿಜಮಂ ತೋರು ದಯಾಳುವೇ ತಳುವಿದೇಂ-ರತ್ನಾಕರಾಧೀಶ್ವರಾ** (ರ. ಶ.- ೧೨೬)

ಜೈನ ಪುರಾಣಗಳಲ್ಲಿ ಸಾಮಾನ್ಯವಾಗಿ ಕಂಡು ಬರುವ ಲೋಕಾಕಾರ ಕಥನದಲ್ಲಿಯ ನರಕ ಲೋಕ, ಭುವನ ಲೋಕ, ನರ ಲೋಕ, ಜ್ಯೋತಿರ್ಲೋಕ, ವ್ಯಂತರ ಲೋಕವೇ ಮೊದಲಾದ ನಾನಾ ಲೋಕಗಳ ವರ್ಣನೆಯ ಜೊತೆಗೆ ಪಾಪ-ಪುಣ್ಯಗಳ ಪರಿಕಲ್ಪನೆಯೂ ಸೇರಿದಂತೆ ಅನೇಕ ಜೈನ ಧಾರ್ಮಿಕ ವಿಚಾರಗಳನ್ನು ತ್ರಿಲೋಕ ಶತಕದಲ್ಲಿ ಕಂದ ಪದ್ಯಗಳಲ್ಲಿ ವರ್ಣಿಸಿದ್ದಾನೆ. ಧರ್ಮಶಾಸ್ತ್ರ ದೃಷ್ಟಿಯಿಂದ ಎಷ್ಟೇ ಪ್ರಧಾನವೆನಿಸಿದರೂ ಜೈನೇತರ ಸಾಹಿತ್ಯ ಪ್ರೇಮಿಗಳಿಗೆ ಇದು ಅಷ್ಟಾಗಿ ಹಿಡಿಸುತ್ತದೆಂದು ಹೇಳಲಾಗದು.

ಇನ್ನುಳಿದ ಎರಡು ಶತಕಗಳಾದ ರತ್ನಾಕರಾಧೀಶ್ವರ ಶತಕ ಮತ್ತು ಅಪರಾಜಿತೇಶ್ವರ ಶತಕಗಳ ವಸ್ತು-ವಿಷಯಗಳಲ್ಲಿ ಹೆಚ್ಚಿನ ಸಾಮ್ಯವಿದೆ. ಇವುಗಳಲ್ಲೂ ಷಡ್ ದ್ರವ್ಯ, ಪಂಚಾಸ್ತಿ ಕಾಯ, ಸಪ್ತ ತತ್ವ ಮೊದಲಾದ ಜೈನ ಧಾರ್ಮಿಕ ವಿಚಾರಗಳು ಬರುತ್ತವಾದರೂ ಅವು ಓದುಗರಿಗೆ ಬೇಸರವೆನಿಸದ ರೀತಿಯಲ್ಲಿ ನಿರೂಪಿತವಾಗಿವೆ.

ಭಾರತದಲ್ಲಿ ಮೊದಲಿಗೆ ಕಾಣಿಸಿಕೊಂಡ ಆಧ್ಯಾತ್ಮ ಸಾಹಿತ್ಯವೆಂದರೆ ವೇದಗಳು. ಅನಂತರದಲ್ಲಿ ಕಾಣಿಸಿಕೊಂಡ ಶ್ರಮಣ ಪರಂಪರೆಯ ಜೈನ, ಬೌದ್ಧ ಧರ್ಮಗಳು ವೇದಗಳನ್ನು ಅಲ್ಲಿಯ ಅನೇಕ ವಿಚಾರಗಳನ್ನು ವಿರೋಧಿಸುವ ಮೂಲಕವೇ ತಮ್ಮ ಅಸ್ತಿತ್ವವನ್ನು ಸ್ಥಾಪಿಸಿಕೊಂಡದ್ದು ನಿಜವಾದರೂ ವೇದ-ಉಪನಿಷತ್ತುಗಳಲ್ಲಿಯ ಕೆಲವು ವಿಚಾರಗಳನ್ನು ಉಳಿಸಿಕೊಂಡವು. ಕರ್ಮ ಸಿದ್ಧಾಂತ, ಪುನರ್ಜನ್ಮ, ಅಥವಾ ಜನ್ಮಾಂತರಗಳು ಜೈನ ಮತ್ತು ಬೌದ್ಧಗಳಲ್ಲೂ ಹೆಚ್ಚು ಕಡಿಮೆ ಹಾಗೆಯೇ ಉಳಿದು ಬಂದುವು. ಹಾಗಾಗಿ ಇವನ್ನು ಪರಂಪರೆಗಳೆಂದು ಹೇಳುವುದೇ ಸರಿಯೆನಿಸುತ್ತದೆ. ವೈದಿಕ ಪರಂಪರೆ, ಶ್ರಮಣ ಪರಂಪರೆ ಮತ್ತು ಶರಣ ಪರಂಪರೆ. ಶ್ರಮಣ ಪರಂಪರೆಯಲ್ಲಿ ಜೈನ ಮತ್ತು ಬೌದ್ಧಗಳು ಸೇರುತ್ತವೆ. ಅನಂತರ ತೀರ ತಡವಾಗಿ ಕಾಣಿಸಿಕೊಂಡ ವೀರಶೈವ ಪರಂಪರೆಯಾದರೂ ವೈದಿಕ ಪರಂಪರೆಯ ಅನೇಕ ಆಚಾರ, ನಂಬಿಕೆ ತತ್ತ್ವಗಳನ್ನು ಉಗ್ರವಾಗಿ ವಿರೋಧಿಸಿದರೂ ಕೆಲವನ್ನು ಉಳಿಸಿಕೊಂಡಿತೆಂಬುದನ್ನು ನಿರಾಕರಿಸಲಾಗುವುದಿಲ್ಲ. ಆತ್ಮನ ಸ್ವರೂಪ ಕುರಿತು ವೈದಿಕ, ಜೈನಗಳಲ್ಲಿ ಒಂದೇ ರೀತಿಯ ವಿಚಾರ ಕಂಡು ಬರುತ್ತದೆ. ಜೀವ ಚೇತನ ಸ್ವರೂಪಿ, ಜ್ಞಾನ ರೂಪಿ. ಆತ್ಮವೆಂಬುದು ದೇಹ ಕಣ್ಣಿಗೆ ಕಾಣುವಂತೆ ಕಾಣುವುದಿಲ್ಲ. ಜೀವಾತ್ಮ ಮತ್ತು ಪರಮಾತ್ಮಗಳೆರಡೂ ಒಂದೇ ಎಂದು, ಅದನ್ನು ಹೊರತುಪಡಿಸಿದ ಬೇರೆ ಇನ್ನಾವುದೇ ದೇವನಿಲ್ಲ ಎಂದು ಜೈನ ಸಾರಿದರೆ ವೈದಿಕವು ಜೀವಾತ್ಮವು ಪರಮಾತ್ಮನದೇ ಒಂದು ಅಂಶ; ಆ ಪರಮಾತ್ಮ ಜೀವಾತ್ಮನಲ್ಲಿಯೇ ಇದ್ದಾನೆ ಅವನನ್ನು ಕಂಡುಕೊಳ್ಳ ಬೇಕು ಮತ್ತು ಅವನಲ್ಲಿ ಒಂದಾಗುವುದೇ ಜೀವದ ಗಂತವ್ಯ ಎನ್ನುತ್ತದೆ. ವೀರಶೈವ ಸಾರುವ ಶಿವಾದ್ವೈತವಾದರೂ ದೇಹವೇ ದೇವಾಲಯ; ಆ ದೇಹದ ದೇವಾಲಯದಲ್ಲಿ ನೆಲೆಸಿರುವ ಶಿವನನ್ನು ಸಾಕ್ಷಾತ್ಕರಿಸಿಕೊಳ್ಳುವುದೇ ಭಕ್ತ ಅಥವ ಶರಣ ಮಾಡಬೇಕಾದ್ದು ಎನ್ನುತ್ತದೆ. ಈ ಧರ್ಮಗಳ ನಡುವಿನ ಸಾಮಾನ್ಯ ಎಳೆಯನ್ನು ಕಂಡುಕೊಂಡು ತನ್ನ ಮಹಾಕಾವ್ಯ, ಶತಕಗಳು ಮತ್ತು ಹಾಡುಗಳಲ್ಲಿ ಅದಕ್ಕೆ ಸಮರ್ಥ ಅಭಿವ್ಯಕ್ತಿಯನ್ನು ನೀಡಿದ್ದು ರತ್ನಾಕರ.

**ಅರಿವಿಂದೀಕ್ಷಿಸಲಕ್ಕುಮಾತ್ಮನಿರವಂ ದೇಹಂಬೊಲೀ ಕಣ್ಗೆ ತಾಂ**

**ಗುರಿಯಾಗಂ. ಶಿಲೆಯೊಳ್ ಸುವರ್ಣಮ್, ಅರಲೊಳ್ ಸೌರಭ್ಯಮ್ ಆ ಕ್ಷೀರದೊಳ್**

**ಸರು ನೆಯ್, ಆ ಕಾಷ್ಠದೊಳ್ ಅಗ್ನಿಯಿರ್ಪತೆರದಿಂದೀ ಮೆಯ್ಯೊಳೊಂದಿರ್ಪನೆಂ**

**ದರಿದಭ್ಯಾಸಿಸೆ ಕಾಣ್ಬುಮೆಂದರಿಪಿದೈ-ರತ್ನಾಕರಾಧೀಶ್ವರಾ-(ರ. ಶ-೪)**

**ಕಲ್ಲೊಳ್ತೋರ್ಪ ಪೊಗರ್ಸುವರ್ಣದ ಗುಣಂ ಕಾಷ್ಠಂಗಳೊಳ್ತೋರ್ಪ ಕಿ**

**ಚ್ಚೆಲ್ಲಾ ಕಿಚ್ಚಿನ ಚಿಹ್ನವಾ ಕೆನೆಯಿರಲ್ಪಾಲೊಳ್ ಘೃತಚ್ಛಾಯೆಯೆಂ**

**ದೆಲ್ಲರ್ ಬಣ್ಣಿಪರಂತುಟೀ ತನುವಿನೊಳ್ ಚೈತನ್ಯಮುಂ ಬೋಧಮುಂ**

**ಸೊಲ್ಲುಂ ಜೀವಗುಣಂಗಳೆಂದರುಪಿದೈ -ರತ್ನಾಕರಾಧೀಶ್ವರಾ-** (ರ. ಶ-೫) ಎಂದು ಹೇಳಿದರೆ

ಕಬೀರದಾಸರ ಒಂದು ದೋಹೆ ಕೂಡ ಪರಮಾತ್ಮ ಹೀಗೆಯೇ ಮನುಷ್ಯ ದೇಹದಲ್ಲಿದ್ದಾನೆಂದು ಸಾರುತ್ತದೆ.

**ತಿಲಮಾಹಿ ತೇಲ್ ಹೈ, ಜೈಸೆ ಚಕಮಕ ಮೆ ಆಗಿ , ತೇರಾ ಸಾಯಿ ತುಝು ಮೆ**

**ಜಾಗಿ ಸಕೈ ತೋ ಜಾಗೋ".** ಇಲ್ಲಿ ಆತ್ಮನ ಬದಲು ಪರಮಾತ್ಮನನ್ನು ಹೇಳಲಾಗಿದೆ.

ವೀರಶೈವ ಶರಣರಾದರೂ- "ಚಕ್ಕಮಕ್ಕಿಯ ಕಲ್ಲಿನಂತರಂಗದೊಳಗ್ನಿ ಸುಪ್ತವಾಗಿರ್ಪಂತೆಯೇ" ಪರಮಾತ್ಮ ಇದ್ದಾನೆಂದು ಹೇಳುತ್ತಾರೆ.

ಶರೀರದಿಂದ ಬೇರಾಗಿದ್ದರೂ ಶರೀರದಲ್ಲೇ ಇರುವ ಆತ್ಮನನ್ನು ಭೇದ ಜ್ಞಾನದಿಂದ ಅರಿಯ ಬೇಕೆನ್ನುತ್ತಾನೆ ರತ್ನಾಕರ.

**ಮತ್ತಾ ಕಲ್ಲನೆ ಸೋದಿಸಲ್ಕನಕಮಂ ಕಾಣ್ಬಂತೆ ಪಾಲಂ ಕ್ರಮಂ**

**ಬೆತ್ತೊಳ್ಪಿಂ ಮಥನಂ ಗೆಯ್ಯೆಲ್ ಘೃತಮುಮಂ ಕಾಣ್ಬಂತೆ ಕಾಷ್ಠಂಗಳುಂ**

**ಒತ್ತಂಬಂ ಪೊಸೆದಗ್ನಿ ಕಾಣ್ಬ ತೆರದಿಂ ಮೆಯ್ಬೇರೆ ಬೇರಾನೆನು**

**ತ್ತಿತ್ತಭ್ಯಾಸಿಸಲೆನ್ನ ಕಾಣ್ಬುದರಿದೇ? ರತ್ನಾಕರಾಧೀಶ್ವರಾ!-** (ರ. ಶ-೬)

ಭಗವದ್ಗೀತೆಯಲ್ಲಿ ಆತ್ಮನ ಸ್ವರೂಪ ಕುರಿತು ಹೇಳುವಾಗ ಹೇಳುವಂತೆಯೇ(ನೈನಂ ಛಿಂದಂತಿ ಶಸ್ತ್ರಾಣಿ, ನೈನಂ ದಹತಿ ಪಾವಕಃ) ರತ್ನಾಕರನೂ ಹೇಳುತ್ತಾನೆ.

**ಬಿಸಿಲಿಂ ಕಂದದ ಬೆಂಕಿಯಿಂ ಸುಡದ ನೀರಿಂ ನಂದದುಗ್ರಾಸಿ ಭೇ ದಿಸಲು ಬರದ ಚಿನ್ಮಯಂ ಮರೆದು ತನ್ನೊಳ್ಪಂ ಪರಧ್ಯಾನದಿಂ**

**ಪಸಿವಿಂದೀ ಬಹುಬಾಧೆಯಿಂ ರುಜೆಗಳಿಂ ಕೇಡಾಗುವೀ ಮೆಯ್ಗೆ ಸಂ**

**ದಿಸಿದಂ ತನ್ನನೆ ಚಿಂತಿಸಲ್ಸುಖಿಯಲಾ ರತ್ನಾಕರಾಧೀಶ್ವರಾ!-** (ರ. ಶ.-೮}

ಇದರಲ್ಲಿ ದೇಹದ ನಶ್ವರತೆ, ಜಡತೆ, ಅಂತೆಯೇ ಆತ್ಮನ ಶಾಶ್ವತತೆ- ಎರಡನ್ನೂ ಎದುರು ಬದುರು ಇಟ್ಟು ಮನದಟ್ಟುಮಾಡಿಕೊಡುತ್ತಾನೆ.

**ತನುವೇಂ ತಾಮ್ರ ನಿವಾಸಮೋ ಮಳಲ ಬೆಟ್ಟೊಳ್ತೋಡಿ ಬೀಡಂ ಮರು**

**ಳ್ಮನಮೊಲ್ದಿರ್ಪವೊಲಿಂದೊ ನಾಳೆಯೊ ತೊಡಂಕೇಂ ನಾಳಿದೋ ಈಗಳೋ**

**ಘನದೊಡ್ಡೆಂಬವೊಲೊಡ್ಡಿಯೊಡ್ಡಳಿವ ಮಯ್ಯೊಳ್ ಮೋಸವೇಕಿರ್ದಪೈ**

**ನೆನೆದಿರ್ಜೀವನೆ ಮೇಲನೆಂದರುಹಿದೈ!–ರತ್ನಾಕರಾಧೀಶ್ವರಾ.–(ರ. ಶ–೧೩)**

ಹಾಗಾದರೆ ಮನುಷ್ಯ ಜೀವಿಗೆ ಇರುವ ದಾರಿಯೇನು?–ಎಂದರೆ–

**ಈ ಕಿಡುವ ಮೆಯ್ಯಂ ಕೊಟ್ಟು ನಿತ್ಯತ್ವವಾದಿಂಬಂ ಧರ್ಮದೆ ಕೊಂಬವಂ ಚದುರನೈ**

**ನರಕ ತಿರ್ಯಙ್ಮರ್ತ್ಯದೇವತ್ವದೊಳ್ ತರಿಸಂದೊಪ್ಪುವ ಬಾಳ್ಕೆಯೀ ಬಯಲ ಬಾಳಂ ನಚ್ಚಿ ನಿತ್ಯತ್ವಮಂ**

**ಮರೆವಂತೇಕೆಯೋ ನಿಮ್ಮ ನಾಂ ಮರೆದೆನೋ!–ರತ್ನಾಕರಾಧೀಶ್ವರಾ**

ಎಂದು ತನ್ನ ನೋವಿಗೆ ಅಭಿವ್ಯಕ್ತಿ ನೀಡಿರುವ ಇದರಲ್ಲಿ ಕೇವಲ ಅವನೊಬ್ಬನ ನೋವಷ್ಟೇ ಅಲ್ಲದೆ ಐಹಿಕ ಸುಖದಲ್ಲೇ ಮುಳುಗಿದ ಜೀವ ಸಾಮಾನ್ಯನ ನೋವು ದಯನೀಯವಾಗಿ ಕೇಳಿಸುತ್ತದೆ.

ಈ ಲೋಕದಲ್ಲಿ ಸಾವು ನಿಶ್ಚಿತ. ಸತ್ತವರಿಗೆ ಅಳುವುದರಲ್ಲಿ ಅರ್ಥವಿಲ್ಲ. ಅಳಬೇಕು– ಎಂಥವರಿಗೆ?

ದಾನಧರ್ಮ ಮಾಡದೆ ಜಪ ತಪಾದಿಗಳನ್ನು ಮಾಡದೆ ಮರಣ ಸನ್ನಿಹಿತವಾದ ಸಂದರ್ಭದಲ್ಲೂ ಜಿನಧ್ಯಾನಕ್ಕೆ ಮನಸ್ಸು ಮಾಡದ ಪಾಪಿಗೆ– ತನಗೆ ಸಿಕ್ಕ ಅವಕಾಶವನ್ನು ವ್ಯರ್ಥವಾಗಿ ನೀಗಿಕೊಂಡನಲಾ– ಎಂದು ಅಳಬೇಕೇ ಹೊರತು "ದಾನಂ ಗೆಯ್ದು ತಪಕ್ಕೆ ಪಾಯ್ದು ಮರಣಂ ಗಾಣ್ಬಂದು ನಿಮ್ಮಕ್ಷರಧ್ಯಾನಂ ಗೆಯ್ದು ಅಳಿವಂಗೆ ಶೋಕಿಪರದೇಂ?" ಎಂದು ಪ್ರಶ್ನಿಸುತ್ತಾನೆ.

ಸಾವಿಗೆ ಅಂಜುವುದರಲ್ಲಿ ಅರ್ಥವಿಲ್ಲ. ಕಾರಣ ಶರೀರಧಾರಿಯಾದ ಮನುಷ್ಯನಿಗೆ ಸಾವೇನೂ ಹೊಸತಲ್ಲ; ಸಾವೇಂ ಮಾಣ್ಬುಮೆ? ಕಾವರುಂಟೆ? ಮತ್ತು ಮರಣವಾಗಲ್ಮುಂದೇಂ ಪುಟ್ಟನೇ?

ಹಾಗಾದರೆ ಸಾವೂ ಸುಖವಾಗುವುದು ಯಾವಾಗ ಎಂದರೆ? "ನೀವೆನ್ನೊಳ್ನಿಲೆ" ಎಂಬುದೇ ಉತ್ತರ.

ಬಸವಣ್ಣನವರೂ ಮರಣವನ್ನು ಮಹಾನವಮಿ ಎಂದು ಮುಕ್ತವಾಗಿ ಆಹ್ವಾನಿಸಿರುವುದು ನಮಗೆ ತಿಳಿದೇ ಇದೆ.

ಅನೇಕ ಜನ್ಮಗಳನ್ನು ಧರಿಸಿ ಜೀವ ಎಲ್ಲ ಮರ್ತ್ಯದ ಸುಖಗಳನ್ನು ಉಂಡಿದೆ. ಮತ್ತೆಯೂ ಆ ಲೌಕಿಕ ಸುಖಕ್ಕೆ ಮನ ಹೇಸಿದೆ.

ಇದುವರೆಗೆ ಜೀವ ಹಲವು ಯೋನಿಗಳಲ್ಲಿ ಹುಟ್ಟಿಬಂದು ಪಡಬಾರದ ದಂದುಗ ಪಟ್ಟರೂ ಅವನ ಭ್ರಮೆ, ಪ್ರಾಪಂಚಿಕ ವ್ಯಾಮೋಹ ತೊಲಗದಿರುವುದನ್ನು ಹಲವು ಪದ್ಯಗಳಲ್ಲಿ ಬೇಕಾದ ಹಾಗೆ ಹಾಡಿದ್ದಾನೆ.

ಜೈನ ಧರ್ಮದ ಪ್ರಕಾರ ಪಾಪ ಪುಣ್ಯ ಎರಡನ್ನೂ ತೊರೆದವನಿಗೇ ಮುಕ್ತಿ. ಅವಾವುದನ್ನೂ ಅವರು ಮೆಚ್ಚುವುದಿಲ್ಲ. ಸ್ವರ್ಗ ಸಿಕ್ಕಿದರೂ ಅದು ಶಾಶ್ವತವಲ್ಲ. ಪಾಪ ತೀರಿದ ಬಳಿಕ ಪುಣ್ಯದಲ್ಲಿ ನಿಲ್ಲುತ್ತಾನೆ. ಪುಣ್ಯ ತೀರಿದರೆ ಪಾಪ ಹೊಂದುತ್ತಾನೆ. ಹೀಗೆ ಸ್ವರ್ಗ, ನರಕಗಳಲ್ಲಿ ತುಯ್ದಾಡುವುದು ತಪ್ಪದು. ಅವೆರಡನ್ನೂ ಕಳೆದುಕೊಂಡು ಕರ್ಮಕ್ಷಯ ಮಾಡಿಕೊಂಡು ಆತ್ಮ ವಿಚಾರದ ಧ್ಯಾನದಲ್ಲಿದ್ದವನೇ ಸ್ಥಿರ ಸುಖಿ.

ಹಾಗಾದರೆ ಅದಕ್ಕೇನು ಮಾಡಬೇಕು?

ಅದಕ್ಕೆ ಗೃಹಸ್ಥ ಧರ್ಮವನ್ನು ದಾನ ಧರ್ಮಕಾರ್ಯಗಳಲ್ಲಿ ಸಾರ್ಥಕವಾಗಿ ಕಳೆಯಬೇಕು ಎನ್ನುತ್ತಾನೆ.

**ತನುವಂ ಸಂಘದ ಸೇವೆಯೊಳ್ ಮನಮನಧ್ಯಾತ್ಮದಭ್ಯಾಸದೊಳ್**

**ಧನಮಂ ದಾನಸುಪೂಜೆಯೊಳ್ದಿನಮನರ್ಹದ್ಧರ್ಮಕಾರ್ಯಪ್ರವ**

**ರ್ತನೆಯೊಳ್ ಪರ್ವವನೊಲ್ದು ನೋಂಪಿಗಳೊಳಿರ್ದಾಯುಷ್ಯಮಂ ಮೋಕ್ಷಚಿಂ**

**ತನೆಯೊಳ್ ತೀರ್ಚುವ ಸದ್ಗೃಹಸ್ಥನನಘಂ! ರತ್ನಾಕರಾಧೀಶ್ವರಾ!** –(ರ. ಶ–೪೩)

ಆದ್ದರಿಂದ ಗೃಹಸ್ಥ ಜೀವನ ತ್ಯಾಜ್ಯವಲ್ಲ, ತಿರಸ್ಕಾರಾರ್ಹವೂ ಅಲ್ಲ. ಬದಲಿಗೆ ಅದು ಮೋಕ್ಷ ಸಾಧನೆಗೆ ಆಶ್ರಯವಾದ ಸಾಧನಾಭೂಮಿ.

**ಪುತ್ರೋತ್ಸಾಹದೊಳಕ್ಷರದಿ ಸಕಲ ಪ್ರಾರಂಭದೊಳ್ ವ್ಯಾಧಿಯೊಳ್**

**ಯಾತ್ರಾ ಸಂಭ್ರಮದೊಳ್ ಪ್ರವೇಶದೆಡೆಯೊಳ್ ವೈವಾಹದೊಳ್ ನೋವಿನೊಳ್**

**ಛತ್ರಾಂದೋಳ ಗೃಹಾದಿ ಸಿದ್ಧಿಗಳೊಳರ್ಹತ್ಪೂಜೆಯುಂ ಸಂದ ಸ**

**ತ್ಪಾತ್ರಾರಾಧನೆಯುತ್ತಮೋತ್ತಮವಲಾ!– ರತ್ನಾಕರಾಧೀಶ್ವರಾ**–(ರ. ಶ–೪೪)

**"ಕ್ಷಣವಾದರೂ ನಿಜದ ನೆನಹೆ ಸಾಕು**

**ಕ್ಷಣದೊಳಗರ್ಧವಾದರೂ ನಿಜದ ನೆನಹೆ ನೆನಹೆ ಸಾಕು**

**ಬೆಂಕಿಂಯೊಳಗುಳ್ಳ ಗುಣ ಬಿಸಿನೀರಲುಂಟೇ ಗುಹೇಶ್ವರಾ?"** ಎನ್ನುವ ಅಲ್ಲಮನಂತೆಯೇ ರತ್ನಾಕರನೂ

"ಬಾಹ್ಯದೊಳ್ನೆಗಳ್ದೊಡಂ ಧ್ಯಾನಂ ಕ್ಷಣಕ್ಕೊರ್ಮೆ ಸಂಘಟಿಸಲ್ನಿಮ್ಮ ಪದಂಗಳೊಳ್ ಸುಖಿಯಲಾ"

ಎಂದು ಉದ್ಗರಿಸುತ್ತಾನೆ.

ರತ್ನಾಕರನಿಗೆ ಈ ಮರ್ತ್ಯಜೀವಿಯ ದೌರ್ಬಲ್ಯ ತಿಳಿದಿದೆ.

ಮದವೆದ್ದಾನೆಗೆ ಕಲ್ಲ ಪೊಯ್ವುದಿನಿದೇ? ಮೆಯ್ತೀಂಟೆಗಂ ಕಜ್ಜಿಗಂ
ಬದಿಯಂ ತೋಡುವುದೊಳ್ಳಿತಲ್ತು ಬಗೆವಂದಾತ್ಮಂಗೆ ನಾರೀರತಂ
ಮುದವಲ್ತಾದೊಡಮಂತದೇಂ ಬಿಡಲಶಕ್ಯಂ ಬಿಟ್ಟೊಡೀ ಯೌವನೋ
ನ್ಮದದುದ್ರೇಕವಡಂಗದೇವೆನಕಟಾ– ರತ್ನಾಕರಾಧೀಶ್ವರಾ– ಎನ್ನುತ್ತಾನೆ.

ಆದ್ದರಿಂದ ಶರೀರಧಾರಿಯದ ಮನುಷ್ಯ ಏನು ಮಾಡಬೇಕು ಎಂದರೆ ರತ್ನಾಕರನ ಅನುಭವದ ಮಾತು–

ತನುವೇಳ್ಕೆಂಬವನೌಷಧಕ್ಕೆಳಸನೇ? ಪಿತ್ತೋರ್ಜಿತಂ ದೇಹಶೋ
ಧನೆಯಂ ಮಾಳ್ಪವೊಲಂಗನಾ ಸುರತದಿಂ ತನ್ನಿಂದ್ರಿಯಂ ಪೋಗೆ ಯೌ
ವನತಾಪಂ ನಿಲುಗುಂ ನಿಲಲ್ಜರಿತೆ ಸಲ್ಗುಂ ಸದ್ಗೃಹಸ್ಥಂಗೆ ತ
ತ್ತನು ಬೇಡೆಂಬ ಮುನೀಶ್ವರಂಗುಚಿತವೇ?–ರತ್ನಾಕರಾಧೀಶ್ವರಾ–(ರ. ಶ–೬೧)

ಹಾಗಾಗಿ

ಮರ್ದುಂ ಮಾನಿನಿಯುಂ ಸಮಾನಮರಿವಂಗಂತಲ್ಲದದೇಂ ಪೆಣ್ಣೊಳೊಂ
ದಿರ್ದುಂ ಶ್ರೀ ಜಿನದತ್ತನುಂ ಕಪಿಲಮಿತ್ರಂ ವಾರಿಷೇಣಾದಿಗಳ್
ಸಾರ್ದಿರ್ಪಸುಡುಗಾಡನೇಕೆ? ತಪವೇಕಾ ಪರ್ವದೊಳ್ಮತ್ತೆಪ
ಣ್ಣೆರ್ದತ್ತೈದುವರೆಯ್ದಿಯುಂ ಭ್ರಮಿತರೋ? – ರತ್ನಾಕರಾಧೀಶ್ವರಾ –(ರ. ಶ–೬೩)

ತನ್ನ ನಿದರ್ಶನವನ್ನೇ ಕೊಡುತ್ತಾ–

ಪೆರರಂ ಪೇಳ್ದೊಡೆ ನೋವರಾನೆನಗೆ ಪೇಳ್ದೆಂ ಕಾಮಿನೀಮೂತ್ರದೊ–
ಜ್ಜರಮೆಯ್ಯುಂ ಲತೆಯೆಂದು ಮಾಂಸಕುಚಮಂ ಹೇಮಾಬ್ಜಮೆಂದೆಂದು ನೆ
ತ್ತರನುಂಡಾ ತುಟಿಯಂ ಸುಧಾರುಚಿಯೆನುತ್ತಾಂ ಬಿಳ್ದುದುಂ ಸಾಲದ
ನ್ಯರನೊಯ್ದೆಂ ಕವಿಯೋ? ವಲಂ ಕಪಿಯೋ ನಾಂ?–ರತ್ನಾಕರಾಧೀಶ್ವರಾ!–
(ರ. ಶ.–೬೭)

ಕೆಳಗಿನ ಈ ಪದ್ಯವಂತೂ ಅವನ ಸರ್ವಧರ್ಮ ಸಮನ್ವಯ ಸಿದ್ಧಾಂತಕ್ಕೆ ಶ್ರೇಷ್ಠ ನಿದರ್ಶನ. ಇದರಲ್ಲಿ ಜಿನ, ಶಿವ, ವಿಷ್ಣು-ಇವರಲ್ಲಿ ಅಭೇದವನ್ನು ಕಂಡಿದ್ದಾನೆ.

**ತ್ರಿಜಗತ್ಸ್ವಾಮಿ ಜಿನೇಂದ್ರ ಸಿದ್ಧ ಶಿಲೋಕಾರಾಧ್ಯ ಸರ್ವಜ್ಞ ಶಂ**

**ಭು ಜಗನ್ನಾಥ ಜಗತದಪಿತಾಮಹ ಹರ ಶ್ರೀಕಾಂತ ವಾಣೀಶ ವಿ**

**ಷ್ಣು ಜಿತಾನಂಗ ಜಿನೇಶ ಪಶ್ಚಿಮ ಸಮುದ್ರಾಧೀಶ್ವರಾ ಬೇಗದಿಂ**

**ನಿಜಮಂ ತೋರು ದಯಾಳುವೇ ತಳುವಿದೇಂ ರತ್ನಾಕರಾಧೀಶ್ವರಾ.-** (ರ. ಶ-೧೨೬)

ಅಪರಾಜಿತೇಶ್ವರ ಶತಕದಲ್ಲಿ ಕಾವ್ಯಕ್ಕಿಂತ ತತ್ವ ಜಿಜ್ಞಾಸೆ ಮುನ್ನೆಲೆಯಲ್ಲಿದೆ. ಭೇದಾತ್ಮ ವಿಜ್ಞಾನದ ಸ್ವರೂಪವನ್ನು ಅದರ ಸಾಧನಾಪಥವನ್ನು ತೆರೆದಿಟ್ಟಿದ್ದಾನೆ. ಮಣಿತ್ರಯ, ತತ್ವ ಸಪ್ತಕ, ಗುರುಪಂಚಕ, ನರಕದಲ್ಲಿ ಜೀವ ಅನುಭವಿಸಬೇಕಾಗಿ ಬರುವ ಶಿಕ್ಷೆಗಳು ಇವನ್ನೆಲ್ಲ ಹೇಳುತ್ತಲೇ ದೇಹದ ಅನಿತ್ಯತೆಯನ್ನು ನಾಣ್ಣುಡಿ, ಉಪಮೆ, ರೂಪಕಗಳ ಮೂಲಕ ಮನವರಿಕೆ ಮಾಡುವ ಉಮೇದು ಕಾಣುತ್ತದೆ. ಜೊತೆಗೆ ಜಿನಭಕ್ತಿಯ ಮೇಲೆ ಹೆಚ್ಚು ಒತ್ತು ಇದೆ

ದೇಹ ಅಶಾಶ್ವತ. ಆತ್ಮವೊಂದೇ ಶಾಶ್ವತ. ಆದರೆ ಜೀವ ಈ ಕೆಡುವ ಒಡಲನ್ನೇ ನೆಚ್ಚಿ , ಇಹ ಲೋಕದ ಭೋಗ ಭಾಗ್ಯಗಳನ್ನು ಇನ್ನಿಲ್ಲದೆ ಉಪಭೋಗಿಸುವುದರಲ್ಲಿ ಮಗ್ನವಾಗಿಬಿಟ್ಟಿರುತ್ತದೆ. ಅದು ಹೇಗೆ ಭೋಗದ ಉಸುಬಿನಲ್ಲಿ ಸಿಲುಕಿರುತ್ತದೆ ಎಂಬುದನ್ನು ಹಲವಾರು ಪದ್ಯಗಳಲ್ಲಿ ಶಕ್ತಿಯುತವಾಗಿ ಬಣ್ಣಿಸುತ್ತಾನೆ. ಜನರ ದಿನನಿತ್ಯದ ಸಂವಾದದ ರೂಪದಲ್ಲಿ ದೇಹದ ಅನಿತ್ಯತೆಯನ್ನು ಈ ಪದ್ಯದಲ್ಲಿ ಹೀಗೆ ನಿರೂಪಿಸುತ್ತಾನೆ.

**ಮೊನ್ನೆ ಬರುತ್ತೆ ಕಂಡೆನವನಂ ಮೃತವಾದನೆ ಯಾದನಕ್ಕಟಾ**

**ನಿನ್ನೆ ಸುಗೋಷ್ಠಿಗೆಯ್ದೆನಿವನೊಳ್ ಲಯವಾದನೆ ಯಾದನಯ್ಯೋ!-ಇಂ**

**ದೆನ್ನೊಡವಂದನೀತನಕಟಾ ! ಕಡೆಗಂಡನೆ ಕಂಡನೆಂಬ ಮಾ**

**ತಂ ನೆರೆ ಕೇಳುತೆನ್ನೊಡಲನಚ್ಚುವೆನೆಂತಪರಜಿತೇಶ್ವರಾ-**(ಅ. ಶ-೫೬)

ಭೋಗಗಳಲ್ಲಿ ಮಗ್ನವಾದ ಜೀವ ಕರ್ಮ ಬಂಧನದಲ್ಲಿ ಸಿಲುಕಿರುತ್ತದೆ. ಈ ಕರ್ಮ ಬಂಧನವನ್ನು ಕಿತ್ತೊಗೆಯದೆ ಜೀವನಿಗೆ ಮುಕ್ತಿಯಿಲ್ಲ. ಅದಕ್ಕೆ ದೇಹ ಆತ್ಮಗಳು ಬೇರೆ ಬೇರೆ ಎಂಬುದು(ಆತ್ಮ-ತನು ಭೇದ ವಿಚಾರ) ಅರಿವಿಗೆ ತಟ್ಟಬೇಕು. ಇದನ್ನು ಹಲವು ರೀತಿಯಲ್ಲಿ ಮನವರಿಕೆ ಮಾಡಿಕೊಡುವುದೇ ಅಪರಾಜಿತೇಶ್ವರ ಶತಕದಲ್ಲಿ ನಾವು ಕಾಣುವುದು.

**ತನು ಜಿನಗೇಹವೆಂಬುದೊಳಗಿರ್ದ ನಿಜಾತ್ಮನೆ ದೇವನೆಂಬುದಾ**

**ತನು ಪರಿಮಾಣನೆಂಬುದಶರೀರಕನೆಂಬುದು ಬೋಧ ದರ್ಶನಂ**

**ತನುವೆನಿಸಿರ್ದನೆಂಬುದಕಲಂಕನಬಾಧನಖಂಡನೆಂಬ ಭಾ**

**ವನೆಯನೆ ಭಾವಿಸುತ್ತಿರೆ ಭವಚ್ಯುತಿ-ತಾನಪರಾಜಿತೇಶ್ವರಾ**-(ಅ. ಶ-೧೧)

ಮೊದಮೊದಲು ಇದೆಲ್ಲ ಆಸರವೆನಿಸಿದರೂ ಬಿಡದೆ ಪರಿಭಾವಿಸುತ್ತಿದ್ದರೆ "ಮಹಾಸುಖಮಪ್ಪುದು

**ಬಾಹ್ಯದಾಟದೊಳ್ ಬೆದರಿಕೆಯಪ್ಪುದು ಆತ್ಮನೊಳೆ ಮೆಚ್ಚುಗೆಯಪ್ಪುದು ಲೋಕಮೆಲ್ಲ ಮಾಯದ ಮರುಳಾಗಿ**

**ತೋರ್ಪುದು ನಿಜಾತ್ಮರತಂಗೆ**-ಎನ್ನುತ್ತಾನೆ-(ಅ. ಶ-೧೨)

ಸಾದನೆಯಿಲ್ಲದೆ ಸುಮ್ಮನೆ "ಕರ್ಮಶತ್ರುವೆ ಬಿಡು ಬಿಡು ಪೋಗೆನಲ್ಲುಡಿಗೆ ಪೋದಪುದೇ?" ಹೋಗುವುದಿಲ್ಲ. ಅದಕ್ಕೆ ತಪಸ್ಸಿನ ಸಾಧನಾ ಮಾರ್ಗವನ್ನಳವಡಿಸಿಕೊಳ್ಳುವುದು ಬಿಟ್ಟು ಬೇರೆ ಮಾರ್ಗವಿಲ್ಲ. ಅದನ್ನೊಂದು ಉಪಮೆಯ ಮೂಲಕ ಹೇಳುತ್ತಾನೆ:

**ಪುಟವಿಡುವಲ್ಲಿ ಕಿಚ್ಚಿನುರಿಗಂಜಿದೊಡಾ ಕನಕಕ್ಕೆ ಕೂಡಿದ**

**ಕುಟಿಲತೆ ಪೋಕುಮೇ? ಮಲಕಲಂಕಮನೂದಿ ಕಳಲ್ಚಿ ಕಾಂತಿ ಸಂ ಪುಟದೊಳಗಾತ್ಮನಂ ನಿಲಿಸಿ ನಿರ್ಮಲನಗುವೆನೆಂಬ ಭವ್ಯನು**

**ತ್ಕಟ ತಪದುಬ್ಬೆಗಳ್ಕಿದೊಡೆ ಸಿದ್ಧಿಪುದೇ!-ಅಪರಾಜಿತೇಶ್ವರಾ**-(ಅ. ಶ-೨೬)

ಮುಕ್ತಿಯೇ ಜೀವ ಬಯಸುವ ಆತ್ಯಂತಿಕ ಸುಖ. ಆದರೆ ಅದು ಸಿದ್ಧಿಸುವುದೇನಿದ್ದರೂ ಕರ್ಮಕ್ಷಯ ಮಾಡಿಕೊಂಡ ಜೀವಕ್ಕೆ. ಕರ್ಮಕ್ಷಯಕ್ಕೆ ದೀಕ್ಷೆಯ ಜೊತೆಗೆ ಜಿನನಲ್ಲಿ ಅನನ್ಯ ಭಕ್ತಿ ಬೇಕು. ಅದನ್ನೇ ಹೀಗೆ ಸ್ಪಷ್ಟ ಪಡಿಸುತ್ತಾನೆ.

**ಮುಕ್ತಿಯೊಳಲ್ಲದಿಲ್ಲ ಸುಖ, ಅಂತದು ಕರ್ಮವಿನಾಶವಿಲ್ಲದೆ**

**ವ್ಯಕ್ತಿಗೆ ಬರದಾ ದುರಿತನಾಶಕೆ ದೀಕ್ಷೆಯೆ ಬೇಕು ಮೋಹದಾ**

**ಶಕ್ತಿಯೊಳಿರ್ದವಂಗೆ ರುಚಿದೋರದು ದೀಕ್ಷೆಯದರ್ಕೆ ನಿಮ್ಮ ಸದ್ಭಕ್ತಿಯೆ**

**ಬೀಜಮೊಯ್ಯನದನೀವುದು ಮುಂದಪರಾಜಿತೇಶ್ವರಾ**- (ಅ. ಪ-೨೦)

ಆ ಭಕ್ತಿಗಾಗಿ ಇಲ್ಲಿ ಮೊರೆಯಿಟ್ಟಿದ್ದಾನೆ.

ಇನ್ನೊಂದು ಪದ್ಯದಲ್ಲಿ "**ನಿಮ್ಮತ್ತಣ ಭಕ್ತಿಯೊಂದೆ ನಿಜಸಿದ್ಧಿಯಲಾ-ಅಪರಾಜಿತೇಶ್ವರಾ**

ಅಷ್ಟೇ ಅಲ್ಲ- "**ಆವನುಮಕ್ಕೆ ನಿಮ್ಮಡಿಗಳಂ ನೆನೆವಾತನೆ ಬಂಧು ಸ**

**ದ್ಭಾವದೆ ಪೂಜಿಪಾತನೆ ಸಖಂ ಶ್ರುತಯೋಗ ಸಮೃದ್ಧನೆನ್ನ ಸಂ**

**ಜೀವಕನೆಂಬೆನೇಕನಿತು ಪಕ್ಷವಿದೆಂಬೆಯ ನನ್ನ ಮೆಚ್ಚಿನಾ**

**ದೇವನ ನಚ್ಚಿದಾತನೆನಗನ್ಯನೆ ಪೇಳಪರಾಜಿತೇಶ್ವರಾ-** (ಅ. ಶ-೫೪)

**ರತ್ನಾಕರನ ಹಾಡುಗಳು**

ರತ್ನಾಕರನ ಧರ್ಮ ಸಮನ್ವಯ ದೃಷ್ಟಿಗೆ ಅವನ ಹಾಡುಗಳು ಬಲವಾದ ಪುರಾವೆಯನ್ನೊದಗಿಸುತ್ತವೆ. ಆತ್ಮ ತತ್ವ, ಸಂಸಾರ ನಿರಸನ, ವೈರಾಗ್ಯ, ಕರ್ಮ ಬಂಧನ ಮತ್ತು ಅದರಿಂದ ಬಿಡುಗಡೆ, ಮುಕ್ತಿ- ಈ ಪರಿಕಲ್ಪನೆಗಳು ಜೈನವೂ ಸೇರಿದಂತೆ ಬಹುತೇಕ ಭಾರತೀಯ ಧರ್ಮ ಮತ್ತು ದರ್ಶನಗಳ ತಿರುಳಾಗಿರುವುದು ಕೂಡ ರತ್ನಾಕರನ ಧಾರ್ಮಿಕ ದೃಷ್ಟಿಕೋನ ಉದಾರವಾಗಲು ಕಾರಣವಾಗಿದೆ. ಭರತೇಶ ವೈಭವದ ರಚನೆಯ ನಂತರದಲ್ಲಿ ಜೈನ ಧಾರ್ಮಿಕರು ಕವಿಗೆ ಬಹಿಷ್ಕಾರ ಹಾಕಿದರೆಂಬ ಐತಿಹ್ಯ ನಿಜವಿರಬೇಕು. ಆ ನಂತರದಲ್ಲಿ ವೀರಶೈವ ಧರ್ಮಕ್ಕೆ ಪರಿವರ್ತನೆ ಹೊಂದಿ ಕೆಲವು ಕಾಲ ಆ ಧರ್ಮದಲ್ಲಿದ್ದು ವಚನ ಸಾಹಿತ್ಯ, ವೀರಶೈವ ಧರ್ಮಗಳನ್ನೆಲ್ಲ ಚೆನ್ನಾಗಿ ಅಭ್ಯಾಸ ಮಾಡಿದ್ದಿರಬೇಕು. ಅದಕ್ಕೆ ಅನೇಕ ಆಧಾರಗಳು ಅವನ ಮಹಾಕಾವ್ಯ ಭರತೇಶ ವೈಭವ ಮತ್ತು ಶತಕಗಳಲ್ಲಿ ದೊರೆಯುವುದಕ್ಕಿಂತ ಹೆಚ್ಚು ಢಾಳವಾಗಿ ಹಾಡುಗಳಲ್ಲಿ ದೊರೆಯುತ್ತದೆ. ತನ್ನ ಮಹಾ ಕಾವ್ಯ, ಮತ್ತು ಶತಕಗಳಲ್ಲಿ ನಿರೂಪಿಸಿದ ಜೈನ ತತ್ತ್ವ ವಿಚಾರಗಳನ್ನೇ ಹಾಡುಗಳಲ್ಲೂ ನಿರೂಪಿಸುತ್ತಾನೆ. ಆದರೆ ನೇರವಾಗಿ ಮತ್ತು ದಟ್ಟವಾಗಿ . ಸಂಗೀತದ ಗಾಢ ಸಾಹಚರ್ಯ ಇರುವುದೇ ಈ ಹಾಡುಗಳ ವೈಶಿಷ್ಟ್ಯ. ವಚನಗಳ ಪ್ರಭಾವ ಸಾಕಷ್ಟು ಆಗಿರುವುದಕ್ಕೆ ವೀರಶೈವದ ಪದಪುಂಜಗಳನ್ನು, ಪಾರಿಭಾಷಿಕಗಳನ್ನು, ವಚನಗಳ ಸಾಲುಗಳನ್ನು ಹೆಚ್ಚಾಗಿಯೇ ಉದ್ಧರಿಸುವುದರಲ್ಲಿ ಕಾಣಬಹುದು. ಉದಾಹರಣೆಗೆ- "ಕಾದ ಕಬ್ಬಿಣಕಿತ್ತ ನೀರಿನಂತಿಹುದು ಯೋಗಿಯ ಮನ" ಮತ್ತು , " ನಮ್ಮ ಮನೆಯೊಳಿಂದು ಹಬ್ಬ ನಮಗೆ ಸಂದಣಿ ಬಹಳ" ಎಂದು ಪ್ರಾರಭವಾಗುವ ಹಾಡುಗಳು ಕ್ರಮವಾಗಿ ಅಕ್ಕ ಮಹಾದೇವಿಯ-"ಕಬ್ಬುನ ಉಂಡ ನೀರಿನಂತೆ......ಎಂಬ ಸಾಲನ್ನು .ಹಾಗೂ" " ನಮ್ಮ ಮನೆಯೊಳಿಂದು ಹಬ್ಬ ನಮಗೆ ಸಂದಣಿ ಬಹಳ" ಎಂಬ ಹಾಡನ್ನು ಯಥಾವತ್ತಾಗಿ ಹೋಲುತ್ತದೆ. ಅದೇ ರೀತಿ – "ದೇಹವೇ ದೇಗುಲ", "ಹುತ್ತವ ಬಡಿದಲ್ಲಿ ಫಲವೇನು", "ಭವಿಗಾತ್ಮಜ್ಞಾನವೇ ಬಾರದು" ಮೊದಲಾದವು ಕೂಡ ವೀರಶೈವದ ಅಭ್ಯಾಸ ಮತ್ತು ಪ್ರಭಾವದಿಂದ ಬಂದಿರುವಂಥವು. ನಿಜಗುಣ ಶಿವಯೋಗಿ ಮತ್ತು ಸರ್ಪಭೂಷಣ ಶಿವಯೋಗಿಗಳ "ಕೋಗಿಲೆ ಚೆಲ್ವ ಕೋಗಿಲೆ ಮುದ್ದು ಕೋಗಿಲೆ, ಜಾಣ ಕೋಗಿಲೆ" ಸಾಲನ್ನು ನೆನಪಿಸುವ ಸಾಲೂ ಇಲ್ಲಿದೆ. ಹರಿದಾಸರ ಅದರಲ್ಲೂ ಮುಖ್ಯವಾಗಿ ಪುರಂದರ ದಾಸರ ಕೀರ್ತನೆಗಳ ಪ್ರಭಾವವಂತೂ ಅತ್ಯಂತ ನಿಚ್ಚಳವಾಗಿ ಕಂಡುಬರುತ್ತದೆ. ಕೆಲವು ಸಾಲು ಸಾಲುಗಳೇ ಅಲ್ಪ ಸ್ವಲ್ಪ ಬದಲಾವಣೆಗಳೊಂದಿಗೆ ಇಲ್ಲಿ ಕಾಣಿಸಿಕೊಂಡಿವೆ. ಸ್ಪಷ್ಟವಾಗಿ ರಾಗ, ತಾಳಗಳ ಉಲ್ಲೇಖವಿಲ್ಲದಿದ್ದರೂ ಹಾಡುಗಳ ಧಾಟಿಯಂತೂ ಕೀರ್ತನೆಗಳದೇ. ಹರಿದಾಸರ ಸಮಕಾಲೀನನಾಗಿದ್ದುದು, ಅದರಲ್ಲೂ ಮಧ್ವಮತದ ತೌರೂರಾದ ಉಡುಪಿಗೆ

ಸಮೀಪದಲ್ಲಿದ್ದುದೂ ಈ ಹಾಡುಗಳ ಬರವಣಿಗೆಗೆ ಪ್ರೇರಕವಾಗಿದ್ದಿರಬೇಕೆಂಬುದರಲ್ಲಿ ಅನುಮಾನವೇ ಇಲ್ಲ.

ಜೈನ ಧರ್ಮದ ತತ್ತ್ವ, ಸಿದ್ಧಾಂತಗಳು, ಆಚಾರ- ವಿಚಾರಗಳು ಜನಸಾಮಾನ್ಯರಿಗೆ ತಲುಪಬೇಕೆಂಬ ಕವಿಯ ಉದ್ದೇಶದಿಂದಾಗಿ ಈ ಹಾಡುಗಳಲ್ಲಿ ಅತ್ಯಂತ ಸರಳವಾಗಿ ನಿರೂಪಿತವಾಗಿವೆ. ಜೊತೆಗೆ ಸಂಗೀತದ ಸಾಹಚರ್ಯವನ್ನು ಪಡೆದುಕೊಂಡಿವೆ.

ಸಂಸಾರದ ಅನಿತ್ಯತೆ, ಭೋಗ ವೈಭೋಗಗಳ ಕ್ಷಣ ಭಂಗುರತೆ, ಆತ್ಮದ ಅವಿನಾಶಿತ್ವಗಳನ್ನು ಮೇಲಿಂದ ಮೇಲೆ, ಉಪಮೆ, ಸಾಮತಿ, ದೃಷ್ಟಾಂತಗಳ ಮೂಲಕ ಶ್ರಾವಕ ಜೀವಿಗೆ ಮನವರಿಕೆ ಮಾಡಿಕೊಡುತ್ತಾ ಹೋಗುತ್ತಾನೆ.

'ಬಹು ತೆರ ಸಿರಿಯ ವಿಕಾರ', 'ಯೌವನವು ಕೆಮ್ಮುಗಿಲು', 'ಇಂದ್ರಿಯಗಳ ಜಯಿಸು', ಮುಂತಾದ ಹಾಡುಗಳಲ್ಲಿ ಸಂಸಾರದ ಅನಿತ್ಯತೆಯನ್ನು ಸಾರಿ ಹೇಳಿದರೆ, 'ಕರ್ಮವೆ ಬಲ್ಲಿತಲ್ಲಾ' 'ನಾ ಮಾಡಿದಷ್ಟು ನನಗೆ', 'ಪೂರ್ವ ಜನ್ಮದ ಕರ್ಮವಿದು ಕಾಡುತಿಹುದು' ಮುಂತಾದವುಗಳಲ್ಲಿ ಕರ್ಮ ಬಂಧನದ ಬಿಗುಹನ್ನು ಹೇಳುತ್ತಾನೆ. ಇನ್ನುಳಿದ ಅನೇಕ ಹಾಡುಗಳಲ್ಲಿ ಜೈನಧರ್ಮದ ಪಂಚಾಣುವ್ರತಗಳು, ಸ್ಯಾದ್ವಾದ, ಧ್ಯಾನ, ಅದರ ಮಹಿಮೆ, ಇಂದ್ರಿಯಗಳನ್ನು ನಿಗ್ರಹಿಸುವ ಬಗೆ, ಜಿನಭಕ್ತಿಯನ್ನು ಸಾಧಿಸುವ ಬಗೆ, ಇವುಗಳನ್ನು ಮತ್ತೆ ಮತ್ತೆ ಹೇಳುತ್ತ ಹೋಗುತ್ತಾನೆ. ಒಟ್ಟಾರೆ ವೈರಾಗ್ಯವೇ ಇವುಗಳ ಪ್ರಧಾನ ಧ್ವನಿ. ಜೈನ ಪೌರಾಣಿಕ ಕಥೆಗಳು, ಆಖ್ಯಾನಗಳು, ತತ್ವಗಳು ಇಲ್ಲಿನ ಅನೇಕ ಹಾಡುಗಳಿಗೆ ಹಿನ್ನೆಲೆಯಾಗಿದ್ದು ಅವನ ಧರ್ಮನಿಷ್ಠತೆಗೆ ಪ್ರಖರ ನಿದರ್ಶನಗಳಾಗಿವೆ. ಎಲ್ಲಕ್ಕಿಂತ ಹೆಚ್ಚಾಗಿ ವಿದೇಹ ಕ್ಷೇತ್ರದ ಸೀಮಂದರ ಸ್ವಾಮಿಯ ಬಗೆಗಿನ ರತ್ನಾಕರನ ಭಕ್ತ ಚೇತನದ ಆರ್ತಭಕ್ತಿಯ ಮೊರೆ, ಆರ್ದ್ರ ಭಾವ ಇಲ್ಲಿನ ಹಾಡುಗಳಲ್ಲಿ ಮಡುಗಟ್ಟಿ ನಿಂತಿರುವುದು ನಿಚ್ಚಳವಾಗಿ ಕಂಡು ಬರುತ್ತದೆ. ಜೊತೆಗೆ ಭೈರರಸನ ಕುಮಾರಿಯಲ್ಲಿ ಅನುರಕ್ತನಾಗಿದ್ದ ಮತ್ತು ವೀರಶೈವಕ್ಕೆ ಮತಾಂತರಗೊಂಡಿದ್ದ ರತ್ನಾಕರನ ಕೆಲವು ವೈಯಕ್ತಿಕಸಂಗತಿಗಳು ಕೂಡ ಇಲ್ಲಿಯ ಒಂದೆರಡು ಹಾಡುಗಳಲ್ಲಿ ಅಭಿವ್ಯಕ್ತಿಯನ್ನು ಪಡೆದುಕೊಂಡಿವೆ.

ಉದಾಹರಣೆಗೆ-

೧)ಇಂದ್ರಿಯಕೆ ಸಿಕ್ಕಿ ನೊಂದೆನಯ್ಯ ಗುರುವೆ ಮಾ

ಹೇಂದ್ರಕೀರ್ತಿ ಕಾಯೋ ಕರುಣದ ತರುವೆ

ಕಣ್ಣ ಸವಿಗಾಗಿ ಕಂಡಲ್ಲಿ ಹಾರಿ ಎಳೆ

ವೆಣ್ಣೆಗೆ ಬಯಸಿ ಭ್ರಾಂತಿ ತಲೆಗೇರಿ

ಉಣ್ಣದ ನೋವನುಂಡು ಸಲೆ

**ಬಸವಳಿದನ ಕಾಯೋ ಮರೆದೋರಿ........**

**೨) ಅಯ್ಯಯ್ಯೋ ಪಾಪಿ ಜೀವವೆ ನೀ ಮಾಡಿದ**

**ಹುಯ್ಯಲಿನ್ನಾರಿಗೆ ಹೇಳಲಿ**

**ತುಂಬಿದ ಸುಧಾಬ್ಧಿಯಿದಂತೆ ಕೆಟ್ಟಹುಳಿ**

**ಯಂಬಿಲಕೆ ಕೈಯನಾಂತೆಯಾ**

**..............................................ಪರ**

**ಶಂಭುಲಿಂಗ ಧರಿಸಿದೆಯಾ**

********

ಭಾರತ ವಿಭಿನ್ನ ಧರ್ಮಗಳ ಜಾತಿಗಳ ನಂಬಿಕೆಗಳ ಆಚಾರ-ವಿಚಾರಗಳ, ಸಂಸ್ಕೃತಿಗಳ ಬೀಡು. ಇಂಥ ಪರಿಸರದಲ್ಲಿ ತಮ್ಮ ಧರ್ಮದಲ್ಲಿ ಆಳವಾದ ಶ್ರದ್ಧೆಯಿಟ್ಟುಕೊಂಡು ತಮ್ಮ ಜಾತಿಯ ಮತ್ತು ಧರ್ಮದ ವಿಚಾರದಲ್ಲಿ ಅಭಿಮಾನ ಹಾಗೂ ಹೆಮ್ಮೆ ತಳೆದು ಬಾಳ್ವೆ ನಡೆಸುವುದಕ್ಕೆ ಯಾರಿಗೂ ಯಾರ ಅಡ್ಡಿಯೂ ಇಲ್ಲ. ಅದು ಬಿಟ್ಟು ತಮ್ಮ ಜಾತಿಯೇ ಶ್ರೇಷ್ಠ, ತಮ್ಮ ಧರ್ಮವೇ ಶ್ರೇಷ್ಠ , ತಮ್ಮ ನಂಬಿಕೆಯ ಮುಂದೆ ಬೇರೆ ಯಾರ ನಂಬಿಕೆಯೂ ಲೆಕ್ಕಕ್ಕೇ ಇಲ್ಲ ಎಂಬ ಮೇಲಾಟವೂ ಅಹಮಿಕೆಯೂ ಹಿಂದೆಂದಿಗಿಂತ ಇಂದು ನಮ್ಮ ದೇಶದಲ್ಲಿ ತೀವ್ರವಾಗುತ್ತಿರುವುದು ನಿಜಕ್ಕೂ ಅತ್ಯಂತ ಅಪಾಯಕರ ಹಾಗೂ ವಿಷಾದನೀಯ. ಸ್ವಾತಂತ್ರ್ಯೋತ್ತರ ಭಾರತದಲ್ಲಂತೂ ಬಹುತೇಕ ಎಲ್ಲ ರಾಜಕೀಯ ಪಕ್ಷಗಳು ರಾಜಕಾರಣಿಗಳು ಮತ ಗಳಿಸಲು ಜಾತಿಗಳನ್ನು ಧರ್ಮಗಳನ್ನು ವೋಟಿನ ಬ್ಯಾಂಕುಗಳಾಗಿ ಮಾರ್ಪಡಿಸಿಕೊಂಡು ಜನರನ್ನು ಜಾತಿಗಳನ್ನು ಧರ್ಮಗಳನ್ನು ಪರಸ್ಪರ ಎತ್ತಿಕಟ್ಟುತ್ತ ಹೋಗುತ್ತಿರುವುದೇ ಅದಕ್ಕೆ ಕಾರಣವೆಂಬುದು ಸೂರ್ಯನಷ್ಟೇ ಸತ್ಯ. ಇದರಿಂದ ಮನುಷ್ಯ-ಮನುಷ್ಯರಲ್ಲಿ ಪರಸ್ಪರ ಸ್ನೇಹ ಸೌಹಾರ್ದಗಳು ಕಣ್ಮರೆಯಾಗಿ ಪರಸ್ಪರರಲ್ಲಿ ಮೇಲು ಮೇಲೆ ವೈಮನಸ್ಯವಿಲ್ಲವೆಂಬಂತೆ ತೋರಿಸಿಕೊಂಡರೂ ಅಂತರ್ಯದಲ್ಲಿ ವಿಶ್ವಾಸ, ಗೌರವ, ನಂಬಿಕೆಗಳ ಬದಲು ಅವಿಶ್ವಾಸ, ತಿರಸ್ಕಾರ, ಅನುಮಾನಗಳು ಹೆಚ್ಚಾಗುತ್ತಿವೆ.

ಇಂಥ ಸಂದರ್ಭದಲ್ಲಿ ಸುಮಾರು ೫೦೦ ವರ್ಷಗಳ ಹಿಂದೆ ಬದುಕಿದ್ದ ಕವಿಯೊಬ್ಬ ತನ್ನ ಧರ್ಮದಲ್ಲಿ ಆಳವಾದ ಭಕ್ತಿ, ಶ್ರದ್ಧೆಯನ್ನು ಹೊಂದಿದ್ದೂ ತನ್ನ ಪರಿಸರದ ಧರ್ಮಗಳ ಬಗೆಗೆ ಗೌರವ ತಾಳಿ, ತಾನು ದೇವರೆಂದೇ ತಿಳಿದು ಆರಾಧಿಸುವ ತೀರ್ಥಂಕರನಿಗೂ ವೈದಿಕ ಇಲ್ಲವೆ ವೀರಶೈವ ಧರ್ಮದವರು ದೇವರೆಂದು ತಿಳಿದು ಆರಾಧಿಸುವ ಶಿವನಿಗೂ ಮೂಲಭೂತವಾಗಿ ವ್ಯತ್ಯಾಸವೇನಿಲ್ಲವೆಂದು ಭಾವಿಸಿ ಜಿನನನ್ನೂ ಶಿವ, ಶಂಭು, ವಿಷ್ಣು, ಶ್ರೀಹರಿ, ಜಗನ್ನಾಥ ಎಂದೇ ಸಂಬೋಧಿಸುತ್ತಾನೆಂದರೆ ಅವನ

ಧಾರ್ಮಿಕ ದೃಷ್ಟಿಕೋನ ಅದೆಷ್ಟು ವಿಶಾಲವಾದ್ದು, ಅದೆಂಥ ಸೌಹಾರ್ದ ಮನೋಭಾವ ಈ ಕವಿಯದು ಎಂದು ಆಶ್ಚರ್ಯವಾಗುತ್ತದೆ. ಭರತೇಶ ವೈಭವದಲ್ಲಿ ಬರುವ

'ಜಿನನೆಂದು ಶಿವನೆಂದು ಪೆಸರೀಶಗುಂಟದು । ಜಿನರಾತ್ರಿ ಶಿವರಾತ್ರಿಯೆಂದು।' ಎಂಬ ಸಾಲುಗಳು, ಹಾಗೂ ಸಮವಸರಣಸಂಧಿಯಲ್ಲಿ ಬರುವ ಜಿನ ವರ್ಣನೆಯಲ್ಲಿ ಭಾರತೀಯ ಪರಂಪರೆಯ ಶಿವನ ಮೂರ್ತಿಯನ್ನು ಜಿನನಲ್ಲಿ ಸಮಾವೇಶಗೊಳಿಸಿರುವುದು, ಜೈನವ್ರತ ಶೈವವ್ರತಗಳಿಗೆ ಅಭೇದ ಕಲ್ಪಿಸಿರುವುದು ಇವೆಲ್ಲ ನಿಚ್ಚಳವಾಗಿ ರತ್ನಾಕರನಿಗೆ ವೀರಶೈವದ ಬಗೆಗಿರುವ ಒಲವು, ಎರಡೂ ಧರ್ಮಗಳನ್ನು ತನ್ನ ವ್ಯಕ್ತಿತ್ವದಲ್ಲಿ ಸಮರಸಗೊಳಿಸಿಕೊಂಡಿರುವುದಕ್ಕೆ ಹಾಗೂ ಇನ್ನೊಂದು ಧರ್ಮದ ಬಗೆಗಿರುವ ಸೌಹಾರ್ದ ಮನೋಭಾವಕ್ಕೆ

ಉಜ್ವಲ ಸಾಕ್ಷಿ. ಹಾಗೆಯೇ ಶತಕ ಮತ್ತು ಹಾಡುಗಳಲ್ಲೂ ಇದೇ ಸೌಹಾರ್ದ ಮನೋಭಾವ, ಸಮನ್ವಯ ದೃಷ್ಟಿ ನಿಚ್ಚಳವಾಗಿ ಕಂಡುಬರುವುದನ್ನು ಈ ವಿಶ್ಲೇಷಣೆಯ ಉದ್ದಕ್ಕೂ ನೋಡಿದ್ದೇವೆ.

ಆತ್ಮದ ಮುಕ್ತಿಯನ್ನು ಸಾಧಿಸುವುದೇ ಬಹುತೇಕ ಎಲ್ಲ ಭಾರತೀಯ ಧರ್ಮ, ದರ್ಶನಗಳ ಗುರಿ. ಆ ಉದ್ದೇಶ ಸಾಧನೆಗಾಗಿ ಅವು ಮುಮುಕ್ಷುಗಳಿಗೆ ತಮ್ಮ ಧರ್ಮದ ನೆಲೆಯಲ್ಲಿ ತಮ್ಮದೇ ಆದ ಸಾಧನಾ ಪಥವೊಂದನ್ನು ನಿಗದಿಪಡಿಸಿವೆ. ಅವುಗಳಲ್ಲಿ ಸಾಮಾನ್ಯವಾಗಿ ನಾವು ನೋಡುವುದು ಅಶಾಶ್ವತವಾದ ಈ ಪ್ರಾಪಂಚಿಕ ಭೋಗಭಾಗ್ಯಗಳಲ್ಲೇ ಮುಳುಗಿರುವಷ್ಟು ಕಾಲವೂ ಜೀವನಿಗೆ ಆತ್ಯಂತಿಕ ಗುರಿಯ ಸಾಧನೆಯತ್ತ ಮನಸ್ಸಾಗುವುದಿಲ್ಲ ಹಾಗೂ ಸಾಂಸಾರಿಕ ಭೋಗಭಾಗ್ಯಗಳು ಜೀವಿಗೆ ಪಾರಮಾರ್ಥಿಕದತ್ತ ಅಡಿಯಿಡಲು ಬಿಡುವುದಿಲ್ಲವಾದ ಕಾರಣ ಸಾಮಾನ್ಯವಾಗಿ ಎಲ್ಲ ಭಾರತೀಯ ಧರ್ಮ, ದರ್ಶನಗಳು ಇವನ್ನೆಲ್ಲ ಅಶಾಶ್ವತವೆಂದು ತಿಳಿದು ಕಿತ್ತೊಗೆಯಬೇಕೆಂಬ 'ಸಂಸಾರ ನಿರಸನ'ದ ಉಪದೇಶವನ್ನು ಬಲವಾಗಿ ಒತ್ತುಕೊಟ್ಟು ಹೇಳುತ್ತವೆ. ಶ್ರಮಣ ಪರಂಪರೆಯ ಧರ್ಮಗಳು ಕೂಡ ಇದಕ್ಕೆ ಹೊರತಲ್ಲ. ಅದರಲ್ಲೂ ಜೈನ ಧರ್ಮ ಬೆರೆಲ್ಲ ಧರ್ಮಗಳಿಗಿಂತ ಇದಕ್ಕೆ ಇನ್ನಷ್ಟು ಒತ್ತುಕೊಟ್ಟು ಹೇಳುತ್ತದೆ. ಆದರೆ ರತ್ನಾಕರ ಸಾಂಸಾರಿಕ ಭೋಗಗಳು ಅಶಾಶ್ವತ, ಅಧ್ರುವ ಎಂದೇ ಹೇಳಿದರೂ ಗೃಹಸ್ಥ ಧರ್ಮ ತ್ಯಾಜ್ಯ ಎಂದು ಸಾರಾ ಸಗಟಾಗಿ ಎಲ್ಲಿಯೂ ಹೇಳಹೋಗಿಲ್ಲ. ಮೇಲಿನ ವಿಶ್ಲೇಷಣೆಯಲ್ಲಿ ನೋಡಿದಂತೆ ತನ್ನ ಶತಕಗಳಲ್ಲಿ ಸಂಸಾರಿಜೀವಿಗೆ ಅವನು ನೀಡುವ ಸಂದೇಶ ಅತ್ಯಂತ ಆಪ್ಯಾಯಮಾನವೂ ಕಾರ್ಯಸಾಧ್ಯವಾದುದೂ ಪ್ರಸ್ತುತ ಕಾಲಕ್ಕಷ್ಟೇ ಅಲ್ಲದೆ ಎಲ್ಲ ಕಾಲಕ್ಕೆ ಸಲ್ಲುವಂಥದೂ ಆಗಿದೆ.

**ತನುವಂ ಸಂಘದ ಸೇವೆಯೊಳ್ ಮನಮನಧ್ಯಾತ್ಮದಭ್ಯಾಸದೊಳ್**
**ಧನಮಂ ದಾನ ಸುಪೂಜೆಯೊಳ್ದಿನಮನರ್ಹದ್ಧರ್ಮಕಾರ್ಯಪ್ರವ**
**ರ್ತನೆಯೊಳ್ ಪರ್ವವನೊಲ್ದು ನೋಂಪಿಗಳೊಳಿರ್ದಾಯುಷ್ಯಮಂ ಮೋಕ್ಷಚಿಂ**
**ತನೆಯೊಳ್ ತೀರ್ಚುವ ಸದ್ಗೃಹಸ್ಥನನಘಂ!**

ಆದ್ದರಿಂದ ಗೃಹಸ್ಥ ಜೀವನ ತ್ಯಾಜ್ಯವಲ್ಲ, ತಿರಸ್ಕಾರಾರ್ಹವೂ ಅಲ್ಲ. ಬದಲಿಗೆ ಅದು ಮೋಕ್ಷ ಸಾಧನೆಗೆ ಆಶ್ರಯವಾದ ಸಾಧನಾಭೂಮಿ. ರತ್ನಾಕರನ ಕೃತಿಗಳಲ್ಲಿ ಕಂಡುಬರುವ ಈ ಧಾರ್ಮಿಕ ಸಮನ್ವಯತೆ ಮತ್ತು ಜೀವನ ಶ್ರದ್ಧೆ ಎಲ್ಲ ಕಾಲಕ್ಕೂ ಅತ್ಯಂತ ಪ್ರಸ್ತುತವೂ ಕಾರ್ಯಸಾಧುವೂ ಉಪಾದೇಯವೂ ಆಗಿದ್ದು ಜೀವನಪರವಾದ ಭದ್ರ ಬುನಾದಿಯ ಮೇಲೆ ನಿಂತಿರುವ ಜೀವನದರ್ಶನವಾಗಿದೆ.

* * *

# ಅಜ್ಞಾತ ಕವಯತ್ರಿ 'ಶ್ರೀಮತಿ'

## ಡಾ.ಸಂಧ್ಯಾ.ವಿ

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಕವಯತ್ರಿಯರ ಉಲ್ಲೇಖ ಅತಿ ವಿರಳ. ವಚನಕಾರ್ತಿಯರನ್ನು ಹೊರತು ಪಡಿಸಿದರೆ ಮಹಿಳೆಯರ ಸಂಖ್ಯೆ ಬೆರಳೆಣಿಕೆಯಷ್ಟೇ ಎನ್ನಬಹುದು. ಮಹಿಳೆಯರ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡುತ್ತಿದ್ದ ಜೈನಧರ್ಮದಲ್ಲಿ, ಲಿಪಿಕಾರ್ತಿಯರಾಗಿ, ಗ್ರಂಥಗಳನ್ನು ಪ್ರತಿಮಾಡಿಸಿ ದಾನ ನೀಡುವಲ್ಲಿ ಕಂಡುಬರುವಂತೆ ಲೇಖಕಿಯರಾಗಿ, ಕವಯತ್ರಿಯರಾಗಿ ಜೈನ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುವುದಿಲ್ಲ. ಇಂತಹ ಸಂದರ್ಭಗಳಲ್ಲಿ ಕವಯತ್ರಿಯರ ಅಸ್ಪಷ್ಟ ವಿಚಾರಗಳೂ ಹೆಚ್ಚು ಚರ್ಚೆಗೆ ಒಳಪಡುವಂತಾಗುವುದು ಸಹಜ. ಕಂತಿ ಎಂಬ ಹೆಸರಿನಲ್ಲಿ ದೊರಕಿರುವ ಕೆಲವು ಚಿತ್ರಕಾವ್ಯಗಳ ರಚನಾಕಾರ್ತಿ ಯಾರಿರಬಹುದು? ಅವಳ ಕಾಲ ಯಾವುದು? ಎನ್ನುವುದನ್ನು ಕುರಿತು ಹಲವಾರು ವಿದ್ವಾಂಸರು ಚರ್ಚೆ ನಡೆಸಿದ್ದಾರೆ.

ಪ್ರಾಚೀನ ಕನ್ನಡಸಾಹಿತ್ಯದಲ್ಲಿ 'ಶ್ರೀಮತಿ' ಎಂಬ ಹೆಸರಿನ ಕವಯತ್ರಿಯೊಬ್ಬಳು ಇದ್ದಳೆನ್ನುವ ವಿಚಾರವನ್ನು ಡಾ.ಕಮಲಾ ಹಂಪನ ಅವರು ಸುಮಾರು ೨೦ ವರ್ಷದ ಹಿಂದೆಯೇ ಉಲ್ಲೇಖಿಸಿದ್ದಾರೆ[೧]. ಅದಕ್ಕೂ ಮೊದಲು ಡಾ.ಎಂ.ಎ ಜಯಚಂದ್ರ ಅವರು 'ಶ್ರೀಮತಿ ಓರ್ವ ಜೈನ ಕವಯತ್ರಿ' ಎಂಬ ತಮ್ಮ ಲೇಖನದಲ್ಲಿ[೨] ಈ ಕವಯತ್ರಿಯನ್ನು ಕುರಿತು ಪ್ರಸ್ತಾಪಿಸಿದ್ದರು. ಆದರೆ ಆ ನಂತರ 'ಶ್ರೀಮತಿ'ಯನ್ನು ಕುರಿತು ಹೆಚ್ಚಿನ ಚರ್ಚೆಗಳು ನಡೆದಿಲ್ಲ. ಹಾಗಾಗಿ ಇವಳು ಬೆಳಕಿಗೆ ಬಾರದೆ ಅಜ್ಞಾತವಾಗಿಯೇ ಉಳಿದ ಕವಯತ್ರಿಯಾಗಿದ್ದಾಳೆ.

೧೨ನೆಯ ಶತಮಾನದಲ್ಲಿದ್ದಿರಬಹುದಾದ 'ಶ್ರೀಮತಿ' ರಚಿಸಿರುವ ಕಾವ್ಯಗಳು ದೊರೆತಿಲ್ಲ, ಅಷ್ಟೇ ಅಲ್ಲದೆ ಅವಳು ಯಾವ ಕೃತಿಯನ್ನು ರಚಿಸಿದ್ದಳೆನ್ನುವುದೂ ತಿಳಿದು ಬಂದಿಲ್ಲ. ಇವಳ ಜೀವನ–ಬದುಕಿನ ವಿಚಾರಕೂಡ ಸ್ಪಷ್ಟವಾಗಿ ತಿಳಿದು ಬಂದಿಲ್ಲ. ಇವಳ ಮೊದಲ ಉಲ್ಲೇಖ ರಾಘವಾಂಕನ 'ಸೋಮನಾಥಚರಿತೆ' ಯಲ್ಲಿ ದೊರಕುತ್ತದೆ. ಮತ್ತೊಂದು ಉಲ್ಲೇಖ ಕವಿ ನೇಮರಸನ 'ಲೋಭದತ್ತ ಚರಿತೆ'ಯಲ್ಲಿ ಕಂಡುಬರುತ್ತದೆ. ಈ ಎರಡು ಕೃತಿಗಳಲ್ಲಿ ಒಂದು ೧೨ನೆಯ ಶತಮಾನದ್ದಾದರೆ, ಮತ್ತೊಂದು ೧೬ನೆಯ ಶತಮಾನದ ಕಾವ್ಯ.

ಕವಿ ರಾಘವಾಂಕ ಉಲ್ಲೇಖಿಸಿರುವ 'ಶ್ರೀಮತಿ'ಯು ಓರ್ವ ಜೈನ ಮಹಿಳೆಯಾಗಿದ್ದಾಳೆ. ಇಲ್ಲಿ ಇವಳು ಕವಯತ್ರಿ ಎನ್ನುವ ಸೂಚನೆ ದೊರಕುವುದಿಲ್ಲ. ರಾಘವಾಂಕ ತನ್ನ ಸೋಮನಾಥ ಚರಿತೆಯಲ್ಲಿ ಜೈನ-ವೀರಶೈವ ಸಂಘರ್ಷದ ಚಿತ್ರಣವನ್ನು ನೀಡುವಾಗ ಈ 'ಶ್ರೀಮತಿ'ಯನ್ನು ಉಲ್ಲೇಖಿಸಿದ್ದಾನೆ. ಇಲ್ಲಿ ಕವಿಯು ವೀರಶೈವರಿಂದ ಹಿಂಸೆಗೆ ಒಳಗಾದ ಕೆಲವು ಜೈನರನ್ನು ಹೆಸರಿಸಿದ್ದಾನೆ.

**ನೇಮಿಯಂ ಕೆಡುಕುತ್ತಿ ಮಲಧಾರಿಗಳ ನಿಱಿದು**
**ಹೇಮಚಂದ್ರನನೊರಸಿ ಮಾಘನಂದಿಯ ಕೊಂದು**
**ಶ್ರೀಮತಿಗಳಂ ಪಿಡಿದು ತ್ರೈವಿದ್ಯರಂ ತಂದು ತಾರ ಕುಂಡೆಯ ಹಾಯಿಸಿ**
**ಭೂಮಿಗೊರಗಿಸಿ ವರ್ಧಮಾನರಂ ಶ್ರುತಿಕೀರ್ತಿ**
**ನಾಮಮಂ ಕೊಡೆದು ಪಾರಿಸಮಾನನೆಂದು ಕಾ**
**ಯ್ದ ಮೂಲಸಂಘ ಜಾಪುಲಿ ಸಂಘವೆಂಬುಭಯ ಸಂಘಮಂ ಭಂಗಿಸಿದನು॥**

(೫-೪೩)

ರಾಘವಾಂಕನ ಈ ಪದ್ಯದಲ್ಲಿ, ನೇಮಿಯನ್ನು ಕೆಡಹಿ, ಮಲಧಾರಿಗಳನ್ನು ಇರಿದು, ಹೇಮಚಂದ್ರ, ಮಾಘನಂದಿ, ತ್ರೈವಿದ್ಯರು, ವರ್ಧಮಾನ, ಶ್ರುತಿಕೀರ್ತಿಯರನ್ನು ಕೊಂದದ್ದಲ್ಲದೆ, ಮೂಲಸಂಘ ಚಾಪುಲಿ ಸಂಘಗಳನ್ನು ಭಂಗಿಸಿದ ವಿಚಾರದೊಂದಿಗೆ ಶ್ರೀಮತಿಯನ್ನೂ ಹಿಂಸಿಸಿದ ವಿಚಾರ ಉಕ್ತವಾಗಿದೆ.

ರಾಘವಾಂಕ ಇಲ್ಲಿ 'ಶ್ರೀಮತಿಗಳಂ' ಎಂದು ಬಹುವಚನ ಬಳಸಿರುವುದು ಕೆಲವೊಂದು ಅನುಮಾನಗಳನ್ನು ಮೂಡಿಸುತ್ತವೆ. ನೇಮಿ, ಹೇಮಚಂದ್ರ, ಮಾಘನಂದಿ, ತ್ರೈವಿದ್ಯರು, ವರ್ಧಮಾನ, ಶ್ರುತಿಕೀರ್ತಿ ಇದು ಅಂಕಿತನಾಮವಾಗಿದೆ ಇದರೊಂದಿಗಿರುವ 'ಮಲಧಾರಿ' ಎಂಬುದು ಒಂದು ವ್ರತವನ್ನು ಪಾಲಿಸುವ ವ್ಯಕ್ತಿಯನ್ನು ತಿಳಿಸುತ್ತದೆ. ಆದರೆ, 'ಶ್ರೀಮತಿ' ಎನ್ನುವುದು ಅಂಕಿತನಾಮವೇ ಆಗಿದ್ದಲ್ಲಿ 'ಗಳಂ' ಎಂಬ ಪ್ರಯೋಗವು ಶ್ರೀಮತಿ ಎಂಬ ಹೆಸರಿನ ಹಲವು ಮಹಿಳೆಯರಿದ್ದರು ಎನ್ನುವ ಅರ್ಥವನ್ನು ನೀಡುತ್ತದೆ. ಇಲ್ಲಿ ಶ್ರೀಮತಿ ಎನ್ನುವುದು ಇಂಥವರ ಪತ್ನಿ ಎಂಬ ಅರ್ಥವೂ ಹೊಂದುವುದಿಲ್ಲ. ಆಧುನಿಕ ಕನ್ನಡದಲ್ಲಿ ಬಳಸುವ 'ಶ್ರೀ-ಶ್ರೀಮತಿ' ಎಂಬ ಗೌರವ ಸೂಚಕಗಳು ವಸಾಹತೋತ್ತರದ ಕಾಲದಲ್ಲಿ 'ಮಿಸ್ಟರ್ & ಮಿಸೆಸ್' ಗೆ ಪರ್ಯಾಯವಾಗಿ ಬಂದ ಪದಗಳಾಗಿವೆ. ಇದು ಪ್ರಾಚೀನ ಕಾಲದಲ್ಲಿ ಬಳಕೆಯಲ್ಲಿರಲಿಲ್ಲ. ಜೊತೆಗೆ ಇಲ್ಲಿ ಉಕ್ತರಾಗಿರುವವರೆಲ್ಲಾ ಜೈನ ಸನ್ಯಾಸಿಗಳೇ ಆಗಿರುವುದರಿಂದ ಅವರ ಪತ್ನಿಯರು ಎಂಬ ಅರ್ಥದಲ್ಲಿ ಬಳಕೆಯಾಗಿರುವ ಸಾಧ್ಯತೆಯೂ ಇಲ್ಲ.

'ಶ್ರೀಮತಿ' ಎಂಬ ಪದವು 'ಕಂತಿ', 'ಗುಡ್ಡಿ' ಎಂಬಂತೆ ಜೈನ ಸನ್ಯಾಸಿನಿಯರನ್ನು ಕುರಿತು ಸಂಬೋಧಿಸುತ್ತಿದ್ದ ಪಾರಿಭಾಷಿಕ ಪದವಿರಬಹುದು ಎಂದು ಪರಿಗಣಿಸಲೂ ಸಾಧ್ಯವಾಗುವುದಿಲ್ಲ. ಜೈನ ಸನ್ಯಾಸಿನಿಯರನ್ನು 'ಕಂತಿ', 'ಆರ್ಯಿಕೆ', 'ಅಜ್ಜಿಕೆ' ಎಂದು ಕರೆದಿರುವಂತೆ 'ಶ್ರೀಮತಿ' ಎಂದು ಕರೆದಿರುವ ಉದಾಹರಣೆಗಳು ಶಾಸನಗಳಲ್ಲಾಗಲೀ ಕಾವ್ಯಗಳಲ್ಲಾಗಲೀ ಕಂಡುಬರುವುದಿಲ್ಲ. ಶ್ರವಣಬೆಳಗೊಳ, ಕೊಪ್ಪಳ ಮೊದಲಾದ

ಹಲವಾರು ಶಾಸನಗಳಲ್ಲಿ ಜೈನ ಸನ್ಯಾಸಿನಿಯರ, ವ್ರತಧಾರಿಗಳ ಉಲ್ಲೇಖ ದೊರಕುವೆಡೆಯಲ್ಲಿ 'ಶ್ರೀಮತಿ' ಎಂಬ ಪ್ರಯೋಗ ಬಂದಿಲ್ಲ. ಹಾಗಾಗಿ ಶ್ರೀಮತಿ ಎನ್ನುವುದು ಅಂಕಿತನಾಮವೇ ಆಗಿದೆ.

ರಾಘವಾಂಕನು 'ಶ್ರೀಮತಿಗಳಂ' ಎಂದು ಬಳಸಿರುವುದು ಗೌರವ ಸೂಚಕವಾಗಿಯೇ ಹೊರತು ಹಲವು ಮಹಿಳೆಯರನ್ನು ಕುರಿತಾಗಿ ಅಲ್ಲ ಎಂಬ ವಾದಕ್ಕೆ ಕೆಲವು ಶಾಸನಗಳು ಪುಷ್ಟಿನೀಡುತ್ತದೆ. ಉದಾಹರಣೆಗೆ ಕ್ರಿ.ಶ.೧೧೧೯ರ ಶಾಸನವು ಮಾಂಕಬ್ಬೆ ಕಂತಿಯು ತನ್ನ ಗುರುವಿಗೆ ನಿಶಿಧಿಯನ್ನು ಮಾಡಿಸಿದ ವಿಚಾರವನ್ನು "ನಿಜಗುರುಗೆ ನಿಶೀಧಿಗೆಯೆಂ ಮಾಂಕಬ್ಬೆಗಂತಿಯರ್ಮ್ಮಾಡಿಸಿದರ್" ಎಂದು ತಿಳಿಸಿದೆ[೩]. ಇಲ್ಲಿ ಕಂತಿಯರ್ ಮಾಡಿಸಿದರ್ ಎಂಬ ಬಹುವಚನ ಬಳಕೆಯಾಗಿದೆ. ಇದೇ ರೀತಿ ಕ್ರಿ.ಶ. ೧೧ನೆಯ ಶತಮಾನಕ್ಕೆ ಸೇರಿದ ಮತ್ತೊಂದು ಶಾಸನದಲ್ಲಿ[೪] "ಕಣ್ಣಬೆಕನ್ತಿಯರು ಕಳಸತವಾದಿಯ ತೀರ್ತ್ಥದ ಬಸದಿಗೆ ಕೊಟ್ಟರ್" ಎಂಬ ಬಹುವಚನ ಬಳಕೆ ಇರುವುದನ್ನು ಕಾಣಬಹುದು. ೭ನೆಯ ಶತಮಾನಕ್ಕೆ ಸೇರಿದ ಮತ್ತೊಂದು ಶಾಸನದಲ್ಲಿ[೫] "ಶ್ರೀ ನವಿಲೂರ್ಸಂಘದಾ ಗುಣಮತಿಅವ್ವೆಗಳಾ ನಿಸಿಧಿಗೆ.." ಎಂಬ ಬಳಕೆ ಇದೆ. ಏಕವಚನದ ಬಳಕೆ ಬರುವೆಡೆ 'ಕಂತಿಯರ್', 'ಅವ್ವೆಗಳು' ಎಂಬ ಬಹುವಚನದ ಪ್ರಯೋಗಗಳಿರುವಂತೆಯೆ, ರಾಘವಾಂಕನ ಕಾವ್ಯದಲ್ಲಿಯೂ 'ಶ್ರೀಮತಿ' ಎಂಬುದು 'ಶ್ರೀಮತಿಗಳ' ಎಂದಾಗಿದೆ. ಜೊತೆಗೆ ಇದು ಛಂದಸ್ಸಿಗೆ ಹೊಂದಲು ಅನುಕೂಲವಾಗುವಂತೆಯೂ ಬಳಕೆಯಾಗಿರಬಹುದು.

ಶ್ರೀಮತಿಯ ಕಾಲ : ರಾಘವಾಂಕ ಕ್ರಿಶ.೧೨೦೫ರ ಸುಮಾರಿನಲ್ಲಿ ಜನಿಸಿ ಕ್ರಿ.ಶ.೧೨೨೦ರ ಸುಮಾರಿಗೆ ಕಾವ್ಯರಚನೆಯನ್ನಾರಂಭಿಸಿ ಕ್ರಿ.ಶ.೧೨೯೫ರ ವರೆಗೂ ಜೀವಿಸಿರಬಹುದು ಎಂದು ಹಿರಿಯ ವಿದ್ವಾಂಸರ ತೀರ್ಮಾನಿಸಿದ್ದಾರೆ. ರಾಘವಾಂಕ ಉಲ್ಲೇಖಿಸಿರುವ ಶ್ರೀಮತಿಯು ರಾಘವಾಂಕನ ಪೂರ್ವದವಳು ಅಥವಾ ಹಿರಿಯ ಸಮಕಾಲೀನಳಾಗಿರುವ ಸಾಧ್ಯತೆಗಳಿವೆ. ಜೊತೆಗೆ ಈಕೆ ಶಿವಶರಣರೊಂದಿಗಿನ ಸಂಘರ್ಷದಲ್ಲಿ ಸಿಲುಕಿದ್ದಳು ಎಂಬ ವಿಚಾರವೂ ಕೂಡ ಇದೇ ಕಾಲವನ್ನು ಸೂಚಿಸುತ್ತದೆ. ೧೨ನೆಯ ಶತಮಾನದಲ್ಲಿ ಇಂತಹ ಹಲವು ಸಂಘರ್ಷಗಳು ನಡೆದಿರುವುದನ್ನು ಇತಿಹಾಸದಲ್ಲಿ ಗಮನಿಸಬಹುದು.

'ಶ್ರೀಮತಿ'ಯನ್ನು ಉಲ್ಲೇಖಿಸುವ ಮತ್ತೊಂದು ಕಾವ್ಯ 'ಲೋಭದತ್ತಚರಿತೆ'. ೧೫ನೆಯ ಶತಮಾನದಲ್ಲಿದ್ದ ಕವಿ ನೇಮರಸ ಈ ಕೃತಿಯ ಕರ್ತೃ. ಈ ಕೃತಿಯಲ್ಲಿ ಶ್ರೀಮತಿಯು ಕವಯತ್ರಿಯಾಗಿದ್ದಳು ಎನ್ನುವ ವಿಚಾರ ಸ್ಪಷ್ಟವಾಗಿ ತಿಳಿಯುತ್ತದೆ.

ಶ್ರೀಮತಿಯನು ಹಂಪನ ನಾಗಚಂದ್ರನ
ನೇಮಿಯನಗ್ಗಳಯಯ್ಯನನು
ರಾಮಶೀಯದ ಪೊನ್ನ ರನ್ನ ಜನ್ನರನೆನೆನೆ
ದೀ ಮಹಾಕೃತಿಯನು ಪೇಳುವೆನಾ ॥

ಇಲ್ಲಿ ಕವಿಯು ಪೂರ್ವದ ಹಲವು ಪ್ರಸಿದ್ಧ ಕವಿಗಳನ್ನು ಸ್ಮರಿಸಿದ್ದಾನೆ. ಅವರಲ್ಲಿ, ಹಂಪ, ನಾಗಚಂದ್ರ, ನೇಮಿ, ಅಗ್ಗಳ ಮೊದಲಾದವರೊಂದಿಗೆ ಶ್ರೀಮತಿಯ ಹೆಸರು ಸೇರಿದೆ. ಇದರಿಂದ ಇವಳೂ ಕೂಡ ಕಾವ್ಯವನ್ನು ರಚಿಸಿರುವಳೆಂದು ತಿಳಿದು ಬರುತ್ತದೆ. ಆದರೆ ಇವಳು ರಚಿಸಿರುವ ಕಾವ್ಯಗಳಾವುವು ಎಂಬ ವಿಚಾರ ಇಲ್ಲಿ ದೊರಕುವುದಿಲ್ಲ. ಅಲ್ಲದೆ ಇಲ್ಲಿ ಉಕ್ತಳಾಗಿರುವ ಶ್ರೀಮತಿಯ ಕಾಲವೂ ತಿಳಿದು ಬರುವುದಿಲ್ಲ.

ಕವಿ ರಾಘವಾಂಕ ಹಾಗೂ ನೇಮರಸರ ಉಲ್ಲೇಖದಲ್ಲಿ ಶ್ರೀಮತಿ ಎಂಬ ಐತಿಹಾಸಿಕ ಮಹಿಳೆಯೊಬ್ಬಳ ಹೆಸರು ತಿಳಿದು ಬರುತ್ತದೆ ಆದರೂ ಈ ಇಬ್ಬರೂ ತಿಳಿಸಿರುವ 'ಶ್ರೀಮತಿ' ಒಬ್ಬಳೇ ಆಗಿದ್ದಳೆನ್ನುವುದಕ್ಕೆ ಖಚಿತವಾದ ಆಧಾರ ದೊರಕುವುದಿಲ್ಲ.

ಡಾ.ಕಮಲಾ ಹಂಪನಾ ಅವರು ಈ ಶ್ರೀಮತಿಯನ್ನು ಕ್ರಿ.ಶ.೧೨೧೨ರ ಶಾಸನವೊಂದರಲ್ಲಿ ಉಕ್ತಳಾಗಿರುವ ಜಕ್ಕಲಾಂಬಳೊಡನೆ ಸಮೀಕರಿಸಿ, ಜಕ್ಕಲಾಂಬೆಯೇ ಶ್ರೀಮತಿ ಎಂದು ಊಹಿಸುತ್ತಾರೆ[೬] ಹದಿಮೂರನೆಯ ಶತಮಾನದ ಆರಂಭದ ಕಾಲದ ಜಕ್ಕಲಾಂಬೆಯು 'ಗುಣಾಂಕಮಾಲೆ ಚರಿತೆ' ಎಂಬ ಕೃತಿಯನ್ನು ರಚಿಸಿರುವುದಾಗಿ ತಿಳಿದು ಬರುತ್ತದೆ.

ಹೊಯ್ಸಳರ ಸಾಮಂತರಾಗಿ ಶಿಕಾರಿಪುರದ ಚಿಕ್ಕ ಮಾಗಡಿಯಲ್ಲಿ ಆಳ್ವಿಕೆ ನಡೆಸುತ್ತಿದ್ದ ಸಾಮಂತ ಅರಸು ಮನೆತನದ ಜಕ್ಕಲಾಂಬೆಯು ಹನ್ನೆರಡು-ಹದಿಮೂರನೆಯ ಶತಮಾನಕ್ಕೆ ಸೇರಿದವಳಾಗಿದ್ದಳು. ಇವಳು ತನ್ನ ಚಿಕ್ಕ ವಯಸ್ಸಿನಲ್ಲಿಯೇ ಸಮಾಧಿಮರಣವನ್ನು ಹೊಂದಿದ್ದಾಳೆ. ಇವಳ ಸಮಾಧಿಮರಣವನ್ನು ತಿಳಿಸುವ ಶಾಸನವೊಂದು ಇವಳ ಕುರಿತಾದ ಕೆಲವು ವಿಚಾರಗಳನ್ನು ಕಾವ್ಯಮಯವಾಗಿ ಬಣ್ಣಿಸಿದೆ[೭] ಈ ಶಾಸನವು ವೀರಬಲ್ಲಾಳನ ೨೩ನೆಯ ವರ್ಷದ ಆಳ್ವಿಕೆಯ ಕಾಲದ ಆಂಗೀರಸ ಸಂವತ್ಸರದಲ್ಲಿ ರಚಿತವಾದುದಾಗಿ ಕಾಲ ನಮೂದಿಸಿದೆ. ಇದು ಕ್ರಿ.ಶ.೧೨೧೨ಕ್ಕೆ ಸರಿ ಹೊಂದುತ್ತದೆ. ಜಕ್ಕಲಾಂಬೆಯು 'ಚರಿತ್ರ ಗುಣಾಂಕ ಮಾಲೆ' ಎಂಬ ಕಾವ್ಯವನ್ನು ಬರೆದಿದ್ದಾಳೆಂದು ಶಾಸನವು ತಿಳಿಸುತ್ತದೆಯಾದರೂ ಈ ಕೃತಿಯು ಉಪಲಬ್ಧವಿಲ್ಲ. ಶಾಸನ ಕವಿಯೇ ಜಕ್ಕಲಾಂಬೆಯ ಈ ಕೃತಿಯ ಕುರಿತಾಗಿ ಕೆಲವೊಂದು ಮಾಹಿತಿ ತಿಳಿಸಿದ್ದಾನೆ.

**ಪರಿಕಿಸಿ ಸದ್ಬುಧರ್ ಪೊಗಳೆ ತನ್ನ ಚರಿತ್ರ ಗುಣಾಂಕ ಮಾಲೆಯಂ**
**ವಿರಚಿಸಿ ಸುಪ್ರಬನ್ಧಮೆನೆ ದಿಕ್ಕುಳ ಭಿತ್ತಿ ಗಳೊಳ್ತೆರಳ್ಚಿ ಮುಂ**
**ಬರೆದುದನೀಗಳಾ ದಿವಿಜಲೋಕದೊಳೊಪ್ಪುವ ಲೇಖಜಾಳದೊ**
**ಳ್ಬರೆಯಿದೆನೆನ್ದು ಜಕ್ಕಲೆ ಮಹಾಸತಿಯೇಜಿದಳಲ್ತೆ ಸಗ್ಗಮಂ ॥**

ಜಕ್ಕಲಾಂಬೆಯ ತಾಯಿ ಲಚ್ಚವ್ವೆ, ತಂದೆ ಸಾಮಂತ ಮಂಡಣಮುದ್ದ. ಇವರನ್ನು ಈ ಸ್ಥಳದ ಇನ್ನೂ ಕೆಲವು ಶಾಸನಗಳು ಉಲ್ಲೇಖಿಸುತ್ತವೆ. ಜಕ್ಕಲಾಂಬೆಯ ಪತಿಯನ್ನು ಕುರಿತಾಗಿ ಶಾಸನವು ಕಾಂತ 'ವಿನೂತ ಚರತಂ' ಎಂದಷ್ಟೇ ಪರಿಚಯಿಸಿದೆ. ಈತನ ಕುರಿತಾದ ಮತ್ಯಾವ ವಿವರವೂ ದೊರಕುವುದಿಲ್ಲ.

ಈ ಸುದೀರ್ಘ ಶಾಸನ ಪದ್ಯದಲ್ಲಿ ಶಾಸನಕವಿಯು ಇವಳನ್ನು ವರಜಕ್ಕಲಾಂಬೆ, ಶ್ರೀಜಕ್ಕಲಾಂಬೆ, ಮಹಾಸತಿ, ಜಕ್ಕವ್ವೆ, ಜಕ್ಕಲೆ, ಜಕ್ಕಲಾಂಬಿಕೆ, ಜಕ್ಕಲಾಂಬಾಸತಿ, ಜಕ್ಕಲೆನಾರಿ ಎಂದು ಮೊದಲಾಗಿ ಕರೆದಿರುವನಲ್ಲದೆ ಪತಿವ್ರತಾ ಜಕ್ಕಲಾಂಬೆ ಎಂಬ ವಿಶೇಷಣವನ್ನೂ ಸೇರಿಸಿ ಕರೆದಿದ್ದಾನೆ. ಇದೇ ಪ್ರಕಾರ 'ಶ್ರೀಮತಿ ಜಕ್ಕಲಾಂಬೆ' ಎಂದೂ ಒಂದು ಬಾರಿ ಕರೆದಿದ್ದಾನೆ. ಇಲ್ಲಿ ಶ್ರೀಮತಿ ಎನ್ನುವುದು ಅಂಕಿತನಾಮವಾಗಿರದೆ, ಗುಣವಾಚಕವಾಗಿದೆ. ಆದರೆ, ಡಾ.ಕಮಲಾಹಂಪನಾ ಅವರು 'ಶ್ರೀಮತಿ' ಎಂಬುದು ಜಕ್ಕಲಾಂಬೆಯ ಕಾವ್ಯನಾಮ ಎಂದು ತಿಳಿಸಿದ್ದಾರೆ[೮]. ಇವಳು ವೀರಶೈವರೊಡನೆ ಸಂಘರ್ಷವೊಂದರಲ್ಲಿ ಸಿಲುಕಿ ಅಪಮಾನವನ್ನು ಹೊಂದಿದ್ದಾಳೆ. ಇದೇ ಕಾರಣಕ್ಕಾಗಿ ಸಮಾಧಿಮರಣ ಹೊಂದುವ ದೃಡನಿಶ್ಚಯವನ್ನು ಕೈಗೊಂಡಿದ್ದಾಳೆ. ಅಲ್ಲದೆ ಪತ್ನಿಗಾದ ಅಪಮಾನವನ್ನು ತಡೆಯಲು ಹೋಗಿ ಇವಳ ಪತಿ ಹತನಾಗಿರಬಹುದೆಂದು ಇವರು ಊಹಿಸಿದ್ದಾರೆ. ಆದರೆ ಕಾಂತ 'ವಿನೂತ ಚರತಂ' ಎಂದಷ್ಟೇ ಇವಳ ಪತಿಯನ್ನು ಒಂದೇ ಒಂದು ಪದದಲ್ಲಿ ಪರಿಚಯಿಸಿರುವ ಶಾಸನವು ಇಂತಹ ಯಾವುದೇ ಅನುಮಾನಕ್ಕೆ ಎಡೆ ನೀಡುವ ವಿಚಾರವನ್ನು ತಿಳಿಸಿಲ್ಲ. ಸಚ್ಚರಿತ್ರವತಿ ಎಂದು ಜಕ್ಕಲಾಂಬೆಯನ್ನು ಹೊಗಳಿರುವ ಶಾಸನ ಕವಿಯು ಇವಳು ಯಾವುದೇ ಸಂಘರ್ಷಕ್ಕೆ ಸಿಲುಕಿ, ಅಪಮಾನಕ್ಕೆ ಈಡಾಗಿದ್ದಳೆನ್ನುವ ವಿಚಾರವನ್ನೂ ತಿಳಿಸಿಲ್ಲ. ಜಕ್ಕಲಾಂಬೆಯ ತಂಗಿ ಮಲ್ಲವ್ವೆ ಎಂಬುವವಳು ಸಮಾಧಿಮರಣವನ್ನು ಹೊಂದಿದ ವಿಚಾರವನ್ನು ಈ ಶಾಸನ ದೊರಕಿರುವ ಸ್ಥಳದಲ್ಲಿನ ಮತ್ತೊಂದು ಶಾಸನವು ತಿಳಿಸುತ್ತದೆ. ಇದರ ಕಾಲವನ್ನು ವೀರಬಲ್ಲಾಳದೇವರ ವರುಷದ ೨೧ನೆಯ ಪ್ರಜಾಪತಿ ಸಂವತ್ಸರ ಎಂದು ತಿಳಿಸಿದೆ. ಇದು, ಬಲ್ಲಾಳದೇವನ ಕಾಲದ ೨೩ನೆಯ ಆಳ್ವಿಕೆ ಎಂದು ತಿಳಿಸಿರುವ ಜಕ್ಕಲಾಂಬೆಯ ಸಮಾಧಿ ಮರಣಕ್ಕೂ ಪೂರ್ವದಲ್ಲಿ ನಡೆದುದಾಗಿದೆ. ಜಕ್ಕಲಾಂಬೆಯು ವೀರಶೈವರೊಂದಿಗಿನ ಸಂಘರ್ಷಕ್ಕೆ ಸಿಲುಕಿ ಆ ನಂತರ ವೈರಾಗ್ಯ ತಾಳಿ ಸಮಾಧಿಮರಣವನ್ನು ಹೊಂದಿದ್ದಾಳೆಂದು ಕಾರಣವನ್ನು ಊಹಿಸುವುದಾದರೆ, ಇವಳಿಗೂ ಮುನ್ನ ಸಮಾಧಿಮರಣ ಹೊಂದಿದ ಇವಳ ತಂಗಿಯ ಸಾವಿಗೂ ಕಾರಣ ಹುಡುಕಬೇಕಾಗುತ್ತದೆ. ಆದರೆ ಇಂತಹ ಯಾವುದೇ ಊಹೆಗೂ ಶಾಸನದಲ್ಲಿ ಆಧಾರ ಸಿಗುವುದಿಲ್ಲ.

ಶಾಸನ ಕವಿಯು ತಿಳಿಸಿರುವಂತೆ ಮಿಥ್ಯಾಜೀವನದಿಂದ ವಿರಕ್ತಿ ಹೊಂದಿದ ಜಕ್ಕಲಾಂಬೆಯು ಜಿನೋಪದೇಶವನ್ನು ಕೇಳಿ ಆತ್ಮಸಾಧನೆಗಾಗಿ ಸಮಾಧಿಮರಣವನ್ನು ಸ್ವೀಕರಿಸಿದಳೆ ಹೊರತು ವೀರಶೈವರೊಂದಿಗೆ ಸಂಘರ್ಷಕ್ಕಿಳಿದು ಬೇಸತ್ತು ಸಮಾಧಿ ಮರಣವನ್ನು ಸ್ವೀಕರಿಸಿದಳೆಂದು ತೋರುವುದಿಲ್ಲ.

ಜಕ್ಕಲಾಂಬೆಯೇ ರಾಘವಾಂಕ ಹಾಗೂ ನೇಮರಸರು ಉಲ್ಲೇಖಿಸಿರುವ 'ಶ್ರೀಮತಿ' ಎಂದು ಹೇಳಲು ಆಧಾರ ಸಾಲದಾಗಿದೆ. ಅಲ್ಲದೆ ರಾಘವಾಂಕ, ನೇಮರಸರು ಹೆಸರಿಸಿರುವ 'ಶ್ರೀಮತಿ' ಎಂಬ ಹೆಸರು ಚಿಕ್ಕಮಾಗಡಿಯ ಶಾಸನವನ್ನು ಹೊರತುಪಡಿಸಿ ಮತ್ತೆರಡು ಶಾಸನಗಳಲ್ಲಿಯೂ ಕಂಡುಬರುತ್ತದೆ.

ಶ್ರವಣಬೆಳಗೊಳದ ಮಂಗಾಯಿ ಬಸದಿಯ ಶಾಸನವೊಂದು[೯] ಶ್ರೀಮತಿ ಎಂಬ ಮಹಿಳೆಯು ದಾನ ನೀಡಿದ ವಿಚಾರ ತಿಳಿಸುತ್ತದೆ. "ಗೆರುಸೊಪ್ಪೆಯ ಶ್ರೀಮತಿ ಅವ್ವೆಗಳು ಮತ್ತು ಸಮಸ್ತರು ಗೋಷ್ಠಿಯ ಕೊಟ್ಟು ೪ ಗದ್ಯಾಣ" ದಾನ ಮಾಡಿದರು ಎಂದು ತಿಳಿಸುವ ಈ ಶಾಸನದಲ್ಲಿ 'ಶ್ರೀಮತಿ ಅವ್ವೆಗಳು' ಎಂದು ಉಕ್ತವಾಗಿದೆ. ಆದರೆ ಇದು ಹದಿನೈದನೆಯ ಶತಮಾನಕ್ಕೆ ಸೇರಿದ ಶಾಸನವಾದ್ದರಿಂದ, ರಾಘವಾಂಕನ ಕೃತಿಯಲ್ಲಿ ಉಕ್ತಳಾದ ಶ್ರೀಮತಿ ಇವಳಲ್ಲ.

ಕ್ರಿ.ಶ.೧೧೧೯ರ ಶ್ರವಣಬೆಳಗೊಳದ ಮತ್ತೊಂದು ಶಾಸನವೊಂದು ಶ್ರೀಮತಿ ಎನ್ನುವ ಕಂತಿಯೊಬ್ಬಳನ್ನು ಉಲ್ಲೇಖಿಸುತ್ತದೆ[೧೦]. ದಿವಾಕರಣಂದಿ ಮುನಿಗಳಿಂದ ದೀಕ್ಷೆಯನ್ನು ಪಡೆದ ಈಕೆಯು ದಾನಚಿಂತಾಮಣಿ ಎನಿಸಿದ್ದು, ದಯೆ, ದಮ, ಕ್ಷಮೆಗಳನ್ನು ಆಚರಿಸುತ್ತಾ, ವಿನಯವೆಂಬ ಸಾಗರಕ್ಕೆ ಬೆಳದಿಂಗಳಿನಂತೆ ಇದ್ದಳು ಎಂಬ ಮೊದಲಾದ ಬಣ್ಣನೆಗಳೊಂದಿಗೆ ಉಗ್ರತಪವನ್ನಾಚರಿಸಿದ ವಿಚಾರ ಈ ಶಾಸನದಲ್ಲಿ ವ್ಯಕ್ತವಾಗಿದೆ. ಸಮಾಧಿಮರಣವನ್ನು ಸಾಧಿಸಿದ ಈ ಶ್ರೀಮತಿ ಎಂಬ ಕಂತಿಗೆ ಅವರ ಶಿಷ್ಯೆ ಮಾಂಕಬ್ಬೆ ಕಂತಿಯು ನಿಶಿಧಿಗೆಯನ್ನು ಮಾಡಿಸಿದ ವಿಚಾರ ಇಲ್ಲಿ ತಿಳಿದು ಬರುತ್ತದೆ. ಈ ಶಾಸನವು ಶ್ರೀಮತಿಯ ಸಾಧನೆಯನ್ನು ಹಲವು ವಿಧದಲ್ಲಿ ಬಣ್ಣಿಸಿದೆ, ಆದರೆ ಈಕೆ ಕವಯತ್ರಿ ಎಂಬ ವಿಚಾರ ಉಕ್ತವಾಗಿಲ್ಲ. ಹಾಗಾಗಿ ಇವಳು ನೇಮರಸ ಉಲ್ಲೇಖಿಸಿರುವ 'ಕವಯತ್ರಿ ಶ್ರೀಮತಿ' ಅಲ್ಲ.

ವಿಜಯಕುಮಾರಿ ಚರಿತೆ: ಈ ಮೇಲಿನ ಕಾವ್ಯಗಳು ಹಾಗೂ ಶಾಸನಗಳಷ್ಟೇ ಅಲ್ಲದೆ ಶ್ರೀಮತಿಯ ಕುರಿತಂತೆ ಮತ್ತೊಂದು ಉಲ್ಲೇಖ ಶ್ರುತಕೀರ್ತಿ ರಚಿಸಿರುವ 'ವಿಜಯಕುಮಾರಿ ಚರಿತೆ' ಎಂಬ ಕಾವ್ಯದಲ್ಲಿಯೂ ದೊರಕುತ್ತದೆ.

ಇಲ್ಲಿ ನಿರೂಪಿತವಾಗಿರುವ ಶ್ರೀಮತಿಯ ವಿಚಾರ ಹೀಗಿದೆ: ಜೈನಧರ್ಮದಲ್ಲಿ ನಿಷ್ಠೆ ಹೊಂದಿದ್ದ ವಿಜಯಕುಮಾರಿಯು ಕೆಲಕಾಲ ಗುರುಮುಖೇನ ವಿದ್ಯಾಭ್ಯಾಸ ನಡೆಸಿ, ಆನಂತರ ತನ್ನ ಸ್ವಗೃಹದಲ್ಲಿಯೇ ಅಧ್ಯಯನವನ್ನು ಮುಂದುವರೆಸುತ್ತಾ ತಂದೆ-ತಾಯಿಯರ ಕಣ್ಮಣಿ ಎನಿಸಿರುತ್ತಾಳೆ. ಇವಳನ್ನು ವೀರಶೈವ ಧರ್ಮೀಯ ಸೋದರಮಾವ ಮಹದೇವಸೆಟ್ಟಿಯು ತನ್ನ ಮಗನನ್ನು ಮದುವೆಯಾಗೆಂದು ಬಹಳವಾಗಿ ಒತ್ತಾಯಿಸುತ್ತಾನೆ. ವೀರಶೈವರ ನಿಲುವು ಜೈನತತ್ವಕ್ಕಿಂತ ಬಹಳ ಭಿನ್ನವಾಗಿರುವುದನ್ನು ಮನವರಿಕೆಮಾಡಿಕೊಡುವ ವಿಜಯಕುಮಾರಿಯು ಮಾವನ ಮಗನೊಂದಿಗೆ ಮದುವೆಯಾಗುವುದನ್ನು ನಿರಾಕರಿಸಿ ಸೋದರಮಾವನೊಂದಿಗೆ ಸಾಕಷ್ಟು ವಾದಿಸುತ್ತಾಳೆ. ಆದರೂ ಇವಳ ಮದುವೆ ಮಾಡಿಸಲೇ ಬೇಕೆಂದು ಸೋದರಮಾವ ಪಟ್ಟುಹಿಡಿಯುತ್ತಾನೆ. ಇದರಿಂದ ಬೇಸತ್ತ ವಿಜಯಕುಮಾರಿಯು ಕಡೆಗೆ ಜಿನೇಂದ್ರಸಾಕ್ಷಿಯಲ್ಲಿ ಬ್ರಹ್ಮಚರ್ಯವ್ರತ ಸ್ವೀಕರಿಸಿದೆನೆಂದು ಘೋಷಿಸಿ ಚೈತನ್ಯಮಂದಿರಕ್ಕೆ ತೆರಳಿ ಜಿನದೀಕ್ಷೆಯನ್ನು ಪಡೆಯುತ್ತಾಳೆ. ಇವಳ ಹಟಕ್ಕೆ ಮಣಿದ ತಂದೆತಾಯಿಗಳು ಜಿನಾಲಯಕ್ಕೆ ಬಂದು ಸ್ನಾನವಮಾಡಿಸಿ ಗಂಧೋದಕ ತಳೆಯುತ್ತಾರೆ. ದೀಕ್ಷಾಗ್ರಂಥಗಳನ್ನು ಓದುವ ಮುಮುಕ್ಷುಗಳು ಆಕೆಗೆ

ದೀಕ್ಷೆ ನೀಡಿ 'ಶ್ರೀಮತಿ' ಯೆಂದು ಹೆಸರಿಡುತ್ತಾರೆ. 'ವಿಜಯಕುಮಾರಿ ಶ್ರೀಮತಿಯಾಗಿ ಭೂಮಿಯಲ್ಲಿ ಸಂಚರಿಸಿ ಪಾತಕಗಳನ್ನು ಪರಿಹರಿಸಿ ಸಲ್ಲೇಖನ ವಿಧಿಗಳನ್ನು ತಳೆದಳು'. ಎಂಬ ವಿಚಾರ ಈ ಕೃತಿಯಲ್ಲಿ ದೊರಕುತ್ತದೆ.

ಜೈನಧರ್ಮೀಯ ತಂದೆ-ತಾಯಿಯರೊಂದಿಗೆ, ಮುಂದೆ ಶ್ರೀಮತಿ ಎಂಬ ಹೆಸರನ್ನು ಪಡೆದ ವಿಜಯಕುಮಾರಿಯು ಜೈನಧರ್ಮದಲ್ಲಿ ನಿಷ್ಠೆಯನ್ನು ಹೊಂದಿದವಳಾಗಿರುತ್ತಾಳೆ. ಅಲ್ಲದೆ ಇವಳಿಗೆ ವೀರಶೈವ ಧರ್ಮದ ಮೇಲಿದ್ದ ಅಸಮಾಧಾನವನ್ನೂ ಕೂಡ ಕವಿ ಚಿತ್ರಿಸಿದ್ದಾನೆ. ಇವಳು ಬಸವಣ್ಣ-ಬಿಜ್ಜಳರ ಸಮಕಾಲೀನಳಾಗಿದ್ದಳೆನ್ನುವುದನ್ನು ಈ ಕಾವ್ಯ ತಿಳಿಸುತ್ತದೆ. ವೀರಶೈವರೊಂದಿಗೆ ವಾದಕ್ಕಿಳಿಯುವ ವಿಜಯಕುಮಾರಿ (ಶ್ರೀಮತಿ)ಯ ಕೆಲವು ಪ್ರಸಂಗಗಳನ್ನು ಕವಿಯು ಕಾವ್ಯದಲ್ಲಿ ಬಣ್ಣಿಸಿದ್ದಾನೆ.

ಕಾಲ ಮತ್ತು ಕೆಲವು ಘಟನೆಗಳನ್ನು ಗಮನಿಸಿದರೆ, ಕವಿ ರಾಘವಾಂಕ ಉಲ್ಲೇಖಿಸಿರುವ ಶ್ರೀಮತಿಯು ಈ ವಿಜಯಕುಮಾರಿಯೇ ಆಗಿರುತ್ತಾಳೆ. "ವಿಜಯಕುಮಾರಿ ಚಾರಿತ್ರಿಕ ವ್ಯಕ್ತಿಯಾಗಿರುವ ಸಾಧ್ಯತೆಯಿದೆ.. ಆಕೆಯ ಕಾಲವನ್ನು ೧೨ನೆಯ ಶತಮಾನವೆಂದು ಊಹಿಸಬಹುದು"[೧೧] ಎಂದು ಈ ಕೃತಿಯ ಸಂಪಾದಕರಾದ ಭಾನುಮತಿಯವರು ಅಭಿಪ್ರಾಯ ಪಟ್ಟಿದ್ದಾರೆ. ಶ್ರೀಮತಿ ಎಂದು ಪ್ರತಿನಾಮ ಪಡೆದ ವಿಜಯಕುಮಾರಿಯ ಕುರಿತಾಗಿ ನಾಲ್ಕು ಕಾವ್ಯಗಳು ಕನ್ನಡದಲ್ಲಿ ದೊರಕುತ್ತದೆ. ಈ ಕೃತಿಗಳೆಲ್ಲಾ ಹದಿನೈದನೆಯ ಶತಮಾನದ ನಂತರ ರಚಿತವಾದವು[೧೨] . ಇವಳು ಐತಿಹಾಸಿಕ ವ್ಯಕ್ತಿಯಾಗಿದ್ದಳೆನ್ನುವುದಕ್ಕೆ ಕಾವ್ಯದ ಹಲವಾರು ವಿಚಾರಗಳು ಆಧಾರ ಒದಗಿಸುತ್ತದೆ.

ಕರ್ಣಾಟಕ ಕವಿಚರಿತೆಯ ರಚನೆಯ ಕಾಲದಲ್ಲಿ ಕೆಲವೊಂದು ಕವಿಗಳ ಕುರಿತಾಗಿ ಸಮಗ್ರ ವಿಚಾರ ದೊರಕದಿದ್ದರೂ, ಕನ್ನಡ ಕೃತಿಗಳನ್ನು ರಚಿಸಿರುವ ಸಾಧ್ಯತೆಗಳನ್ನು ಕುರಿತು ಬರೆದಿದ್ದಾರೆ. ಮುಂದಿನ ಸಂಶೋಧನೆಗಳಲ್ಲಿ ಅಂತಹ ಕೆಲವು ಕವಿಗಳ ಕಾವ್ಯ ದೊರೆತು ಆ ವಾಕ್ಯ ನಿಜವಾಗುವಂತಾಗಿದೆ. ಉದಾಹರಣೆಗೆ ಎರಡನೆಯ ನಾಗವರ್ಮನನ್ನು ಕುರಿತು ಬರೆಯುವಾಗ "ಈತ ಆವುದೋ ಒಂದು ಜಿನಪುರಾಣವನ್ನು ಬರೆದಿರಬೇಕು" ಎಂಬ ಅನುಮಾನಕ್ಕೆ[೧೩] ಪುಷ್ಟಿ ಒದಗಿಸುವಂತೆ ಆಚಣ್ಣ ಕವಿಯ 'ವರ್ಧಮಾನ ಚರಿತೆ'ಯ ಸಂಪಾದಕರು ಆಚಣ್ಣ ಸ್ಮರಿಸಿರುವ ಪೂರ್ವಕವಿಗಳ ಆಧಾರದಿಂದ ಎರಡನೆಯ ನಾಗವರ್ಮ ಬರೆದಿರುವ ಜಿನಪುರಾಣ ವರ್ಧಮಾನನ ಚರಿತೆಯೇ ಆಗಿದೆ ಎಂದು ತಿಳಿಸಿದ್ದಾರೆ. ಮುಂದೆ ಕೆಲವು ವರ್ಷಗಳ ನಂತರ ೧೯೭೪ರಲ್ಲಿ ಬಿ.ಎಸ್.ಸಣ್ಣಯ್ಯನವರು ಚಂದ್ರಪ್ರಭಾಪುರಾಣ ಮೊದಲಾದ ಕೃತಿಗಳೊಂದಿಗೆ ಸೇರ್ಪಡೆಯಾಗಿದ್ದ ನಾಗವರ್ಮನ 'ವರ್ಧಮಾನ ಪುರಾಣ'ವನ್ನು ಬೇರ್ಪಡಿಸಿ, ಕ್ರಮಬದ್ಧವಾಗಿ ಸಂಪಾದಿಸಿ ಕೊಟ್ಟಿದ್ದಾರೆ[೧೪]. ಇದೇ ಪ್ರಕಾರ ಡಾ.ಎಂ.ಎ ಜಯಚಂದ್ರ ಅವರು ಗುರುತಿಸಿರುವ 'ಶ್ರೀಮತಿ' ಕವಯತ್ರಿಯ ಕೃತಿಗಳೂ ಮುಂದಿನ ದಿನಗಳಲ್ಲಿ

ಸಂಶೋಧನೆಗೊಂಡು ಹೊರಬರುವಂತಾಗಲಿ. ಕವಿ ಹಾಗೂ ಕೃತಿಗಳ ಕುರಿತಾದ ಚರ್ಚೆಗಳು ಇಂದಹ ಸಂಶೋಧನೆಗೆ ಹಾದಿ ಕಲ್ಪಿಸುವ ನಿಟ್ಟಿನಲ್ಲಿ ಲೋಭದತ್ತ ಚರಿತೆಯಲ್ಲಿ ಉಕ್ತಳಾಗಿರುವ 'ಶ್ರೀಮತಿ' ಎಂಬ ಕವಯತ್ರಿಯ ಕುರಿತಾದ ಆಲೋಚನೆ ಇದಾಗಿದೆ.

ಅಡಿಟಿಪ್ಪಣಿ

೧. ಕಮಲಾ ಹಂಪನಾ, 'ಶ್ರೀಮತಿ: ಜಕ್ಕಲಾಂಬಾ' , ಸಮ್ಮಿಲನ-ಸ್ಮರಣಸಂಚಿಕೆ, ಜೈನ್‌ಮಿಲನ್, ಬೆಂಗಳೂರು ೧೯೯೮

೨. ಎಂ.ಎ ಜಯಚಂದ್ರ, ಕರ್ನಾಟಕ ಭಾರತಿ, ಸಂಪುಟ ೧೫

೩. EC.II(R) 484; EC.I(O) Sra.351

೪. EC.II(R) 521; EC.I(O) Sra.485

೫. EC.II(R) 129; EC.I(O) Sra.112

೬. ಕಮಲಾ ಹಂಪನಾ, ಬೊಗಸೆ, ಸಿ.ವಿ.ಜಿ.ಪಬ್ಲಿಕೇಶನ್ಸ್, ಬೆಂಗಳೂರು, ೨೦೦೩ ಪು.೯೧

೭. E.C. ಸಂ VII ಶಿಕಾರಿಪುರ ೧೯೬

೮. ಕಮಲಾ ಹಂಪನಾ, ಪೂರ್ವೋಕ್ತ

೯. EC.II(R) 474; EC.I(O) Sra.343

೧೦. EC.II(R) 484; EC.I(O) Sra.351

೧೧. ಭಾನುಮತಿ.ವೈ.ಸಿ.(ಸಂ), ವಿಜಯಕುಮಾರಿ ಚರಿತೆ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿವಿ

೧೨. ಪೂರ್ವೋಕ್ತ

೧೩. ನರಸಿಂಹಾಚಾರ್ಯ.ಆರ್., ಕರ್ನಾಟಕ ಕವಿಚರಿತೆ, ಕ.ಸಾ.ಪ, ೨೦೧೧, ಪು.೧೬೭

೧೪. ಸಣ್ಣಯ್ಯ.ಬಿ.ಎಸ್., ಪ್ರಾಚೀನ ಕನ್ನಡ ಗ್ರಂಥಸಂಪಾದನೆ, ಕನ್ನಡ ಪುಸ್ತಕ ಪ್ರಾಧಿಕಾರ, ೨೦೦೨, ಪು.೭೦

# ವಾಸ್ತು ಶಿಲ್ಪ ಶಾಸ್ತ್ರದಲ್ಲಿ ಕರ್ನಾಟಕದ ಸಂಸ್ಕೃತಿ

**ಡಾ. ಎಂ.ಎನ್. ಪ್ರಭಾಕರ್**

ಭೋಜದೇವನ 'ಸಮರಾಂಗಣ ಸೂತ್ರಧಾರ' ಒಂದು ಸುಪ್ರಸಿದ್ಧ ಔತ್ತರೇಯ ವಾಸ್ತು ಗ್ರಂಥ. ಕ್ರಿ.ಶ. ೧೯೨೪-೨೫ರಲ್ಲಿ ಮಹಾಮಹೋಪಾಧ್ಯಾಯ ಟಿ. ಗಣಪತಿ ಶಾಸ್ತ್ರಿಯವರು ಎರಡು ಸಂಪುಟಗಳಲ್ಲಿ ಬರೋಡಾದ ಪ್ರಾಚ್ಯ ವಿದ್ಯಾ ಸಂಸ್ಥೆಯ ಮೂಲಕ ಪ್ರಕಟಿಸಿದ್ದಾರೆ. ಈ ಗ್ರಂಥದ ಪ್ರತಿ ಅಧ್ಯಾಯದ ಕೊನೆಯಲ್ಲಿ 'ಇತಿ ಮಹಾರಾಜಾಧಿರಾಜ ಶ್ರೀ ಭೋಜದೇವ ವಿರಚಿತೇ...' ಎಂಬ ಒಕ್ಕಣೆ ಇದೆ. ಧಾರಾನಗರಿಯನ್ನು ಆಳುತ್ತಿದ್ದ ಪಾರಮಾರ ರಾಜ ಶ್ರೀಭೋಜನೇ ಇದರ ಕರ್ತೃ ಎಂದು ಈವರೆಗೆ ನಂಬಲಾಗಿತ್ತು. ಈತನ ಆಳ್ವಿಕೆಯ ಕಾಲವನ್ನು ಕ್ರಿ.ಶ. ೧೦೧೦ರಿಂದ ೧೦೫೫ರವರೆಗೆ ಗುರುತಿಸಲಾಗಿತ್ತು. ಆದರೆ ಈಗಿನ ಹೊಸ ಶೋಧದ ಪ್ರಕಾರ ಈತ ಹನ್ನೊಂದನೇ ಶತಮಾನದ ಅಂಚಿನಲ್ಲಿದ್ದ ಕೊಲ್ಲಾಪುರದ ಶಿಲಾಹಾರ ಮನೆತನದ ಮಹಾಮಂಡಲೇಶ್ವರ ಗಂಡರಾದಿತ್ಯನ ಅಣ್ಣ. ಈ ಶೋಧಕ್ಕೆ ಮೂಲ ಗಂಡರಾದಿತ್ಯನ ಕ್ರಿ.ಶ. ೧೧೧೫ರ ತಾಮ್ರಶಾಸನ. ಶಾಸನದ ಭಾಷೆ ಸಂಸ್ಕೃತ; ಲಿಪಿ ಕನ್ನಡ ಈ ತಾಮ್ರ ಶಾಸನದ ಮೊದಲ ಪುಟದ ಅಂಚಿನಲ್ಲಿ ಭೋಜ ದೇವನನ್ನು ಕುರಿತು 'ಸಮರಾಂಗಣ ಸೂತ್ರಧಾರೋ ವಿಖ್ಯಾತ ಕೀರ್ತಿರಿದ ಪಂಡಿತ ಪಾರಿಜಾತಃ' ಎಂಬ ಉಲ್ಲೇಖವಿದೆ. ಇವನು ಯುದ್ಧ ವಿದ್ಯೆಯಲ್ಲಿ ಪಳಗಿದವನೂ ಹೌದು. ಶ್ರೇಷ್ಠ ಪಂಡಿತನೂ ಹೌದು. ಭೋಜದೇವ ಹಾಗೂ ಗಂಡರಾದಿತ್ಯ ಇಬ್ಬರೂ ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿ ಮಹಾಮಂಡಲೇಶ್ವರರೆನಿಸಿ ಕೊಲ್ಲಾಪುರದಲ್ಲಿ ನೆಲಸಿದವರು. ಆಡಳಿತದ ಚುಕ್ಕಾಣಿ ಹಿಡಿದು ನಡೆಸಿದವನು ಗಂಡರಾದಿತ್ಯ. ಸೌಂದತ್ತಿರಟ್ಟರ ಮೇಲೆ ನಡೆದ ಯುದ್ಧದಲ್ಲಿ ಭೋಜದೇವ ಸಾಧಿಸಿದ ವಿಜಯ ಇವನಿಗೆ ಕೀರ್ತಿಯನ್ನು ತಂದುಕೊಟ್ಟಿದೆ. ಇವನ ಬಗ್ಗೆ ಹೆಚ್ಚು ಮಾಹಿತಿ ಇಲ್ಲ.

ಒಂದು ವಾಸ್ತುಗ್ರಂಥದ ಹೆಸರು ಶಾಸನದಲ್ಲಿ ಉಲ್ಲೇಖಗೊಂಡಿರುವುದು ಅಪೂರ್ವವೇ ಸರಿ. ಇದರಿಂದ ಕರ್ನಾಟಕಕ್ಕೆ ಲಾಭವಾಗಿದೆ. ಶಾಸನದ ಲಿಪಿ ಕನ್ನಡ ಎನ್ನುವುದನ್ನು ಗಮನಿಸಬೇಕು. ಒಂದು ಕಾಲಕ್ಕೆ ಕೊಲ್ಲಾಪುರವು ಕನ್ನಡ ನಾಡಿನಲ್ಲಿ ಸೇರಿಹೋಗಿತ್ತು. ಮಹಾರಾಷ್ಟ್ರದಲ್ಲಿ ದೊರೆತಿರುವ ಶಾಸನಗಳಲ್ಲಿ ಪ್ರತಿಶತ ೫೦ರಷ್ಟು

ಕನ್ನಡ ಶಾಸನಗಳು. ಸಮರಾಂಗಣ ಸೂತ್ರಧಾರ ಗ್ರಂಥ ಕರ್ನಾಟಕದಲ್ಲಿ ಸಂಕಲನಗೊಂಡಿದೆ. ಈ ಗ್ರಂಥದ ವಿವರಗಳಿಗೂ ಕರ್ನಾಟಕದಲ್ಲಿ ಕಾಣುವ ವಾಸ್ತು ರಚನೆಗಳಿಗೂ ಸಂಬಂಧವಿದೆ. ಇದು ಈ ಶತಮಾನದ ೨೦ರ ದಶಕದ ಮಹತ್ವದ ಶೋಧ.

ಸಮರಾಂಗಣ ಸೂತ್ರಧಾರ ಔತ್ತರೇಯ ಸಂಪ್ರದಾಯದ ಅತಿ ಪ್ರಾಚೀನ ವಾಸ್ತು ಗ್ರಂಥ ಎಂದು ಗುರುತಿಸಲಾಗಿದೆ. ಈ ಗ್ರಂಥವು ಒಂದೆರಡು ಹಸ್ತ ಪ್ರತಿಗಳ ಆಧಾರದಿಂದ ಸಂಪಾದನೆಗೊಂಡಿರುವುದರಿಂದ ಹೆಚ್ಚಿನ ಸ್ಖಾಲಿತ್ಯಗಳೂ, ಗ್ರಂಥಪಾತಗಳೂ ಇದ್ದು ಅರ್ಥೈಸಲು ಕಬ್ಬಿಣದ ಕಡಲೆ ಎನಿಸಿದೆ.

ಕ್ರಿ.ಶ.೧೯೫೦ರಲ್ಲಿ ಬರೋಡಾದ ಪ್ರಾಚ್ಯವಿದ್ಯಾಸಂಸ್ಥೆಯಿಂದ 'ಅಪರಾಜಿತ ಪೃಚ್ಛಾ' ಎಂಬ ಮತ್ತೊಂದು ಸಂಸ್ಕೃತ ವಾಸ್ತು ಗ್ರಂಥ ಪ್ರಕಟವಾಗಿದೆ. ಇದನ್ನು ವಿದ್ವಾಂಸ ಪಿ.ಎ. ಮಂಕಡ್ ಸಂಪಾದಿಸಿದ್ದಾರೆ. ಇದರ ಭಾಷೆ ಸಮರಾಂಗಣ ಸೂತ್ರಧಾರ ಗ್ರಂಥಕ್ಕಿಂತ ಸರಳವಾದುದು. ಸುಮಾರು ಒಂದು ನೂರು ವರ್ಷದ ನಂತರದ ರಚನೆ ಇರಬಹುದು ಎಂದು ವಿದ್ವಾಂಸರ ತರ್ಕ. ಇದರ ಕರ್ತೃ ಭುವನದೇವ ಎಂದಿದೆ. ಈತ ಯಾರು ಎಂದು ಈವರೆಗೆ ತಿಳಿದಿಲ್ಲ.

ಕರ್ನಾಟಕವನ್ನು ಆಳಿದ ಸೇವುಣರ ಮಹಾದೇವ ಮತ್ತು ರಾಮಚಂದ್ರ ಇವರ ಅವಧಿಯಲ್ಲಿ, ಇವರಿಗೆ ಹೇಮಾದ್ರಿ ಪಂತ್ ಎಂಬ ಸಚಿವನಿದ್ದ. ಈತ ವಿದ್ವಾಂಸನೂ ಹೌದು. ಈತ "ಚತುರ್ವರ್ಗ ಚಿಂತಾಮಣಿ" ಎಂಬ ಗ್ರಂಥ ರಚಿಸಿದ್ದಾನೆ. ಈ ಗ್ರಂಥದಲ್ಲಿ ಅಪರಾಜಿತ ಪೃಚ್ಛಾದ ಉಲ್ಲೇಖವಿರುವುದನ್ನು ವಿದ್ವಾಂಸರು ಗಮನಿಸಿದ್ದಾರೆ. ಹೇಮಾದ್ರಿ ಪಂತನ ಕಾಲದಲ್ಲಿ ರಚನೆಗೊಂಡ ವಾಸ್ತುವನ್ನು ಈಗಲೂ ಹೇಮಾದ್ರಿ ಪಂತ ಶೈಲಿ ಎಂದು ಗುರುತಿಸುತ್ತಾರೆ. ಕರ್ನಾಟಕದಲ್ಲಿ ಅಪರಾಜಿತ ಪೃಚ್ಛಾ ಗ್ರಂಥದ ಪರಿಚಯವಿತ್ತು ಎಂದು ಊಹಿಸಲಾಗಿದೆ. ಸಮರಾಂಗಣ ಸೂತ್ರಧಾರ ಗ್ರಂಥದಲ್ಲಿ ಕಂಡ ಹಲವು ವಾಸ್ತು ವಿವರಗಳು ಇದರಲ್ಲಿ ಕೊಂಚ ಸರಳ ರೀತಿಯಲ್ಲಿ ಹೇಳಲ್ಪಟ್ಟಿದೆ.

ಚಾಲುಕ್ಯ ಸೋಮೇಶ್ವರನ ಆಳ್ವಿಕೆಯ ಕಾಲ ಕ್ರಿ.ಶ. ೧೧೨೬ರಿಂದ ೧೧೩೮. ಈತ ಮಾನಸೋಲ್ಲಾಸವೆಂಬ ವಿಶ್ವಕೋಶವನ್ನು ರಚಿಸಿದ್ದಾನೆ. ಈ ಗ್ರಂಥಕ್ಕೆ ಅಭಿಲಷಿತಾರ್ಥ ಚಿಂತಾಮಣಿ ಎಂಬ ಮತ್ತೊಂದು ಹೆಸರಿದೆ. ಡಾ. ಆರ್. ಶಾಮಾಶಾಸ್ತ್ರಿ ಅವರು ಸಂಪಾದಿಸಿದ ಈ ಗ್ರಂಥ ಮೈಸೂರು ಪ್ರಾಚ್ಯ ವಿದ್ಯಾಸಂಸ್ಥೆಯಿಂದ ಭಾಗಶಃ ಪ್ರಕಟಗೊಂಡಿದೆ. ಇದನ್ನು ಬರೋಡಾ ಪ್ರಾಚ್ಯ ವಿದ್ಯಾ ಸಂಸ್ಥೆಯವರೂ ಮೂರು ಸಂಪುಟಗಳಲ್ಲಿ ಪ್ರಕಟಿಸಿದ್ದಾರೆ.

ಇದು ಕರ್ನಾಟಕಕ್ಕೆ ಸಂಬಂಧಿಸಿದ ಹಲವಾರು ವಿಷಯಗಳನ್ನೊಳಗೊಂಡಿದೆ. ಡಾ. ಶ್ರೀಗೊಂಡೇಕರ್ ಅವರು ಸಂಪಾದಿಸಿದ್ದು ಈ ಗ್ರಂಥ ಸಂಸ್ಕೃತದಲ್ಲಿದೆ. ಇದರಲ್ಲಿಯೂ ಹಲವು ಅಧ್ಯಾಯಗಳಲ್ಲಿ ವಾಸ್ತು ವಿವರಗಳಿವೆ. ಈ ಸಾಲಿನಲ್ಲಿ ಗಮನಿಸಬೇಕಾದ ಮತ್ತೊಂದು ಪ್ರಮುಖ ಗ್ರಂಥ ಶಿವತತ್ತ್ವ ಶಿವತತ್ತ್ವರತ್ನಾಕರ ಇದರ ಸಂಕಲನಕಾರ ಕೆಳದಿಯ ಬಸವಭೂಪಾಲ ಅಥವಾ ಹಿರಿಯ ಬಸವಪ್ಪ ನಾಯಕ.

ಈತನ ಕಾಲವನ್ನು ೧೬೯೮ರಿಂದ ೧೭೧೪ರವರೆಗೆ ವಿದ್ವಾಂಸರು ಗುರುತಿಸಿದ್ದಾರೆ.

ಶಿವತತ್ತ್ವ ರತ್ನಾಕರ ಗ್ರಂಥದ ಐದನೆಯ ಕಲ್ಲೋಲ, ಹತ್ತನೆಯ ತರಂಗದಲ್ಲಿ "ದೇವಾಲಯ ವಾಸ್ತು ಭೇದಾಃ" ಎಂಬ ಶೀರ್ಷಿಕೆಯಡಿಯಲ್ಲಿ ದೇವಾಲಯ ವಾಸ್ತುಪ್ರಬೇಧಗಳು ಪುನರ್‌ಪ್ರಬೇಧಗಳೂ ಹೆಸರಿಸಲ್ಪಟ್ಟಿವೆ. ಇದಲ್ಲದೆ ಲಿಂಗಮಾನ, ಗರ್ಭಗೃಹ, ರಂಗಮಂಟಪ, ವಾಹನಾಲಯ, ಪ್ರಾಕಾರಗಳನ್ನು ಕುರಿತ ವಿವರಗಳಿವೆ.

ಕೆಳದಿ ಅರಸರ ರಚನೆಗಳಲ್ಲಿ ಇಕ್ಕೇರಿಯ ಅಘೋರೇಶ್ವರ ದೇವಾಲಯ ವಿಶಿಷ್ಟ ರೀತಿಯದು. ಅಘೋರೇಶ್ವರ ಹಾಗೂ ಅಘೋರೇಶ್ವರನ ಶಕ್ತಿ ದೇವತೆಗಳ ವಿವರಗಳು ಶಿವತತ್ತ್ವರತ್ನಾಕರ ಗ್ರಂಥದಲ್ಲಿದೆ.

ಇದೇ ಗ್ರಂಥದ ಆರನೆಯ ಕಲ್ಲೋಲ, ಮೊದಲತರಂಗದಲ್ಲಿ ವಾಸ್ತುವಿವರಗಳು ಮುಂದುವರೆದಿದ್ದು, ರಾಜಗೃಹ ರಚನೆಯಲ್ಲಿ ಪೃಥ್ವೀಜಯ, ಮುಕ್ತಕೋಣ, ಸರ್ವತೋಭದ್ರ, ಶ್ರೀವತ್ಸ ಮೊದಲಾದ ಪ್ರಬೇಧಗಳನ್ನು ವಿವರಿಸಲಾಗಿದೆ. ದೇವಾಲಯ ರಚನೆಗೆ ಮುನ್ನ ಅವುಗಳ ವಿಕಾಸಕ್ಕೆ ನೆರವಾದ ಚತುಶ್ಶಾಲ, ತ್ರಿಶಾಲಾ, ದ್ವಿಶಾಲಾ, ಏಕಶಾಲಾಗಳ ಸ್ವರೂಪವನ್ನು, ವಿವಿಧ ಹಂತಗಳ ಅಲಿಂದರಚನೆಯನ್ನು ವಿವರಿಸಲಾಗಿದೆ. ಔತ್ತರೇಯ ಸಂಪ್ರದಾಯದ ಸೂಕ್ಷ್ಮತೆಗಳನ್ನು ತಿಳಿಯಲು ಈ ರಚನೆಗಳನ್ನು ಖಚಿತವಾಗಿ ಗುರುತಿಸುವುದು ಅಗತ್ಯ.

ರಾಜಗೃಹಗಳ ವಿವಿಧ ರಚನೆಯನ್ನು ಸಮರಾಂಗಣ ಸೂತ್ರಧಾರ ಗ್ರಂಥ ಒದಗಿಸಿದೆ. ಆದರೆ ಅರ್ಥೈಸಲು ಸುಲಭವೆನಿಸಿಲ್ಲ. ಮಾನಸೋಲ್ಲಾಸ ಗ್ರಂಥವು ಶಾಲಾ ಅಲಿಂದ ರಚನೆಯ ಬಗ್ಗೆ ಮಾಹಿತಿ ನೀಡುತ್ತದೆ. ಮಾನಸೋಲ್ಲಾಸಕ್ಕಿಂತ ಹೆಚ್ಚು ವಿವರಗಳು ಶಿವತತ್ತ್ವ ರತ್ನಾಕರ ಗ್ರಂಥದಲ್ಲಿ ದೊರೆಯುತ್ತದೆ. ಮಾನಸೋಲ್ಲಾಸ ಗ್ರಂಥವನ್ನು ಸಂಪಾದಿಸಿದ (ಶ್ರೀಗೊಂಡೇಕರ್ ಅವರು, ದ್ವಿತೀಯ ಸಂಪುಟದಲ್ಲಿ ಪ್ರಸ್ತಾವನೆಯನ್ನು ಮಂಡಿಸುವಾಗ ಶಾಲಾ, ಅಲಿಂದ ರಚನೆಯನ್ನು ವಿವಿಧ ಮೂಲಗಳಿಂದ ಅರ್ಥೈಸಲು ಯತ್ನಿಸಿದ್ದಾರೆ. ಮಾನಸೋಲ್ಲಾಸ, ಶಿವತತ್ತ್ವ ರತ್ನಾಕರ ಗ್ರಂಥಗಳ ಅನುವಾದವೂ ಕನ್ನಡದಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಹಾಗೂ ಸಂಸ್ಕೃತ ವಿಶ್ವವಿದ್ಯಾಲಯಗಳಿಂದ ಪ್ರಕಟಿಸಲಾಗಿದೆ.

ಭಾಷಾಂತರಕಾರರು ಯಥಾವತ್ತಾದ ಅನುವಾದ ನೀಡಿದ್ದಾರೆಯೇ ಹೊರತು, ವಾಸ್ತುವಿನ ತಾಂತ್ರಿಕ ಸೂಕ್ಷ್ಮತೆಗಳನ್ನು ಅರಿತಿಲ್ಲ. ಇದರೊಂದಿಗೆ ವಾಸ್ತು ರಚನೆಗಳ ಪರಿಚಯವೂ ಇದ್ದಂತಿಲ್ಲ. ಕೇವಲ ಸಂಸ್ಕೃತ ಭಾಷಾ ವಿದ್ವತ್ತನ್ನು ಬಳಸಿ ನೀಡಿದ ಅನುವಾದವಿದು. ಎರಡೂ ಗ್ರಂಥಗಳ ಅನುವಾದವೂ ಅದೇ ಸ್ಥಿತಿಯುಳ್ಳದ್ದು.

ಮಾನಸೋಲ್ಲಾಸ ಮತ್ತು ಶಿವತತ್ತ್ವ ರತ್ನಾಕರ ಗ್ರಂಥಗಳು ಹೆಚ್ಚು ವಿಶ್ವಸನೀಯವಾದವು. ಈ ಗ್ರಂಥಗಳನ್ನು ಅರ್ಥೈಸಿ, ನಂತರ ಕಬ್ಬಿಣದ ಕಡಲೆಯಂಥ ಸಮರಾಂಗಣ ಸೂತ್ರಧಾರ ಗ್ರಂಥವನ್ನು ವಿಶ್ಲೇಷಿಸುವುದು ಸುಲಭವೆನಿಸುತ್ತದೆ.

ಈ ಗ್ರಂಥಗಳ ವಿವರಗಳನ್ನು ಪರಿಶೀಲಿಸುವ ಮುನ್ನ ಕರ್ನಾಟಕದಲ್ಲಿ ಎರಡು ವಾಸ್ತು ಸಂಪ್ರದಾಯಗಳಿವೆ ಎಂದು ಗಮನಿಸಬೇಕು. ಇವುಗಳ ವಿಶ್ಲೇಷಣೆ ಅಗತ್ಯ.

ಎರಡೂ ಸಂಪ್ರದಾಯಗಳು ಈ ನಾಡಿನಲ್ಲೇ ಹುಟ್ಟಿ, ಬೆಳವಣಿಗೆ ಕಂಡಿದ್ದು, ಇವನ್ನು ದಾಕ್ಷಿಣಾತ್ಯ ಮತ್ತು ಔತ್ತರೇಯ ಸಂಪ್ರದಾಯ ಎಂದು ಹೆಸರಿಸಲಾಗಿದೆ.

ಪ್ರಾಚೀನ ವಾಸ್ತು ರಚನೆಗಳೆಂದರೆ, ಅಳಿದುಳಿದ ದೇವಾಲಯಗಳೇ ಆಗಿದ್ದು, ಇವುಗಳ ಮೂಲಕವೇ ಅಧ್ಯಯನ ಸಾಗಬೇಕು. ದಾಕ್ಷಿಣಾತ್ಯ ಸಂಪ್ರದಾಯಕ್ಕೆ ಆಗಮಗಳೇ ಮೂಲ. ಅದೇ ರೀತಿ ಔತ್ತರೇಯ ಸಂಪ್ರದಾಯಕ್ಕೆ ಪುರಾಣಗಳೇ ಮೂಲ. ಆದರೆ ಇವುಗಳ ಕಾಲವನ್ನು ನಿರ್ಧರಿಸುವುದು ಕಷ್ಟ.

ಭಾಷೆ ಮೊದಲು, ನಂತರ ವ್ಯಾಕರಣ, ಶಾಸ್ತ್ರ ವಿವೇಚನೆ ಎಂಬಂತೆ, ಮೊದಲು ವಾಸ್ತುರಚನೆ, ನಂತರ ವಿಕಾಸ, ಬೆಳವಣಿಗೆಗಳು; ಇವನ್ನು ಕುರಿತ ಶಾಸ್ತ್ರ ಸಂದೋಹಗಳು ನಂತರದ ಕಾಲದ್ದು. ದಾಕ್ಷಿಣಾತ್ಯವು ಈ ಪರಿಸರದಲ್ಲೇ ಹುಟ್ಟಿ, ಬೆಳೆದು, ಹಲವು ಶೈಲಿ, ಪ್ರಬೇಧಗಳನ್ನು ಪ್ರದರ್ಶಿಸಿ ಇಲ್ಲಿಯೇ ನೆಲೆಯೂರಿತು. ಔತ್ತರೇಯವು ಇಲ್ಲಿಯೇ ಹುಟ್ಟಿ, ಹಲವು ರೂಪ ತಳೆದು ಕೆಲವು ಶೈಲಿಗಳು ಮಾತ್ರ ಇಲ್ಲಿ ಪ್ರದರ್ಶನಗೊಂಡವು. ನಂತರ ಉತ್ತರಕ್ಕೆ ಜಿಗಿದು, ಬಾಗಿದ ಶಿಖರದ ಮೂಲಕ ಉತ್ತರ ಹಾಗೂ ಪಶ್ಚಿಮ ಭಾರತದಲ್ಲಿ ಹೆಚ್ಚು ಅನಾವರಣಗೊಂಡಿತು. ಔತ್ತರೇಯ ಎಂಬ ಹೆಸರೂ ಸಾರ್ಥಕತೆಯನ್ನು ಪಡೆಯಿತು. ಮೇಲೆ ಹೆಸರಿಸಿದ ವಾಸ್ತು ಗ್ರಂಥಗಳ ವಿವರಗಳು ಪುರಾಣಗಳಲ್ಲಿದೆ. ಅಧ್ಯಯನದ ಕೊರತೆಯಿಂದಾಗಿ ಇವುಗಳ ವಿಶ್ಲೇಷಣೆ ಕುಂಟುತ್ತಾ ಸಾಗಿದೆ. ಶಿವತತ್ತ್ವ ರತ್ನಾಕರದ ಭಾಷಾಂತರವನ್ನು ಇಲ್ಲಿ ನೀಡಲಾಗಿದೆ. ಮತ್ಸ್ಯಪುರಾಣ, ಅಗ್ನಿ ಪುರಾಣಗಳ ವಿವರಗಳನ್ನು ಈ ವಾಸ್ತು ಗ್ರಂಥಗಳೊಂದಿಗೆ ಪರಿಶೀಲಿಸಬೇಕಾಗಿದೆ. ಕರ್ನಾಟಕ ವಾಸ್ತು ಸಂಸ್ಕೃತಿಯನ್ನು ಅರಿಯುವಲ್ಲಿ ಇದೊಂದು ಪ್ರಮುಖ ಹೆಜ್ಜೆ. ಇಂತಹ ಆರಂಭಿಕ ಪ್ರಯತ್ನವನ್ನು ಮುಂದಿನ ಪುಟಗಳಲ್ಲಿ ಕಾಣಬಹುದು. ಇದು ಮುಂದಿನ ಅಧ್ಯಯನಕ್ಕೆ ಸೋಪಾನವಾಗಿ ನಿಲ್ಲುತ್ತದೆ.

**ಕಲ್ಲೋಲ ೫ ತರಂಗ : ೧೦ ದೇವಾಲಯ ಪ್ರಾಸಾದ ಬೇಧಾಃ**

**ಪ್ರಾಸಾದಭೇದಾಃ ಪ್ರಥಮೇಶ್ವರಸ್ಯ**
**ಮೇರೋ ಸ್ಥಿತಾ ಮೂರ್ಧನಿ ಪಂಚಭಿನ್ನಾಃ**
**ವೈರಾಜನಾಮ್ ಚತುರಶ್ರ ಸಂಸ್ಥಃ**
**ಸ್ಯಾತ್ ಪುಷ್ಪಕಾಖ್ಯಃ ಚತುರಶ್ರ ಧೀರ್ಘಃ ॥೯೬॥**
**ಕೈಲಾಸಕಶ್ಚ ಸಮವೃತ್ತ ನಿರ್ಮಿತಾಂಗೋ**
**ವೃತ್ತಾಯತಶ್ಚ ಮಣಿಕೋ ನಯನಾಭಿರಾಮಃ ॥೯೭॥**
**ಅನ್ಯತ್ರಿವಿಷ್ಟಪ ಇತಿ ಪ್ರತಿತೋಷ್ಟ ಕೋಣೋ**
**ಭಿನ್ನಾಃ ಪೃಥಕ್ ಇಮೇ ನವಧಾ ಪ್ರವಿಷ್ಟಾಃ ॥೯೮॥**

ಪ್ರಸಾದ ರಚನೆಯ ಪ್ರಭೇದಗಳಲ್ಲಿ 'ಮೇರು' ಮೊದಲನೆಯದು. ಇದು ಅತ್ಯುಚ್ಚ ಸ್ಥಾನ ಪಡೆದಿದ್ದು ಇದು ಈಶ್ವರನಿಗೆ ಸಂದಿದೆ. ದೇವಾಲಯ ತಲರಚನೆಯಲ್ಲಿ ಪ್ರಮುಖವಾಗಿ ಐದು ಪ್ರಬೇಧಗಳು.

ವೈರಾಜ ಎಂಬ ಹೆಸರುಳ್ಳದ್ದು ಚತುರಶ್ರ, ಪುಷ್ಪಕವು ಆಯತಾಕಾರ. ಕೈಲಾಸವು ಸಮವೃತ್ತ–ವೃತ್ತಾಕಾರವು. ಮಣಿಕವು ವೃತ್ತಾಯತ–ಲಾಳಾಕಾರದ್ದು. ಕಣ್ಮನ

ತಣಿಸುವಂಥದ್ದು. ತ್ರಿವಿಷ್ಟಪವು ಅಷ್ಟಾಶ್ರ, ಎಂಟು ಮೂಲೆಯುಳ್ಳದ್ದು. ಈ ಪ್ರತಿಯೊಂದು ಪ್ರಬೇಧಗಳಲ್ಲಿಯೂ ಪುನಃ ಒಂಬತ್ತು ಪುನರ್ ಪ್ರಬೇಧಗಳನ್ನು ಹೆಸರಿಸಲಾಗಿದೆ.

ಟಿಪ್ಪಣಿ : ಔತ್ತರೇಯ ಗ್ರಂಥಗಳಾದ ಅಪರಾಜಿತ ಪೃಚ್ಛಾ (೧೨ನೆಯ ಶತಮಾನ) ಹಾಗೂ ಪ್ರಾಸಾದಮಂಡನೆ? (೧೫ನೇ ಶತಮಾನ)ಗಳಲ್ಲಿಯೂ ವೈರಾಜಾದಿ ತಲಚ್ಛಂದವು ಉಲ್ಲೇಖಗೊಂಡಿವೆ. ಪುನರ್‌ಪ್ರಬೇಧಗಳು ಶಿವತತ್ತ್ವ ರತ್ನಾಕರ ಗ್ರಂಥಕ್ಕಿಂತ ಭಿನ್ನ.

**ಅಪರಾಜಿತಪೃಚ್ಛಾ ಅಧ್ಯಾಯ ೧೦೪ ಶ್ಲೋಕ ೩-೫೭**

**ವೈರಾಜಂ ಪುಷ್ಪಕಂ ಚೈವ ಕೈಲಾಸಂ ಮಣಿಪುಷ್ಪಕಂ**
**ತ್ರಿವಿಷ್ಟಪಂ ಪಂಚಮಂ ಚ ನಂದಾದ್ಯಾಃ ಕ್ರಮಯೋಗತಃ॥**
**ವೈರಾಜಂ ಚತುರಶ್ರಂ ಸ್ಯಾದಾಯತಂ ಪುಷ್ಪಕಂ ತಥಾ**
**ವೃತ್ತಂ ವೃತ್ತಾಯತಂ ಚೈವ ಕೈಲಾಸಂ ಮಣಿಪುಷ್ಪಕಂ ॥**
**ತ್ರಿವಿಷ್ಟಪಂ ತಥಾಷ್ಟಾಶ್ರಂ ಪಂಚಪೂಜಾ ಮಹೋತ್ಸವಾಃ**

**ಪ್ರಾಸಾದ ಮಂಡನ ಅಧ್ಯಾಯ ೬ ಶ್ಲೋಕ**

ವಾಸ್ತೋ ಪಂಚವಿಧ'ಂ ಕ್ಷೇತ್ರಂ ಚತುರಶ್ರಂ ತಥಾಯುತಂ
ವೃತ್ತಂ ವೃತ್ತಾಯುತಂ ಚೈವ ಅಷ್ಟಾಶ್ರಂ ದೇವಾಲಯಾದಿಷು

ದೇವಾಲಯಗಳ ತಲರಚನೆಯಲ್ಲಿ ಮೂಲತಃ ಐದು ಆಕಾರಗಳನ್ನು ಎಲ್ಲಾ ಗ್ರಂಥಗಳೂ ಗುರುತಿಸಿವೆ. ತದನಂತರ ಪುನರ್ ಪ್ರಬೇಧಗಳು ಪ್ರಾದೇಶಿಕ ರೀತ್ಯ ವಿಭಿನ್ನವಾಗಿದೆ.

**ಶಿವತತ್ತ್ವ ರತ್ನಾಕರ**

**ಚತ್ವಾರಿಂಶತ್ ಪಂಚಯುಕ್ತಾಃ ಪ್ರಬೇಧಾಃ**
**ಪ್ರಾಸಾದಾನಾಂ ಕೀರ್ತಿತಾಃ ಸ್ಯುಃ ಕ್ರಮೇಣ**
**ಸಾಮಾನ್ಯೇಷಾಂ ಶೈವತಂತ್ರೋದಿತಾನಿ**
**ವ್ಯಾಖ್ಯಾಸೇಹಂ ಸಂವಿಜ್ಯ ಕ್ರಮೇಣ (ತು) ॥೯೯॥**

ಹೀಗೆ ೪೫ ಪ್ರಬೇಧಗಳನ್ನು ಪ್ರಾಸಾದ ತಲರಚನೆಗಳಲ್ಲಿ ಹೇಳಲಾಗಿದೆ.

ಇವುಗಳನ್ನು ಶೈವತಂತ್ರದಲ್ಲಿ ಹೇಳಲಾಗಿದ್ದು, ಇಲ್ಲಿ ಕ್ರಮವಾಗಿ ವಿಭಜಿಸಿ ಹೇಳಲಾಗಿದೆ.

**ವೈರಾಜ(೯) ಮೇರೋ[೧]ವೈ ಮಂದರ[೨] ಶ್ಚಾಪಿ ವಿಮಾನೋ[೩] ಭದ್ರ[೪] ಏವಚ**
**ಸರ್ವತೋಭದ್ರ[೫] ರುಚಕೋ[೬] ನಂದನೋ[೭] ನಂದಿವರ್ಧನಃ[೮] ॥೧೦೦॥**
**ಶ್ರೀವತ್ಸ್[೯] ಶ್ಚೇತಿ ವೈರಾಜೋ ವಲಭೀ[೧] ಗೃಹರಾಜಕಃ[೨]**
**ಪುಷ್ಪಕ (೯) ಶಾಲಾಗೃಹೋ[೩] ಮಂದರಶ್ಚ[೪] ವಿಮಾನೋ[೫] ಬ್ರಹ್ಮ[೬] ಮಂದಿರೌ[೭]**
**ಭುವನಪ್ರಭವೌ ಚಾಪಿ ಶಿಬಿಕಾಶ್ಚೇತಿ ಪುಷ್ಪಕಾಃ**
**ಕೈಲಾಸ (೯) ವಲಯೋ[೧] ದುಂದುಭಿಃ[೨] ಪದ್ಮೌ[೩] ಮಹಾಬ್ಜಃ[೪] ಮುಕುಳ[೫] ಸ್ತಥಾಃ**
**ಉಷ್ಣೀಷಃ ಶಂಖ[೭] ಕಲಶೌ[೮] ಶ್ರೀವೃಕ್ಷ[೯]ಶ್ಚೇತಿ ವೃತ್ತಜಃ**
**ಮಣಿಕ (೯) ಗಜ[೧]ಶ್ಚ ವೃಷಭೋ[೨] ಹಂಸೋ[೩] ಗರುಡಾ[೪] ಕ್ರೌಂ[೫]ಚ ಭೂಷಣಃ[೬] ॥೧೦೩॥**

**ಭೂಧರಃ[೭] ಶ್ರೀಧರ[೮]ಶ್ಚಾಪಿ ನವಮಃ ಪೃಥ್ವೀಜಯಃ[೯]**
**ತ್ರಿವಿಷ್ಟಪ (೯) ವಜ್ರಃ[೧] ಚಕ್ರಃ[೨] ಸ್ವಸ್ತಿಕ[೩]ಶ್ಚ ವಜ್ರಸ್ವಸ್ತಿಕ[೪] ಏವಚ ॥೧೯॥**
**ಚಕ್ರಸ್ವಸ್ತಿಕ[೫] ಖಗ್ದೌ[೬] ಚ ಗದಃ[೭] ಶ್ರೀಕಂಠ[೮] ಏವಚ**
**ವಿಜಯ[೯]ಶ್ಚೇತಿ ಸಂಪ್ರೋಕ್ತಾಃ ತ್ರಿವಿಷ್ಟಪ ಸಮುದ್ಭವಾಃ ॥೧೦೫॥**

ವೈರಾಜಾದಿ ಪ್ರಬೇಧಗಳನ್ನು ಕ್ರಮವಾಗಿ ಒಂಬತ್ತರಂತೆ ಪುನರ್ ಪ್ರಬೇಧಗಳನ್ನು ಹೆಸರಿಸಿದ್ದನ್ನು ಮೇಲ್ಕಂಡಂತೆ ಕಾಣಬಹುದು. ಶೈವತಂತ್ರ ಗ್ರಂಥದಲ್ಲಿ ೪೫ ಪ್ರಬೇಧಗಳಿಗೂ ಲಕ್ಷಣಗಳನ್ನು ಗುರುತಿಸಿರಲು ಸಾಧ್ಯ. ಆದರೆ ಸಧ್ಯಕ್ಕೆ ಆ ಗ್ರಂಥ ಲಭ್ಯವಿಲ್ಲ. ಅಪರಾಜಿತ ಪೃಚ್ಛಾ ಗ್ರಂಥಕಾರನು ಐದು ತಲ ವಿನ್ಯಾಸದಿಂದ ೧೮೮೮ ಪುನರ್ ಪ್ರಬೇಧಗಳೆನ್ನುತ್ತಾನೆ!

**ಇಷುಬೇಧಾಃ ಸಮುತ್ಪನ್ನಾ ಪಾಸಾದಾ ಸರ್ವಕಾಮದಃ**
**ಅಷ್ಟಾಶೀತಿರನ್ಯಭೇದಾಃ ಅಷ್ಟಾದಶ ಶತಾನಿ ಚ ॥೨೩॥**

ವೈರಾಜ್ಯಾದಿ ಪ್ರಬೇಧಗಳು ಔತ್ತರೇಯ ಮೂಲದ್ದೆಂದು ಈವರೆಗೆ ತಿಳಿದಿತ್ತು. ಈಗ ಗುರುತಿಸಿರುವ ಭಾಗ ೫೪೯ ಪ್ರಬೇಧಗಳು ಪುರಾಣ ಮೂಲದ್ದು ಎಂದು ಖಚಿತಗೊಂಡಿದೆ. ಅಗ್ನಿ ಪುರಾಣದ ೧೦೯ನೇ ಅಧ್ಯಾಯದಲ್ಲಿ ಈ ವಿವರಗಳಿವೆ.

ಈ ಪುನರ್‌ಪ್ರಬೇಧಗಳ ಹೆಸರುಗಳಲ್ಲಿ ಕೊಂಚ ಭಿನ್ನತೆ ಇದೆ. ಇದು ಹಸ್ತಪ್ರತಿ ತಯಾರಿಸುವಾಗ ಉಂಟಾಗಿರಬಹುದು. ಈ ಪುನರ್‌ಪ್ರಬೇಧಗಳಿಗೂ ವಿವರಣೆ ಇಲ್ಲ. ಅವುಗಳನ್ನು ಇದ್ದಂತೆಯೇ ಸದ್ಯಕ್ಕೆ ಸ್ವೀಕರಿಸಬೇಕು. ಈ ಪಠ್ಯ ಉತ್ತರಭಾರತದಲ್ಲಿ ಸಂಕಲನಗೊಂಡದ್ದು; ಇದರಲ್ಲಿ ಹೆಚ್ಚು ಸ್ಪಷ್ಟತೆ ಇದೆ.

**ಅಗ್ನಿಪುರಾಣ ಅಧ್ಯಾಯ ೧೦೪ ಶ್ಲೋ॥ ೧೧ಬಿ-೨೧ ಪುಟ ೨೮೬-೨೮೭)**
**ವೈರಾಜ ಪುಷ್ಪಕಶ್ಚಾನ್ಯ ಕೈಲಾಸೋ ಮಣಿಕಸ್ತಥಾ ॥೧೧॥**
**ತ್ರಿವಿಷ್ಟಪಂ ಚ ಪಂಚೈವ ಮೇರು ಮೂರ್ಧನಿ ಸಂಸ್ಥಿತಾಃ**

**ಚತುರಸ್ತ್ರಸ್ತು ತತ್ರಾದ್ಯೌ ದ್ವಿತೀಯೋಪಿ ತದಾಯತಃ ॥೧೨॥**
**ವೃತ್ತೋ ವೃತ್ತಾಯತಶ್ಚಾನ್ಯೋ ಹ್ಯಷ್ಟಾಶ್ರಶ್ಚಾಪಿ ಪಂಚಮಃ**

**ಏಕೈಕೋ ನವಧಾ ಭೇದೈಶ್ಚತ್ವಾರಿಂಶಾಶ್ಚ ಪಂಚ ಚ ॥೧೩॥**
**ಪ್ರಾಸಾದಃ ಪ್ರಥಮೋ ಮೇರು[೧] ದ್ವಿತೀಕತಿಯೋ ಮಂದರ[೨] ಸ್ತಥಾ**
**ವಿಮಾನಂ[೩]ಚ ತಥಾಭದ್ರ[೪] ಸರ್ವತೋಭದ್ರ[೫] ಏವ ಚ ॥೧೪॥**
**ಚರುಕೋ[೬] (ರುಚಕೋ) ನಂದಿಕೋ[೭] ನಂದಿವರ್ಧನ[೮] ಸ್ತಥಾಪರಃ**
**ಶ್ರೀವತ್ಸ[೯] ಶ್ಚೇತಿ ವೈರಾಜಾನ್ನವಾಯೇ ಚ ಸಂಸ್ಥಿತಾಃ ॥೧೫॥**
**ಬ(ವ)ಲಭೀ[೧] ಗೃಹರಾಜ[೨] ಶ್ಚ ಶಾಲಾಗೃಹ[೩] ಶ್ಚ ಮಂದಿರಂ[೪]**
**ವಿಶಾಲಶ್ಚ[೫] ಸಮೋಬ್ರಹ್ಮಮಂದಿರಂ[೬] ಭುವನಂ[೭] ತಥಾ ॥೧೬॥**
**ಪ್ರಭವಃ[೮] ಶಿವಿ (ಬಿ)ಕ[೯] ವೇಶ್ಮ ನವೈತೇ ಪುಷ್ಪಕೋದ್ಭವಾಃ**

ಬಲ[೧]ಯೋ ದುಂದುಭಿಃ[೨] ಪದ್ಮೋ[೩] ಮಹಾಪದ್ಮ[೪]ಕ ಏವಚ ॥೧೭॥
ವರ್ಧಿನೀ[೫] ವಾನ್ಯ ಉಷ್ಣೀಷಃ[೬] ಶಂಖಶ್ಚ[೭] ಕಲಸ(ಶ)[೮] ಸ್ತಥಾ
ಸ್ವ(ಶೀ)ವೃಕ್ಷಶ್ಚ[೯] ತಥಾಪ್ಯೇತೇ ವೃತ್ತಾಃ ಕೈಲಾಸಸಂಭವಾಃ ॥೧೮॥
ಗಜೋ[೧]ಥ ವೃಷಭೋ[೨] ಹಂಸೋ[೩] ಗರುತ್ಮಾನ್[೪] ವೃಕ್ಷನಾಯಕಃ[೫]
ಭೂಷಣೋ[೬] ಭೂಧರಶ್ಚಾ[೭]ನ್ಯೇ ಶ್ರೀ[೮]ಜಯಃ ಪೃಥವೀಧರಃ ॥೧೯॥
ವೃತ್ತಾಯತಾತ್ ಸಮುದ್ಭೂತಾ ಮಣಿಕಾಹ್ವಯಾತ್
ವಜ್ರಂ[೧] ಚಕ್ರಂ[೨] ತಥಾಚಾನ್ಯಾತ್ ಸ್ವಸ್ತಿಕಂ[೩] ವಜ್ರಸ್ವಸ್ತಿಕಂ[೪] ॥೨೦॥
ಚಿತ್ರಸ್ವಸ್ತಿಕಂ[೫] ಖಡ್ಗಂ[೬] ಗದಾ[೭] ಚ ಶ್ರೀಕಂಠ[೮] ಕವಚ
ವಿಜಯೋ[೯] ನಾಮತಶ್ಚೇತೇ ತ್ರಿವಿಷ್ಟಪ ಸಮುದ್ಭವಃ ॥೨೧॥

ಶಾಸ್ತ್ರಗ್ರಂಥಗಳ ಸಂಪಾದನೆಯಲ್ಲಿ ಇತರ ಪಾಠಾಂತರಗಳನ್ನು ಅವಲಂಬಿಸುವುದಕ್ಕಿಂತ, ಇನ್ನಿತರ ಗ್ರಂಥಗಳಲ್ಲಿರುವ ಉಲ್ಲೇಖಗಳೊಡನೆ ತಾಳೆ ನೋಡುವುದು ಉತ್ತಮವೆನಿಸುತ್ತದೆ. ಇದರಿಂದ ಶಾಸ್ತ್ರಗ್ರಂಥಗಳ ವ್ಯಾಪ್ತಿಯನ್ನು ಅರಿಯಬಹುದು; ಹೊಸ ಆಲೋಚನೆಗಳನ್ನೂ ಹುಟ್ಟುಹಾಕುತ್ತದೆ.

ಗರ್ಭಗೃಹದ ಅಳತೆ, ಸ್ಥಾಪನೆ, ಲಿಂಗಮಾನ, ವಾಹನಾಲಯ, ಪ್ರಾಕಾರ ರಚನೆ ಇತ್ಯಾದಿಗಳ ಬಗ್ಗೆ ಶಿವತತ್ತ್ವ ರತ್ನಕರದಲ್ಲಿ ಚರ್ಚಿಸಲಾಗಿದೆ. ಕೆಳದಿ ಅರಸರ ಕಾಲದಲ್ಲಿ ಇವು ಉಪಯೋಗ ಕಂಡಿರಬೇಕು. ವಿವರಗಳನ್ನು ತಿಳಿಯುವಲ್ಲಿ ಬಾಧಕವಿಲ್ಲ.

**ಗರ್ಭಗೃಹ**

ಷಟ್‌ತ್ರಿಂಶದ್ ಹಸ್ತಮಾರಾಭ್ಯ ಚತುರತುರುಪಾಯತಃ
ಚತುಷ್‌ಕರಾಂತಾಃ ಪ್ರಾಸಾದಾ ನವೈಕೈಕ ಸಮುದ್ಭವಃ ॥೧೦೫॥

ಗರ್ಭಗೃಹದ ಅಳತೆಯನ್ನು ೨೬ ಹಸ್ತಗಳಿಂದ ಆರಂಭಿಸಿ, ನಾಲ್ಕು-ನಾಲ್ಕು ಹಸ್ತ ಕಡಿಮೆ ಮಾಡುತ್ತಾ ೪ ಹಸ್ತದವರೆಗೆ ಒಂಬತ್ತು ಅಳತೆಗಳ ಸಂಭಾವ್ಯತೆಯನ್ನು ಇಲ್ಲಿ ಹೇಳಲಾಗಿದೆ.

ಃ೬-೩೨-೨೮-೨೮-೨೦-೧೬-೧೨-೮-೪ ಹಸ್ತಗಳು
+ + + + + + + + +
೯- ೮- ೭- ೬ - ೫- ೪- ೩- ೨-೧ (+೧/೪)

ಏತೇಷಾಂ ಆಯತಾ ಏತು ತತ್‌ಪಾದೇನ ಚ ಸಂಯುತಾಃ
ನವಾದ್ಯೇಕ ಕರಾಂತಾನಿ ಲಿಂಗಾನಿ ಏಷಾಂ ಕ್ರಮಾದ್ ವಿದುಃ
॥೧೦೬)

ಆಯತಾಕಾರ ರಚನೆಗೆ ಒಂದು ಪಾದದಷ್ಟು = ೧/೪ ಭಾಗದಷ್ಟು ಹೆಚ್ಚಿಸಬೇಕು. ಒಂಬತ್ತು ಹಸ್ತದಿಂದ ಒಂದು ಹಸ್ತದವರೆಗೆ ಕ್ರಮವಾಗಿ ಲಿಂಗದ ಅಳತೆಯೆಂದೂ ತಿಳಿಯಬೇಕು.

ಅಲ್ಪೋತ್ಸಾಹಾ ವಿತ್ತಹೀನಾ ಮನುಷ್ಯಾಃ
ಕರ್ತುಂ ನೈತಾನ್ಯತ್ರ ಲೋಕೇ ಸಮರ್ಥಾಃ

**ತಸ್ಮಾದೇಷಾಂ ವರ್ತನಂ ನಾತ್ರ ವಕ್ಷೇ**
**ಪ್ರಸಾದಾನಾಂ ಗ್ರಂಥ ಬಾಹುಲ್ಯ ಭೀರುಃ ॥**
**॥೧೦೭॥**

ಕಡಿಮೆ ಉತ್ಸಾಹವಿರುವ ಹಾಗೂ ಹಣವಿಲ್ಲದ ಸಾಮಾನ್ಯರು ಇವನ್ನು ರಚಿಸಲು ಸಮರ್ಥರಲ್ಲ ಆದ್ದರಿಂದ ಈ ಪ್ರಾಸಾದಗಳ ಪ್ರಬೇಧಗಳನ್ನು, ವಿವರಗಳನ್ನು ಗ್ರಂಥಬಾಹುಲ್ಯ ಭೀತಿಯಿಂದ ಇಲ್ಲಿ ಹೇಳಲಾಗಿಲ್ಲ.

**ಸ್ಥಾಪನ :**

**ಸಿದ್ಧಕ್ಷೇತ್ರೇ ಮಹಾನದ್ಯಾಂ ಪರ್ವತೇ ವನಗಹ್ವರೇ**
**ಪ್ರತಿಷ್ಠಿತಂ ಚಿರಾನಾರ್ಚಂ ಪ್ರತಿಷ್ಠಿತಮೇವವಾ ॥೧೦೮॥**
**ಆನಯೇತ್ ಸ್ಥಾಪಾನಾರ್ಥಾಯ ಲಿಂಗಂ ಶ್ಲಕ್ಷ್ಣಂ ಚ ವರ್ತುಲಂ**
**ಸ್ಥಾಪಯೇತ್ ತತ್ರ ಚೌಗಾರೇ ಪ್ರಾಸಾದಾದ್ಯಂ ನ**
**ಶೋಧಯೇತ್ ॥೧೦೯॥**

ಸಿದ್ಧಕ್ಷೇತ್ರಗಳಲ್ಲಿ, ನದೀತೀರಗಳಲ್ಲಿ ಗಿರಿಪರ್ವತಗಳಲ್ಲಿ, ಕಾಡುಮೇಡುಗಳಲ್ಲಿ, ಗುಹೆಗಹ್ವರಗಳಲ್ಲಿ ಪ್ರತಿಷ್ಠೆಗೊಂಡ ಲಿಂಗಗಳಿಗೆ, ಹಲವು ಕಾಲದಿಂದ ಪೂಜಾದಿ ಕೈಂಕರ್ಯಗಳು ನಡೆಯದೆ ಇರಬಹುದು. ಅಂತಹ ಸ್ಥಳಗಳಲ್ಲಿರುವ ಅಂದವಾದ, ನುಣುಪಾದ, ವರ್ತುಲಾಕಾರದ ಲಿಂಗಗಳನ್ನು ಪ್ರತಿಷ್ಠಿಸುವ ಸಲುವಾಗಿ ಕೊಂಡೊಯ್ಯಬಹುದು. ಆ ಸ್ಥಳಗಳನ್ನು ಶುದ್ಧಿಗೊಳಿಸುವ ಅಗತ್ಯವಿಲ್ಲ.

**ನವೀಕರಣ ಪಕ್ಷೇತು ಪ್ರಾಸಾದಾದ್ಯಂ ವಿಚಾರಯೇತ್**
**ಕರ್ತುಶ್ಚಂದ್ರಾನುಕೂಲೇವಹ್ನಿ ಗುರು ಶುಕ್ರಸ್ತ ವರ್ಜಿತೇ ॥೧೧೦॥**
**ವಾಸ್ತುಂ ಸಂಪೂಜ್ಯ ವಿಧಿವತ್ ಕೃತ್ವಾ ಹೋಮಂ ಬಲಿಂ ಹರೇತ್**
**ಜಲಾಂತಂ ವಾ ಶಿಲಾಂತಂ ವಾ ಖಾತ್ವಾ ಭೂಮಿಂ**
**ವಿಶೋಧಯೇತ್ ॥೧೧೧॥**

ಆಲಯವನ್ನು ನವೀಕರಿಸುವ ಪಕ್ಷದಲ್ಲಿ ಶುದ್ಧೀಕರಣದ ಬಗ್ಗೆ ಯೋಚಿಸಬೇಕು. ಕರ್ತೃವಿಗೆ ತಾರಾಬಲವಿದ್ದು, ಚಂದ್ರ, ಗುರು, ಶುಕ್ರರು ಅನುಕೂಲ ಸ್ಥಾನದಲ್ಲಿ ಇರುವ ದಿನ ಶುಭ ಸಮಯದಲ್ಲಿ ವಾಸ್ತುವನ್ನು ವಿಧಿವತ್ತಾಗಿ ಪೂಜಿಸಿ. ಹೋಮ ಮಾಡಿ. ಬಲಿಯನ್ನು ಅರ್ಪಿಸಬೇಕು. ನೀರು ಕಾಣದವರೆಗೆ. ಗಟ್ಟಿಕಲ್ಲು ಬರುವವರೆಗೆ ತೋಡಿ ಭೂಮಿಯನ್ನು ತಳಪಾಯ ರಚನೆಗಾಗಿ ಶೋಧಿಸಬೇಕು.

**ಆಧಾರೇ ಶಕ್ತಿಪೀಠಂ ಚ ನ್ಯಸ್ಯ ಹೋಮಂ ಸಮಾಚರೇತ್**
**ಸಂಸ್ಥಾಪ್ಯ ಕೂರ್ಮಪೀಠಂ ಚ ಪ್ರಾರ್ಥಯೇದಿತಿ ಮಂತ್ರತಃ**
**॥೧೧೨॥**

ಆಧಾರ ಶಕ್ತಿ ಪೀಠವನ್ನು ಇರಿಸಿ ಹೋಮವನ್ನು ಮಾಡಬೇಕು. ಕೂರ್ಮಪೀಠವನ್ನು ಮಂತ್ರವಿಧಿ ಪೂರ್ವಕವಾಗಿ ಸ್ಥಾಪಿಸಿ, ಈ ರೀತಿ

**ಪ್ರಾರ್ಥಿಸಬೇಕು:**

**ನಮಸ್ತೇ ಕೂರ್ಮ ರೂಪಾಯ ವಿಷ್ಣವೇ ವಿಶ್ವಧಾರಿಣೇ**
**ಕರಿಷ್ಯಮಾಣ ಪ್ರಾಸಾದ ನಿಮಿತ್ತಂ ಸ್ಥಾತುಮರ್ಹಸಿ ॥೧೧೩॥**

ಎಲೈ, ವಿಶ್ವವನ್ನು ಧರಿಸಿರುವ ಕೂರ್ಮರೂಪಿಯಾದ ವಿಷ್ಣುವೇ, ಪ್ರಾಸಾದ ರಚನೆಯ ನಿಮಿತ್ತ ನಿನ್ನನ್ನು ಇಲ್ಲಿ ಸ್ಥಾಪಿಸುತ್ತಿದ್ದೇನೆ. ನಿನಗೆ ನಮಸ್ಕಾರ.

**ಅನಂತಾಕಾರ ಪೀಠಂ ಚ ದಿಗ್ಗಜಾನ್ ದಿಕ್ಷು ವಿನ್ಯಸೇತ್**
**ಪದ್ಮಾಕಾರಂ ನ್ಯಸೇತ್ ಪೀಠಂ ಪಂಚದಾ ಪರಿಕೀರ್ತಿತಂ ॥೧೧೪॥**
**ಪಾತಾಲಾದಿಕಂ ಆರಭ್ಯನ್ಯ ಸೇತ್ ಸಪ್ತಶಿಲಾಃ ತತಃ**
**ಪದ್ಮಯೋರಂತರೇ ಜೈವ ಬ್ರಹ್ಮನಾಲಂ ಪ್ರಕಲ್ಪಯೇತ್ ॥೧೧೫॥**
**ಸ್ವರ್ಣೇ ರಜತೇನಾಪಿ ನಾಲಂ ತಾಮ್ರೇಣ ವಾ ಭವೇತ್**
**ನಾಲೋರ್ಧ್ವೇ ಪದ್ಮಪೀಠಂ ಚ ತತಃ ಪೀಠತ್ರಯಾತ್ಮಕಂ ॥೧೧೬॥**

ಶೇಷರೂಪಿಯಾದ ಪೀಠವನ್ನು ರಚಿಸಿ, ದಿಕ್ಕು ವಿದಿಕ್ಕುಗಳಲ್ಲಿ ದಿಗ್ಗಜಗಳನ್ನು ಜೋಡಿಸಬೇಕು. ನಂತರ ಐದು ಸ್ತರಗಳುಳ್ಳ ಪದ್ಮಪೀಠ, ಪುನಃ ಪಾತಾಲಾದಿ ಸಪ್ತಶಿಲೆಗಳು, ಚಿನ್ನ, ಬೆಳ್ಳಿ ಅಥವಾ ತಾಮ್ರದಿಂದ ಮಾಡಿದ ಬ್ರಹ್ಮನಾಲವನ್ನಿರಿಸಬೇಕು. ನಾಲದ ತುದಿಯಲ್ಲಿ ಪುನಃ ತ್ರಿಮೂರ್ತಿಗಳನ್ನು ಪ್ರತಿನಿಧಿಸುವ ಪದ್ಮಪೀಠವನ್ನು ಇರಿಸಬೇಕು.

ಟಿಪ್ಪಣಿ : ಗರ್ಭಗೃಹದಲ್ಲಿ ಬೇರಪ್ರತಿಷ್ಠಾಪನೆಗೆ ಮುನ್ನ, ಪ್ರತಿಮೆಯ ಕೆಳಗೆ, ಆಧಾರ ಶಕ್ತಿಪೀಠಾದಿಗಳನ್ನು ಕುರಿತು ಹೇಳಲಾಗಿದೆ. ಪ್ರಯೋಗ ಅನುಭವ ಇರುವವರಿಂದ ಹೆಚ್ಚು ಮಾಹಿತಿ ಪಡೆಯಲು ಸಾಧ್ಯ. ಮೈಸೂರು ವಿ.ವಿ. ಪ್ರಕಟಣೆ, ಯುಗಯಾತ್ರೀ ಭಾರತೀಯ ಸಂಸ್ಕೃತಿ ಸಂ ೪ (ಪು.೨೪೪-೨೪೫) ರಲ್ಲಿ "ತಂತ್ರ ಸಮುಚ್ಚಯ"ವನ್ನು ಆಧರಿಸಿದ ಸಚಿತ್ರ ಮಾಹಿತಿ ಇದೆ. ಆಸಕ್ತರು ಗಮನಿಸಬಹುದು.

ಲಿಂಗಮಾನ : **ನವಾಷ್ಟಸಪ್ತಹಸ್ತೋಚ್ಚಂ ಲಿಂಗಂ ಸ್ಯಾದುತ್ತಮಂತ್ರಿಧಾ**
**ಷಟ್ಪಂಚವೇದಹಸ್ತೋಚ್ಚಂ ಲಿಂಗಂ ತನ್ಮಧ್ಯಮಂ ತ್ರಿಧಾ ॥೧೧೭॥**
**ತ್ರಿ ದ್ವ್ಯೈಕ ಹಸ್ತಮಾನಂ ಚಲಿಂಗಂ ಸ್ಯಾದಧಮಂತ್ರಿಧಾ**
**ಏವಂ ನವವಿಧಂ ಲಿಂಗಮುತ್ತಮಾದಿ ವಿಭೇದತಃ ॥೧೧೮॥**

ಉತ್ತಮಾದಿ ಮೂರು ಮೂರು ಅಳತೆಯ ಲಿಂಗರಚನೆಯನ್ನು ಹೇಳಲಾಗಿದೆ. ೯,೮,೭ ಹಸ್ತ ಎತ್ತರದ ಲಿಂಗಗಳು ಉತ್ತಮ, ೬,೫,೪ ಹಸ್ತ ಎತ್ತರದ ಲಿಂಗಗಳು ಮಧ್ಯಮವೆನ್ನಲಾಗಿದೆ. ೩,೨,೧ ಹಸ್ತದ ಎತ್ತರದ ಲಿಂಗಗಳು ಅಧಮವೆನ್ನಲಾಗಿದೆ. ಈ ರೀತಿ ಲಿಂಗರಚನೆಯಲ್ಲಿ ಒಂಬತ್ತು ಮಾನಗಳು

**ಬ್ರಹ್ಮ ವಿಷ್ಣು ಕಪರ್ದ್ಯಂಶೈಃ ಚತುರಶ್ರಾಷ್ಟ ವರ್ತುಲೈಃ**
**ಪೀಠತ್ರಯಂ ಕಾರಯಿತ್ವಾ ಪಂಚಸೂತ್ರ ಸಮನ್ವಿತಂ ॥೧೧೯॥**

ಬ್ರಹ್ಮ, ವಿಷ್ಣು, ಕಪರ್ದಿನ್ (ರುದ್ರ) ಅಂಶಗಳುಳ್ಳ ಚತುರಶ್ರ, ಅಷ್ಟಾಶ್ರ ವೃತ್ತಾಕಾರವುಳ್ಳ ಪಂಚಸೂತ್ರ (ಬ್ರಹ್ಮಸೂತ್ರ)ಗಳುಳ್ಳ ಮೂರು ಸ್ತರಗಳ (ಪಾಣಿ) ಪೀಠವನ್ನುಳ್ಳ ಲಿಂಗವನ್ನು ರಚಿಸಬೇಕು.

**ಟಿಪ್ಪಣಿ** : ಲಿಂಗವೆಂದರೆ ಗುರುತು, ಚಿಹ್ನೆ, ಸಂಕೇತ ಎಂದೇ ಅರ್ಥ ಲಿಂಗವನ್ನು ಸ್ತಂಭ ಅಥವಾ ಸ್ಕಂಭ ರೂಪದಲ್ಲಿ ಕಾಣಬಹುದು. ಇದರ ಮೂಲವನ್ನು ಅಥರ್ವವೇದ, ೧೦ನೇ ಕಾಂಡ, ೭ನೇ ಸೂಕ್ತದಲ್ಲಿ ಕಾಣಬಹುದು.

**ಸ್ಕಂಭಂ ತದ್‌ಬ್ರೂಹಿಕತಮಸ್ವಿದೇವಸಃ**

ಲಿಂಗವು ಈಶ್ವರ ರೂಪ, ಎಲ್ಲಾ ದೇವತೆಗಳ ಪ್ರತಿನಿಧಿ, ಎಲ್ಲ ದೇವತೆಗಳೂ ಇದರಲ್ಲಿ ಅಡಗಿದ್ದಾರೆ ಎಂಬ ಅಂಶವನ್ನು ಅಥರ್ವವೇದದಲ್ಲಿ ಗುರುತಿಸಬಹುದು. ಇದನ್ನು ಸರಳೀಕರಿಸಿ ಸೃಷ್ಟಿ ಸ್ಥಿತಿ ಲಯ ಕರ್ತರಾದ, ಬ್ರಹ್ಮ ವಿಷ್ಣು, ರುದ್ರರನ್ನು ಪ್ರತಿನಿಧಿಸುವಂತೆ ಚತುರಶ್ರ, ಅಷ್ಟಾಶ್ರ, ವೃತ್ತಾಕಾರದಲ್ಲಿ ಈ ದೇವತೆಗಳನ್ನು ಪ್ರತಿನಿಧಿಸಲಾಗಿದೆ. ಪಾಣಿಪೀಠದಲ್ಲಿ ಜೋಡಿಸಿರುವ ಲಿಂಗದ ಮೇಲ್ಭಾಗ ವರ್ತುಲಾಕಾರ ಮಾತ್ರ ಕಾಣುವುದರಿಂದ, ಲಿಂಗವೆಂದರೆ ರುದ್ರ – ಶಿವ, ಶೈವ ರೂಪ ಎಂಬುದು ಚಾಲ್ತಿಯಲ್ಲಿದೆ. ಆದರೆ ಲಿಂಗ ತ್ರಿಮೂರ್ತಿಗಳ ಪ್ರತಿನಿಧಿ.

**ಲಿಂಗ(ಂ) ಪೀಠಂ ತಥಾನಾಲಂ ಲಿಂಗಾಗ್ರಾತ್ ಪಾದಮೇವಚ**
**ಲಿಂಗಾಗ್ರ ಮುಖಪರ್ಯಂತಂ ಪಂಚಸೂತ್ರಮುದಾಹೃತಂ ॥೧೨೦)**
**ಲಿಂಗಲಕ್ಷಣಮಿತ್ಯುಕ್ತಂ ಗರ್ಭಲಕ್ಷಣ ಮುಚ್ಯತೇ**
**ಲಿಂಗ ಪೀಠ(ಪಾಣಿಪೀಠ)ವನ್ನು ಹಾಗೂ ವರ್ತುಲಾಕಾರದ ಲಿಂಗ ಭಾಗವನ್ನು ೧/೪ ಭಾಗ ರಚಿಸಿ ಲಿಂಗದ ಮುಂಭಾಗದ ಮುಖಭಾಗದಲ್ಲಿ ಪಂಚಸೂತ್ರ (ಬ್ರಹ್ಮಸೂತ್ರ)ಗಳನ್ನು ರಚಿಸಬೇಕು. ಈ ರೀತಿ ಲಿಂಗದ ಲಕ್ಷಣಗಳನ್ನು ಹೇಳಲಾಗಿದೆ.**

**ಟಿಪ್ಪಣಿ** : ಲಿಂಗವನ್ನು ಪಾಣಿಪೀಠದ ಮಧ್ಯದಲ್ಲಿ ಜೋಡಿಸಿದಾಗ ಬ್ರಹ್ಮಭಾಗ ಹಾಗೂ ವಿಷ್ಣು ಭಾಗವು ಮರೆಯಾಗುತ್ತವೆ. ಕೇವಲ ವರ್ತುಲಾಕಾರದ ರುದ್ರಭಾಗ ಮೇಲ್ಗಡೆ ಗೋಚರವಾಗುತ್ತದೆ. ಇದನ್ನು ಪೂಜಾಂಶವೆನ್ನುತ್ತಾರೆ. ಈ ರುದ್ರಭಾಗದಲ್ಲಿ ಬ್ರಹ್ಮಸೂತ್ರದ ಗೆರೆಗಳಿರುತ್ತವೆ. ಬ್ರಹ್ಮಸೂತ್ರದ ರಚನೆಯನ್ನು "ಲಕ್ಷಣೋದ್ಧಾರ" ಶೀರ್ಷಿಕೆಯಡಿಯಲ್ಲಿ ಶಿಲ್ಪ ರತ್ನ, ಕಾಶ್ಯಪಶಿಲ್ಪ ಗ್ರಂಥಗಳಲ್ಲಿ ವಿವರಿಸಲಾಗಿದೆ.

ಗರ್ಭಗೃಹ : **ಪೀಠಾನ್ನವಗುಣಂ, ಪ್ರೋಕ್ತಮುತ್ತಮಂ ಗರ್ಭಲಕ್ಷಣಂ** ॥೧೨೧॥
**ಪೀಠಸ್ಯ ಪಂಚಗುಣಿತಂ ಮಧ್ಯಮಂ ಗರ್ಭಲಕ್ಷಣಂ**
**ಪೀಠಸ್ಯ ತ್ರಿಗುಣಂ ಗರ್ಭಮಥಮಂ ಪರಿಕೀರ್ತಿತಂ ೧೨೨॥**
**ಏವಂ ಚ ತ್ರಿವಿಧಂ ಗರ್ಭಂ ಗರ್ಭಾರ್ಧಂ ತದನಂತರಂ**

ಗರ್ಭಗೃಹದ ಅಳತೆಯು ಪೀಠದ ಒಂಭತ್ತರಷ್ಟು ಇದ್ದಲ್ಲಿ ಉತ್ತಮ. ಪೀಠದ ಐದರಷ್ಟು ಇದ್ದಲ್ಲಿ ಮಧ್ಯಮ; ಪೀಠದ ಮೂರರಷ್ಟು ಅಧಮ. ಈ ರೀತಿ ಗರ್ಭಗೃಹದ ಅಳತೆಯು ಮೂರು ವಿಧ. ನಂತರ ಗರ್ಭಾರ್ಧ= ಅಂತರಾಳವು ರಚನೆಗೊಳ್ಳಬೇಕು.

**ರಂಗಮಂಟಪ** : ದ್ವಾರದ್ವಯ ಸಮಾಯುಕ್ತಂ ತತ್‌ಪ್ರಮಾಣಂ ಚ ಮಂಟಪಂ ॥೧೨೩॥

**ಚತುರ್ದ್ವಾರ ಸಮಾಯುಕ್ತಂ ಷೋಡಶಸ್ತಂಭ ಸಂಯುಕ್ತಂ**
**ದರ್ಪಣೋದರ ಸಂಕಾಶಂ ನಾನಾಮೂರ್ತಿ ಸಮನ್ವಿತಂ ॥೧೨೪॥**

ರಂಗಮಂಟಪಮಿತ್ಯುಕ್ತಂ ಗರ್ಭಾರ್ಧ ವಾಹನಾಲಯಂ

ಎರಡು ದ್ವಾರವುಳ್ಳ ಅದೇ ಅಳತೆಯ ಮಂಟಪವನ್ನು ರಚಿಸಬೇಕು. (ಬಹುಶಃ ಇದು ಗರ್ಭಾರ್ಧವೆಂದು ಸೂಚಿಸಿದ ಅಂತರಾಳಕ್ಕೆ ಸಂಬಂಧಿಸಿದೆ.) ನಾಲ್ಕು ದ್ವಾರವುಳ್ಳ ೧೬ ಕಂಬಗಳುಳ್ಳ ಮಧ್ಯೆ ಹೊಳೆಯುವಂಥ (ಪ್ರಧಾನವಾಗಿ ಕಾಣುವ) ರಂಗಮಂಟಪವನ್ನು ರಚಿಸಬೇಕು. (೧೬ ಕಂಭಗಳುಳ್ಳದ್ದು ನವರಂಗವೇ ಆಗಿದೆ. ಮಧ್ಯದ ಚತುಷ್ಕ ಪ್ರಧಾನವಾದುದು) ನವರಂಗದಲ್ಲಿ ಹಲವು ಪ್ರತಿಮೆಗಳನ್ನು ಇರಿಸಬಹುದು. ಇದನ್ನು ಪ್ರತಿಮಾ ಮಂಟಪವೆಂದು ಗುರುತಿಸುತ್ತಾರೆ. ನಂತರ ಅಂತರಾಳದಷ್ಟೇ ಅಳತೆಯುಳ್ಳ ವಾಹನಮಂಟಪವನ್ನು ರಚಿಸಬೇಕು.

ವಾಹನಾಲಯ : **ದ್ವಾದಶ ಸ್ತಂಭಸಂಯುಕ್ತಂ ಚತು ಸ್ತಂಭಮಥಾಪಿವಾ ॥೧೨೫॥**
**ಚತುರ್ದಿಕ್ಷು ಚತುರ್ದ್ವಾರಂ ಪಂಚಾಂತರ ಸಮನ್ವಿತಂ**
**ತಮಾಧ್ವೇ ಗೋಪುರಾಕಾರಂ ತದಗ್ರೇ ಕಲಶಂ ಭವೇತ್ ॥೧೨೬॥**

ಹನ್ನೆರಡು ಸ್ತಂಭ ಅಥವಾ ನಾಲ್ಕು ಸ್ತಂಭಗಳ ನಾಲ್ಕು ದಿಕ್ಕಿನಲ್ಲಿಯೂ ದ್ವಾರವಿರುವ ಐದು ಹಸ್ತಗಳ ಅಂತರದಲ್ಲಿ ವಾಹನಾಲಯವನ್ನು ರಚಿಸಬೇಕು. ಮೇಲ್ಗಡೆ ಗೋಪುರಾಕೃತಿ ಶಾಲಾಕೃತಿ ಇದ್ದು ಕಲಶದಲ್ಲಿ ಅಂತ್ಯಗೊಳ್ಳುತ್ತದೆ.

**ಸ್ಥಾಪಯೇತ್ ಚ ಮಹಾನಂದಿಂ ಫಾಲನೇತ್ರ ಸಮನ್ವಿತಂ**
**ವಾಹನಾಲಯದಲ್ಲಿ ನಂದಿಯನ್ನು ಸ್ಥಾಪಿಸಬೇಕು. ಇದರೊಡನೆ ಮುಕ್ಕಣ್ಣನೂ ಇರಬೇಕು. (ವೃಷಭಾರೂಢ ಶಿವನನ್ನು ಇಲ್ಲಿ ಸ್ಥಾಪಿಸಲು ಆದೇಶಿಸಿದಂತಿದೆ!)**

ಪ್ರಾಕಾರ : **ಗರ್ಭಸ್ಯ ತ್ರಿಗುಣಂ ಕುರ್ಯಾತ್ ಪ್ರಕಾರಂ ಪರಿತಸ್ತತಃ ॥೧೨೭॥**
**ಪ್ರಾಕಾರಾಗ್ರೇ ನ್ಯಸೇತ್ ದ್ವಾರಂ ಗೇಹದ್ವಾರಾದಿಕಂ ಪುನಃ**
**ಗರ್ಭಸ್ಯ ಪಂಚಗುಣಿತಂ ಬಹಿಪ್ರಾಕಾರ ವಿಸ್ತರಂ ॥೧೨೮॥**

ಗರ್ಭಗೃಹದ ಅಳತೆಯ ಮೂರರಷ್ಟು ಸುತ್ತಲೂ ಪ್ರಕಾರವನ್ನು ರಚಿಸಬೇಕು. ಪ್ರಾಕಾರದ ಮುಂಭಾಗದಲ್ಲಿ ದ್ವಾರವನ್ನು ನಿರ್ಮಿಸಬೇಕು. ಗರ್ಭಗೃಹದ ಐದರಷ್ಟು ವಿಸ್ತಾರವುಳ್ಳ ಹೊರಪ್ರಾಕಾರವನ್ನು ನಿರ್ಮಿಸಬೇಕು (ಇದು ಗರ್ಭಗೃಹದೊಡನಿರುವ ದೂರವನ್ನೂ, ಪ್ರಾಕಾರದ ಎತ್ತರವನ್ನೂ ಸೂಚಿಸುತ್ತದೆ).

**ಪುರದ್ವಾರಾಧಿಕಂ ಕುರ್ಯಾದ್ ಬಹಿದ್ವಾರಂ ವಿಚಕ್ಷಣಃ**
**ಗೇಹಾರ್ಧ ಶಿಖರಂ ವತ್ಸ ತದಗ್ರೇಕಲಶಂ ನ್ಯಸೇತ್ ॥೧೨೯॥**

ತನ್ನಿರ್ಮಿತಂ ಸಾರ್ಧಹಸ್ತಂ ಸ್ಯಾತ್ ಸ್ವರ್ಣ ರೌಪ್ಯಾದಿಭೇದತಃ

ಬಹಿಪ್ರಾಕಾರ ದ್ವಾರಕ್ಕಿಂತ ದೊಡ್ಡದಾರ ಪುರ ದ್ವಾರವನ್ನು ರಚಿಸಬೇಕು. ಗರ್ಭಗೃಹದ ಅರ್ಧದಷ್ಟು ಎತ್ತರದ ಮೇಲ್ಕಟ್ಟಡ (ಶಿಖರ)ವನ್ನೂ ತುದಿಯಲ್ಲಿ ಕಲಶವನ್ನು

ಇಡಬೇಕು. ಚಿನ್ನದ ಅಥವಾ ಬೆಳ್ಳಿಯ ಕಲಶವು ೧ ೧/೨ ಹಸ್ತದಷ್ಟು ಎತ್ತರವುಳ್ಳದ್ದು. (ಗೋಪುರ ಎಂದರೆ ಪ್ರವೇಶದ್ವಾರವೇ ಆಗಿದೆ. "ಪುರದ್ವಾರಂ ತು ಗೋಪುರಂ" ಸಾಮಾನ್ಯವಾಗಿ ಗೋಪುರದಲ್ಲಿ ಶಾಲಾಕಾರ ಶಿಖರವಿರುತ್ತದೆ. ಪುರಕ್ಕೆ ಅನ್ವಯಿಸಿದ ಗೋಪುರ, ಪ್ರಾಕಾರ ರಚನೆಯುನ್ನು ದೇವಾಲಯು ಸಂಕೀರ್ಣಗಳೂ ಅಳವಡಿಸಿಕೊಂಡವು. ಗೋಪುರ ರಚನೆಯು ಕೆಲವು ವಿಶಾಲವಾದ ದೇವಾಲಯಗಳಲ್ಲಿ ನಾಲ್ಕು ಕಡೆಯೂ ಇರಲು ಸಾಧ್ಯ.)

**ಪೂರ್ವೇತು ವೃಷಭಃ ಪ್ರೋಕ್ತಾ ಆಗ್ನೇಯಾಂ ಷಣ್ಮುಖಸ್ತಥಾ ॥೧೩೦॥**
**ದಕ್ಷಿಣೇ ಗಣನಾಥಃ ಸ್ಯಾದ್ ವೀರಭದ್ರಸ್ತು ನೈರುತೇ**
**ಪಶ್ಚಿಮೇ ವಿಷ್ಣುಮೂರ್ತಿಶ್ಚ ವಾಯುಪುತ್ರಶ್ಚ ವಾಯುವೇ ॥೧೩೧॥**
**ಉತ್ತರೇ ಪಾರ್ವತೀಂ ಸ್ಥಾಪ್ಯ ಈಶಾನ್ಯಾಂ ಭೈರವಸ್ತಥಾ**
**ಏವಂ ಶಿವಾಲಯಃ ಪ್ರೋಕ್ತೋ ಮೂರ್ತಿಗೇಹಂ ಅಥೋಚ್ಯತೇ ॥೧೩೨॥**

ಪೂರ್ವ ದಿಕ್ಕಿನಲ್ಲಿ ನಂದಿ, ಆಗ್ನೇಯದಲ್ಲಿ ಷಣ್ಮುಖ, ಬಲಗಡೆ ಗಣಪತಿ, ನೈರುತ್ಯದಲ್ಲಿ ವೀರಭದ್ರ, ಪಶ್ಚಿಮದಲ್ಲಿ ವಿಷ್ಣು, ವಾಯುವ್ಯದಲ್ಲಿ ಹನುಮಂತ, ಉತ್ತರ ದಿಕ್ಕಿನಲ್ಲಿ ಪಾರ್ವತಿ, ಈಶಾನ್ಯದಲ್ಲಿ ಭೈರವ ವಿಗ್ರಹಗಳನ್ನು ಇರಿಸಬೇಕು.

ಇವು ಪರಿವಾರಾಲಯಗಳಲ್ಲಿ ಇಡಲು ನಿರ್ದೇಶಗೊಂಡ ವಿಗ್ರಹಗಳು. ಕರ್ನಾಟಕದ ದಾಕ್ಷಿಣಾತ್ಯ ಮತ್ತು ಔತ್ತರೇಯ ಸಂಪ್ರದಾಯದ ದೇವಾಲಯಗಳಲ್ಲಿ ಪರಿವಾರ ದೇವತೆಗಳ ಸ್ಥಾನಗಳಲ್ಲಿ ಒಂದೆರಡು ವ್ಯತ್ಯಾಸಗಳನ್ನು ಮಾತ್ರ ಕಾಣಬಹುದು. ದೇವಿಗಾಗಿ ಪ್ರತ್ಯೇಕ ದೇಗುಲ ರಚನೆ ಹೆಚ್ಚಾಗಿ ವಿಜಯನಗರದ ಅರಸರ ಕಾಲದಿಂದ ಕಾಣುತ್ತೇವೆ. ಹನುಮಂತನನ್ನು ಪರಿವಾರದೊಡನೆ ಸೇರಿಸಿದ್ದು ತದನಂತರ ಕಾಲದ್ದು. ಈ ಮೂರ್ತಿಗಳಿಗೆ ಪ್ರತ್ಯೇಕ ಗುಡಿಗಳು ಅಪುರೂಪವೇ. ತಿಳುವಳಿಕೆಗಾಗಿ ಈ ಗ್ರಂಥೋಕ್ತಿಗಳನ್ನು ಪರಾಮರ್ಶಿಸಬಹುದು.

**ಮೂರ್ತ್ಯರ್ಧ ವಿಸ್ತಾರಂ ಪೀಠಂ ಪೀಠಾರ್ಧಂ ನಾಲಮುಚ್ಯತೇ**
**ನಾಲಮಾನಂ ಮೂರ್ತಿಕೀಲಂ ನಾಲಾರ್ಧಂ ಕೀಲವಿಸ್ತರಃ ॥೧೩೩॥**
**ಪೀಠಸ್ಯತ್ರಿಗುಣಂಗರ್ಭಂ ಗರ್ಭಾರ್ಧಂ ಚ ತದನಂತರಂ**
**ದ್ವಾರದ್ವಯ ಸಮಾಯುಕ್ತಂ ತತ್‌ಸಮಂಜಲಾಲಯಂ ॥೧೩೪॥**
**ದ್ವಾರಮೇಕಂ ತು ತಸ್ಯೋಕ್ತಂ ಗೇಹಾರ್ಧಂ ವಾಹನಾಲಯಂ**
**ಏವಂ ತು ನಿರ್ಮಾಪ್ಯ ಭವನಂ ಯಥಾ ಶಾಸ್ತ್ರಂ ಚ ಶಿಲ್ಪಿನಾ ॥೧೩೫॥**

ಮೂರ್ತಿಯ ಅರ್ಧದಷ್ಟು ಪೀಠ ವಿಸ್ತಾರ, ಪೀಠದ ಅರ್ಧದಷ್ಟು (ಪಾಣಿಪೀಠದ) ನಾಳ ನಾಳದಷ್ಟೇ ಮೂರ್ತಿಯ ಕೀಲ (ಮೂರ್ತಿಯನ್ನು ಪೀಠದಲ್ಲಿ ನಿಲ್ಲಿಸಲು ಗುಬಟೆ); ನಾಳದ ಅರ್ಧದಷ್ಟು ವಿಸ್ತಾರ. ಪೀಠದ ಮೂರರಷ್ಟು ಗರ್ಭಗೃಹದ ವಿಸ್ತಾರ

ಗರ್ಭಾರ್ಧ = ಅಂತರಾಳ = ಅರ್ಧಮಂಟಪ. ಗರ್ಭಗೃಹದ ಅಳತೆಗೆ ಸಮನಾಗಿ ಎರಡು ದ್ವಾರಗಳಿರುವ ಜಲಾಶಯ = ಕಲ್ಯಾಣಿ ಗರ್ಭಾರ್ಧಕ್ಕೆ ಸಮನಾಗಿ ಒಂದೇ ದ್ವಾರವಿರುವ ವಾಹನಾಲಯ.

**ಸಂತೋಷ್ಯ ಶಿಲ್ಪಿನಂ ಗೇಹಂ ತಸ್ಯ ಹಸ್ತಾತ್ ಪ್ರಭೂತ್ತಮಃ**
**ಪ್ರಾರ್ಥ್ಯ ಸಂಗೃಹ್ಯ ವಿಧಿವತ್ ಶೋಧಯೇತ್ ತಂ ವಿಚಕ್ಷಣಃ ॥೧೩೬॥**
**ಶಿಲಾಭಿರ್ನಿಮಿತ್ತಂ ಗೇಹಂ ದೃಢಂ ಸೌಮ್ಯ ತ್ವಯಾಕೃತಂ**
**ದೇಹಿಮೇ ಶಿಲ್ಪಿ ರಾಜೇಂದ್ರ ಸ್ಥಾಪನಾರ್ಥಂ ಶಿವಸ್ಯಮೇ ॥೧೩೭॥**

ಶಿಲ್ಪಿಯನ್ನು ಸಂತೋಷಪಡಿಸಿ, ಅವನನ್ನು ಪ್ರಾರ್ಥಿಸಿ, ಅವನ ಹಸ್ತದಿಂದ ವಿಧಿವತ್ತಾಗಿ ಸ್ವೀಕರಿಸಬೇಕು. ನಂತರ ಶುದ್ಧಿ ಕಾರ್ಯಗಳನ್ನು ಕೈಗೊಳ್ಳಬೇಕು.

"ಎಲೈ ಶಿಲ್ಪಿ ರಾಜೇಂದ್ರನೇ ನಿನ್ನಿಂದ ದೃಢವಾದ ಹಾಗೂ ಸೌಮ್ಯವಾದ ಆಲಯವು ನಿರ್ಮಿತವಾಗಿದೆ. ಶಿವನನ್ನು ಪ್ರತಿಷ್ಠಿಸುವ ಸಲುವಾಗಿ ನನಗೆ ನೀಡು" ಎಂದು ಪ್ರಾರ್ಥಿಸಬೇಕು.

**ತ್ವಯಾ ಸಂಪಾದಿತಂ ಪುಣ್ಯಂ ದಶಾಂಶಂ ದೇಹಿಮೇ ವಿಭೋ**
**ತದ್‌ಗೃಹಿತ್ವಾ ಮುದಾ ಗೇಹಂ ಪ್ರದಾಸ್ಯಾಮಿ ನರೋತ್ತಮ ॥೧೩೮॥**
**ಶಂಭೋಃ ಸಂಸ್ಥಾಪಾತ್ ಪುಣ್ಯಂ ನ ದಾಸ್ಯಾಮಿ ಕದಾಚನ**
**ತ್ವಯಾ ಈಪ್ಸಿತಂ ಧನಂ ರತ್ನಂ ಗೃಹಾಣಾಲಯಕಾರಕ ॥೧೩೯॥**

ನಿನ್ನಿಂದ ಸಂಪಾದಿಸಲ್ಪಟ್ಟ ೧/೧೦ ಭಾಗದಷ್ಟು ಪುಣ್ಯವನ್ನು ನನಗೆ ಕೊಡು. ಅದನ್ನು ಪಡೆದುಕೊಂಡು ನರಶ್ರೇಷ್ಠನೇ ನಿನಗೆ ವಸತಿಗಾಗಿ ಗೃಹವನ್ನು ಕೊಡುತ್ತೇನೆ. ಶಂಭುವಿನ ಪ್ರತಿಷ್ಠಾಪನೆಯಿಂದ ಲಭ್ಯವಾಗುವ ಪುಣ್ಯದ ಪಾಲನ್ನು ಎಂದಿಗೂ ನೀಡುವುದಿಲ್ಲ. ನಿನ್ನ ಇಚ್ಛೆಯಂತೆ ಅಪೇಕ್ಷಿಸಿದ ಹಣ ರತ್ನಾದಿಗಳನ್ನು ನೀಡುತ್ತೇನೆ.

**ಮಯಾಕೃತಮಿದಂ ಗೇಹಂ ಧೃಢಂ ಸೌಮ್ಯ ಶಿಲಾಮಯಂ**
**ಗೃಹಾಣಾಹಂ ಪ್ರದಾಸ್ಯಾಮಿ ಪ್ರತಿಷ್ಠಾಯೈ ಶಿವಸ್ಯ ಚ ॥೧೪೦॥**
**ಇತ್ಯುಕ್ತ್ವಾಕಾರುಕೋ ಭಕ್ತ್ಯಾ ದದ್ಯಾತ್ ಗೇಹಂ ಪ್ರಹರ್ಷಿತಃ**

ಈ ಗೃಹವನ್ನು ಶಿಲಾಮಯವಾಗಿ, ದೃಢವಾಗಿ ರಚಿಸಿದ್ದೇನೆ. ಶಿವನ ಪ್ರತಿಷ್ಠಾಪನೆಗಾಗಿ ಇದನ್ನು ಕೊಡುತ್ತಿದ್ದೇನೆ. ಸ್ವೀಕರಿಸಿ ಎಂದು ಶಿಲ್ಪಿಯು ಸಂತೋಷಚಿತ್ತನಾಗಿ ಆಲಯವನ್ನು ನೀಡಬೇಕು.

**ಗೇಹಂ ಲಬ್ಧ್ವಾ ತತೋ ಲಿಂಗಂ ತತ್ರ ಸಂಸ್ಥಾಪಯೇತ್ ಶುಭಂ ॥೧೪೧॥**
**ಪ್ರಾಣಪ್ರತಿಷ್ಠಾಂ ಮಂತ್ರೇಣ ತತ್ರ ಕುರ್ವೀತ ಮಂತ್ರವಿತ್**

ಈ ರೀತಿ ಆಲಯವನ್ನು ಪಡೆದು ಶುಭ ಅವಸರದಲ್ಲಿ ಲಿಂಗವನ್ನು ಅಲ್ಲಿ ಪ್ರತಿಷ್ಠಿಸಬೇಕು. ವೈದಿಕರ ಮೂಲಕ ಮಂತ್ರಪೂರ್ವಕವಾಗಿ ಪ್ರಾಣ ಪ್ರತಿಷ್ಠಾಪನಾ ಕಾರ್ಯವನ್ನೂ ನಡೆಸಬೇಕು. ಶಿವತತ್ತ್ವ ರತ್ನಾಕರದಲ್ಲಿ ಈವರೆಗೆ ಗುರುತಿಸಿದ್ದು ದೇವಾಲಯಕ್ಕೆ ಸಂಬಂಧಿಸಿದ ನೇರ ಸಾಲುಗಳು. ಆರನೆಯ ಕಲ್ಲೋಲದಲ್ಲಿ ರಾಜಗೃಹ, ಶಾಲಾ, ಅಲಿಂದ ರಚನೆಗಳನ್ನು ಗುರುತಿಸಲಾಗಿದೆ.

ಚಾಲುಕ್ಯ, ಹೊಯ್ಸಳರ ಕಾಲದಲ್ಲಿ ಕಂಡ ದೇವಾಲಯಗಳು ಶಾಲಾ ಅಲಿಂದ ರಚನೆಗಳಿಂದ ರೂಪುಗೊಂಡಿದ್ದು ಈ ಸಂಪ್ರದಾಯವೇ ಕೆಳದಿ ಅರಸರ ಕಾಲದಲ್ಲಿ ಮುಂದುವರೆದಿದೆ. ಬಳಸಿದ ಕಲ್ಲು ಗಡುಸು, ಆ ಕಾಲದಲ್ಲಿ ಕುಸುರಿ ಕೆಲಸವನ್ನು

ಕಾಣಲಾಗದು. ದಾಕ್ಷಿಣಾತ್ಯ ಔತ್ತರೇಯ ಎರಡೂ ಸಂಪ್ರದಾಯವನ್ನು ಬಳಸಿದ್ದಿದೆ. ಶಾಲಾ, ಅಲಿಂದ ರಚನೆಯು ಚಾಲುಕ್ಯ ಹೊಯ್ಸಳರ ಕಾಲದ ದೇವಾಲಯಗಳ ಆರಂಭಿಕ ಹಂತವನ್ನು ಗುರುತಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಮೊದಲಿಗೆ ರಾಜಗೃಹಗಳು, ಇವನ್ನು ಅನುಕರಿಸುವ ಕಟ್ಟಡಗಳು ಬಹುಶಃ ಉಳಿದಿಲ್ಲ; ಆದರೆ ಶಾಲಾ ರಚನೆಯೇ ಮೂಲ. ಸಮರಾಂಗಣ ಸೂತ್ರಧಾರ ಗ್ರಂಥವನ್ನು ಅರ್ಥೈಸುವಲ್ಲಿ ಇಲ್ಲಿಯ ವಿವರಗಳು ನೆರವಾಗುತ್ತವೆ.

**ಆರನೆಯ ಕಲ್ಲೋಲ : ಮೊದಲನೆಯ ತರಂಗ**

**ಮಧ್ಯೇ ಸ್ತಂಭ ಶತಂ ತಸ್ಯ ಭದ್ರೇವಷ್ಟಾವಿಂಶತಿ* ಸ್ತಥಾ**
**ಚತುರ್ಭದ್ರೇಷು ಚ ಶತಂ ಸ್ತಂಭಾನಾಂದ್ವಾದಶಾಧಿಕಂ ॥೪೪॥**
**ಚತ್ವಾರಿ ಮಧ್ಯೇ ಹಿ ಸ್ತಂಭಾ ಯತ್ರ ತಸ್ಯಾ ಚ ಚತುಷ್ಕಕಂ**
**ಯಸ್ಯಾ ಬಹಿರಲಿಂದಃ ಸ್ಯಾತ್‌ಶಾಲಾಸ್ಯಾತ್ತದನಂತರಂ ॥೪೫॥**
**ಅಲಿಂದಂ ಚ ಪುನಃ ಶಾಲಾ ಕ್ರಮೇಣೈವ ಪ್ರವರ್ತತೇ**
**ಯಾವತ್ ಕರ್ತೃಮಭೀಷ್ಟಂ ಸ್ಯಾತ್‌ಗೃಹಂ ನರಪತೇಃ ಶುಭಂ ॥೪೬॥**

ಮಧ್ಯದಲ್ಲಿ ೧೦ ಫಿ ೧೦ = ಒಂದು ನೂರು ಸ್ತಂಭ ರಚನೆಯು ಭದ್ರ ಭಾಗದಲ್ಲಿ ಇಪ್ಪತ್ತೆಂಟು ಸ್ತಂಭಗಳು ನಾಲ್ಕು ದಿಕ್ಕುಗಳಲ್ಲಿಯೂ ಇರುವ ನಾಲ್ಕು ಭದ್ರಗಳಿಂದ ಒಂದು ನೂರಾ ಹನ್ನೆರಡು ಸ್ತಂಭಗಳು (ಮಧ್ಯದ ೧೦೦ ಸ್ತಂಭಗಳಲ್ಲಿ) ಮಧ್ಯೆ ನಾಲ್ಕು ಸ್ತಂಭಗಳ ಚತುಷ್ಕಿಕಾ, ಅದರ ಸುತ್ತ ಅಲಿಂದ ೧೨ ಕಂಭಗಳು, ನಂತರ ಶಾಲಾ (೨೦ ಕಂಭಗಳು) ಪುನಃ ಶಾಲಾ (೨೮ ಕಂಭಗಳು) ನಂತರ ಅಲಿಂದ (೩೬ ಕಂಭಗಳು) ಕರ್ತೃವಿನ ಅಭೀಷ್ಟದಂತೆ ಈ ನಿರ್ಮಾಣವು, ರಾಜರಿಗೆ ಶುಭದಾಯಕವು (ಕಂಭಗಳ ಸಂಖ್ಯೆ ೮ + ೧೨ + ೨೦ + ೨೮ + ೩೬ = ೧೦೦)

**ಟಿಪ್ಪಣಿ** : ಮಾನಸೋಲ್ಲಾಸ ಗ್ರಂಥದಲ್ಲಿ ಹೆಚ್ಚು ಸ್ಪಷ್ಟತೆ ಇದೆ. ಆರಂಭದ ಈ ಕೆಳಗಿನ ಸಾಲುಗಳು ಶಿವತತ್ತ್ವ ರತ್ನಾಕರ ಗ್ರಂಥದಲ್ಲಿಲ್ಲ.

**ನೃಪಗೇಹಾನಿ ವಕ್ಷಾಮಿ ಸ್ತಂಭಸಂಖ್ಯಾ ಪ್ರಮಾಣತಃ**
**ಚತುಷ್ಕಾಲಿಂದ ಶಾಲಾಭಿಶ್ಚ ಭದ್ರೈರ್ಮನೋಹರೈಃ ॥೩.೨೮॥**
**ಪೃಥ್ವೀಜಯಂ ಗೃಹಂ ಕಾರ್ಯಂ ದಶಭಾಗ ವಿಚಕ್ಷಣೈಃ**

ನೃಪರಿಗಾಗಿ ಗೃಹರಚನೆಯನ್ನು ಸ್ತಂಭಗಳ ಸಂಖ್ಯೆಯನ್ನು ಆಧರಿಸಿ ಹೇಳುತ್ತೇನೆ. ಈ ರಾಜಗೃಹವು ಚತುಷ್ಕ, ಅಲಿಂದ, ಶಾಲಾ ಭದ್ರಗಳನ್ನು ಮನೋಹರವಾಗಿ ಒಳಗೊಂಡಿದೆ. ಪೃಥ್ವೀಜಯ ಎಂಬ ರಾಜಗೃಹವು ಹತ್ತು ಭಾಗಗಳಿಂದ ಕೂಡಿದೆ.

**ಟಿಪ್ಪಣಿ** : ೧೦ ಫಿ ೧೦ ಕಂಭಗಳ ಆವರಣವು ೯ ಫಿ ೯ = ೮೧ ಅಂಕಣಗಳನ್ನು ಪಡೆಯುತ್ತದೆ. 'ದಶಭಾಗ' ಎಂದು ಹೇಳಿದ ಔಚಿತ್ಯವನ್ನು ತಿಳಿಯಬೇಕು. ೧೦ ಫಿ ೧೦ ಕಂಭಗಳ ರಚನೆಯಲ್ಲಿ ಎರಡು ಕಡೆ ಹೊರಭಿತ್ತಿಯು ಅರ್ಧದಷ್ಟು ಅಗಲ. ಎರಡು ಕಡೆ ಭಿತ್ತಿ ಸೇರಿ ಒಂದು ಭಾಗ. ೯ ಫಿ ೯ ಅಂಕಣಗಳು ಮತ್ತು ಭಿತ್ತಿ ಒಂದು ಭಾಗ

"ಭಾಗಾರ್ಧಂ ಶಸ್ಯತೇಭಿತ್ತಿಃ ಆದಿಕೋಣಃ ಸಮಾಶ್ರಿತಾ" ಸಮರಾಂಗಣ ಸೂತ್ರಧಾರದ ಉಲ್ಲೇಖ

*ಭದ್ರ ರಚನೆಯ ಸಂಬಂಧದಲ್ಲಿ ಶಿವತತ್ತ್ವ ರತ್ನಾಕರ ಗ್ರಂಥದಲ್ಲಿ ತಪ್ಪು ನುಸುಳಿದೆ.

"ಭದ್ರಾಖ್ಯೇ ವಿಂಶತಿಸ್ತಥಾ" ಎಂದಿದ್ದು ಮಾನಸೋಲ್ಲಾಸ ಗ್ರಂಥದ ಪ್ರಕಾರ" ಭದ್ರೇಷ್ವಾ ವಿಂಶತಿಸ್ತಥ ಎಂದು ಸರಿಪಡಿಸಲಾಗಿದೆ. ನಾಲ್ಕು ದಿಕ್ಕುಗಳಲ್ಲಿಯೂ ಭದ್ರ ಭಾಗದಲ್ಲಿ೨೮ ಸ್ತಂಭಗಳು  ನಾಲ್ಕು ಭದ್ರಗಳಿಂದ ೧೧೨ ಸ್ತಂಭಗಳು.

**ಚರ್ತುಭದ್ರೇ ಚ ಶತಸ್ತಂಭಾನಾಂ ದ್ವಾದಶಾಧಿಕಂ**

**ನವಕೋಣಾ ವಿದಿಕ್ ದೇಶೇಸ್ಯುಃ ಷ್ಯುಃ ಷಟ್‌ತ್ರಿಂಶತ್ ಚತುರ್ಷ್ವಪಿ ॥೩೦॥**

ಭದ್ರ ರಚನೆಯಿಂದಾಗಿ ವಿದಿಕ್ಕುಗಳಲ್ಲಿ ೯ ಮೂಲೆಗಳು ನಾಲ್ಕು ದಿಕ್ಕುಗಳಿಂದ ೩೬ ಮೂಲೆಗಳು, ಇದನ್ನು ತಳರಚನೆಯ ನಕಾಶೆಯಿಂದ ಗುರುತಿಸಲು ಸಾಧ್ಯ. ಸಮರಾಂಗಣ ಸೂತ್ರಧಾರ ಗ್ರಂಥದಲ್ಲಿ ಚತುಷ್ಕ ಅಲಿಂದ, ಶಾಲಾ, ಅಲಿಂದ, ಎಂದು ಈ ರೀತಿ ಹೆಸರಿಸದೆ ಚತುಷ್ಕ, ಅಲಿಂದ, ಎರಡನೆಯ ಅಲಿಂದ, ಮೂರನೆ ಅಲಿಂದ, ನಾಲ್ಕನೆ ಅಲಿಂದ ಎಂದು ಗುರುತಿಸಿ ಸ್ತಂಭ ಸಂಖ್ಯೆಯನ್ನು ४,೧೨,೨೦,೨೮, ೩೬ ಎಂದು ಪಟ್ಟಿ ಮಾಡಿ ಪೃಥ್ವೀಜಯವೆಂಬ ಪ್ರಬೇಧವನ್ನು ವಿವರಿಸಿದ್ದಾನೆ.

**ಯತ್‌ಚತುಷ್ಕಗತಂ ಕ್ಷೇತ್ರಂ ಪಂಚದಾ ತದ್ ವಿಭಜ್ಯತೇ**

**ತದ್‌ಭಾಗ ಪ್ರಮಿತಂ ಕಾರ್ಯಂ ತ್ರಿಭಿರ್ಭಾಗೈರಲಿಂದಕಂ ॥೪೭॥**

**ಸಾರ್ಧತ್ರಿಭಾಗಿಕಾ ಶಾಲಾ ಕರ್ತವ್ಯಾ ಸುವಿಚಕ್ಷಣೈಃ**

**ಇತಿ ಸಮಸ್ತಾನಾಂ ಸ್ಥಿತಿಃ ಗೃಹಾಣಾಂ ಪ್ರತಿಪಾದಿತಾ ॥೪೮॥**

**ನಾಮ್ನಾ ತಮುಕ್ತಕೋಣಂ ಯತ್ತತ್‌ಕಾರ್ಯಾ ರವಿಭಾಗತಃ**

**ಚತುಷ್ಕದ ಕ್ಷೇತ್ರದ ೩/೫ರಷ್ಟು ಆಲಿಂದ, ೨ ೧/೨/೫/೫ ರಷ್ಟು**

**ಶಾಲಾ ಎಂದು ಎಲ್ಲಾ ರೀತಿಯ ಗೃಹ ರಚನೆಗಳಿಗೆ ಗುರುತಿಸಲಾಗಿದೆ.**

**ಮುಕ್ತ ಕೋಣವೆಂಬ ಪ್ರಬೇಧವನ್ನು ನಂತರ ಹೇಳಲಾಗಿದೆ.**

**ಮಧ್ಯಸ್ತಂಭಾಶತಂಸಾರ್ಧಂ ಷಡ್ಭಿರ್ನ್ಯೂನಾ ನಿರೂಪಿತಾ ॥೪೯॥**

**ಚತ್ವಾರಿಂಶತ್ ತಥಾಸ್ತಂಭಾ ಭದ್ರೇಭದ್ರೇ ನಿರೂಪಿತಾ**

**ಶತಂ ಷಷ್ಠಾಧಿಕಂ ತೇಸ್ಯುಃ ಚತುರ್ಭದ್ರೇಷುಂ ಸಂಖ್ಯಯಾ ॥೫೦॥**

**ಏಕಾದಶ ತಥಾಕೋಣಾ ವಿದಿಶಂ ವಿದಿಶಂ ಪ್ರತಿ**

**ಚತುರ್ದಶ ತಥಾ ತ್ರಿಂಶತ್ ಚತುಸೃಷ್ವಪಿ ಸಂಖ್ಯಯಾ ॥೫೧॥**

ಮಧ್ಯದಲ್ಲಿ ೧೨ ಫ ೧೨ ಕಂಭಗಳಿದ್ದು ಒಟ್ಟು ೧೪೪ ಭದ್ರ ಭಾಗದಲ್ಲಿ ೪೦-ರಂತೆ ನಾಲ್ಕು ಕಡೆಗಳಿಂದ ೧೬೦ ಸ್ತಂಭಗಳು. ವಿದಿಕ್ಕುಗಳಲ್ಲಿ ೧೧ ಮೂಲೆಗಳು. ನಾಲ್ಕು ವಿದಿಕ್ಕುಗಳು ४४ ಮೂಲೆಗಳು. ಇದು ಪೃಥ್ವೀಜಯವೆಂಬ ಪ್ರಬೇಧ ಲಕ್ಷಣಗಳು.

**ಕಥ್ಯತೇ ಸರ್ವತೋಭದ್ರ ಮನುಭಾಗೈರ್ವಿಭಾಗಿತಂ**

**ಮಧ್ಯೇ ಸ್ತಂಭೋ ಭವೇತ್ತಸ್ಯ ಷಣ್ಣವತ್ಯಧಿಕಂ ಶತಂ ॥೫೨॥**

**ಚತ್ವಾರಿಂಶತ್ ತಥಾಚೈವ ಭದ್ರೇ ಸ್ತಂಭಾ ನಿರೂಪಿತಾಃ**
**ಏವಂ ಚತುರ್ಭದ್ರೇಷು ಶತಂಷಷ್ಠಿಸ್ತಥಾಧಿಕಂ ॥೫೩॥**
**ಕೋಣೇಸ್ತಸ್ಯ ವಿಧಾತವ್ಯಾ ತ್ರಯೋದಶಮಿತಾಬುಧೈಃ**
**ಸಮಸ್ತ ಗುಣಿತಾ ಕೋಣಾ ದ್ವಿಪಂಚಾಶತ್ ಭವಂತಿ ತೇ ॥೫೪॥**

ಸರ್ವತೋಭದ್ರ ಎಂಬ ಪ್ರಬೇಧದಲ್ಲಿ ೧೪ ಭಾಗಗಳು. ಮಧ್ಯದಲ್ಲಿ ೧೪ ಥಿ ೧೪ ೧೯೬ ಸ್ತಂಭಗಳು. ಭದ್ರ ಭಾಗದಲ್ಲಿ ೪೦ ಸ್ತಂಭಗಳು. ನಾಲ್ಕು ಭದ್ರಭಾಗಗಳಿಂದ ೧೬೦ ಸ್ತಂಭಗಳು. ವಿದಿಕ್ಕುಗಳಲ್ಲಿ ೧೩ ಮೂಲೆಗಳು.

ನಾಲ್ಕರ ಗುಣಿತದಲ್ಲಿ ೫೨ ಮೂಲೆಗಳು.

**ಶ್ರೀವತ್ಸಮಷ್ಟಭಾಗಂ ಸ್ಯಾತ್ ಚತುಷಷ್ಠಿಸ್ತು ಮಧ್ಯಗಾಃ**
**ತಸ್ಯ ಸ್ತಂಭಾ ಪ್ರಯೋಕ್ತವ್ಯಾ ಭದ್ರೆಷ್ಟಾದಶಸಂಖ್ಯಯಾ ॥೫೫॥**
**ಚತುರ್ಷ್ವಪಿಚ ಭದ್ರೇಷು ದ್ವಿಸಪ್ತತಿರುದಾಹೃತಾಃ**
**ಸಪ್ತಕೋಣಾಃ ಸಮಂತಾಶ್ಚ ದ್ವಿಗುಣಾಂಶ್ಚ ಮನುಸಂಖ್ಯಯಾ ॥೫೬॥**
**ಏವಮಾದೀನ್ಯನಂತಾನಿ ಗೃಹಾಣಿ ಧರಣೀಭುಜಾಂ**
**ಕ್ರಿಯಂತ್ಯಪಿ ಮಯೋಕ್ತಾನಿ ಪ್ರಧಾನಾನಿ ಯಥಾಕ್ರಮಂ ॥೫೭॥**

ಶ್ರೀವತ್ಸ ಪ್ರಭೇಧದಲ್ಲಿ ಮಧ್ಯೆ ( ೮ ಷ ೮) ೬೪ ಸ್ತಂಭಗಳು, ಭದ್ರಭಾಗದಲ್ಲಿ ೧೮ ಸ್ತಂಭಗಳು. ನಾಲ್ಕು ಕಡೆ ಭದ್ರಗಳಿಂದ ೭೨ ಸ್ತಂಭಗಳು. ವಿದಿಕ್ಕಿನಲ್ಲಿ ೭ ಮೂಲೆಗಳು ನಾಲ್ಕು ವಿದಿಕ್ಕುಗಳಿಂದ ೨೮ ಮೂಲೆಗಳು. ಈ ರೀತಿ ಹಲವಾರು ಗೃಹಗಳನ್ನು ರಾಜರಿಗಾಗಿ ನಿರ್ಮಿಸಬಹುದು. ಇಲ್ಲಿ ಪ್ರಧಾನವೆನಿಸಿದ ೨೮ ಪ್ರಬೇಧಗಳನ್ನು ಮಾತ್ರ ಗುರುತಿಸಲಾಗಿದೆ.

**ರಾಜಗೃಹ ರಚನೆಗಳ ತಃಖ್ತೆ : ಶಿವತತ್ತ್ವ ರತ್ನಾಕರ / ಮಾನಸೋಲ್ಲಾಸ**

| ಪ್ರಭೇದಗಳು | ಭಾಗಗಳು | ಮಧ್ಯ ಸ್ತಂಭಗಳು | ಭದ್ರ ಸ್ತಂಭಗಳು | ಕೋನಗಳು |
|---|---|---|---|---|
| ೧. ಪೃಥ್ವೀಜಯ | ೧/೨+೧/೨ | ೧೦ಥ೧೦=೧೦೦ | ೨೮ಥ೪=೧೧೨ | ೯ಥ೪=೩೬ |
| ೨. ಮುಕ್ತಕೋಣ | ೧/೨+೧೧+೧/೨ | ೧೨ಥ೧೨=೧೪೪ | ೪೦ಥ೪=೧೬೦ | ೧೧ಥ೪=೪೪ |
| ೩. ಸರ್ವತೋಭದ್ರ | ೧/೨+೧೩+೧/೨ | ೧೪ಥ೧೪=೧೯೬ | ೪೦ಥ೪=೧೬೦ | ೧೩ಥ೪=೫೨ |
| ೪. ಶ್ರೀವತ್ಸ | ೧/೨+೭+೧/೨ | ೮ಥ೮=೬೪ | ೧೮ಥ೪=೭೨ | ೭ಥ೪=೨೮ |

ಸಮರಾಂಗಣ ಸೂತ್ರಾಧಾರ ಗ್ರಂಥದಲ್ಲಿ ಶತ್ರುಮರ್ದನ ಎಂಬ ಪ್ರಭೇದ ಸೇರ್ಪಡೆಯಾಗಿದೆ. ಈ ಗ್ರಂಥಗಳಲ್ಲಿರುವ ವಿವರಣೆ ಕೊಂಚ ವಿಭಿನ್ನವಾದುದು. ಪೀಠ, ಜಂಘ, ತಲರಚನೆ, ವೇದಿ, ಘಂಟಾ, ಕಲಶಗಳ ವಿವರಗಳಿವೆ. ವಿದಿಕ್ಕುಗಳ ಮೂಲೆಗಳ ಉಲ್ಲೇಖವಿಲ್ಲ. ದೊರೆತ ಮಾಹಿತಿಯನ್ನು ತಃಖ್ತೆಯಲ್ಲಿ ಕೆಳಕಂಡಂತೆ ನೀಡಲಾಗಿದೆ.

| ಪ್ರಬೇಧಗಳು | ಮಧ್ಯ ಸ್ತಂಭಗಳು | ಭದ್ರ ಸ್ತಂಭಗಳು | ಒಟ್ಟು |
|---|---|---|---|
| ೧. ಪೃಥ್ವೀಜಯ | ೧೦ಥ೧೦=೧೦೦ | ೨೮ಥ೪=೧೧೨ | ೨೧೨ |
| ೨. ಮುಕ್ತಕೋಣ | ೧೨ಥ೧೨=೧೪೪ | ೫೪ಥ೪=೨೧೬ | ೩೬೦ |

| | | | |
|---|---|---|---|
| ೩. ಶ್ರೀವತ್ಸ | ೧೨ಥ೧೨=೧೪೪ | ೩೦ಥ೪=೧೨೦ | ೨೬೪ |
| ೪. ಸರ್ವತೋಭದ್ರ | ೧೪ಥ೧೪=೧೯೬ | ೪೦ಥ೪=೧೬೦ | ೩೫೬ |
| ೫. ಶತ್ರುಮರ್ದನ | ೧೦ಥ೧೦=೧೦೦ | ೪೪ಥ೪=೧೭೬ | ೨೭೬ |

**ಚತುಶ್ಶಾಲಾದಿ ರಚನೆಗಳು**

ಆಂಧ್ರ ಪ್ರದೇಶದ ಅಲಂಪುರ ತಾಲೂಕು ಪೊದೂರಿನ ಶಾಸನದಲ್ಲಿ ಶಾಲಾ ಉಲ್ಲೇಖವನ್ನು ಕಾಣಬಹುದು.

"ಲೀಲೆಯಿನೆಸೆವೇಕಶಾಲ ದ್ವಿಶಾಲತ್ರಿಶಾಲ ಚತುಶ್ಶಾಲ ಪಂಚಶಾಲಂ
ಮೇಲೆನಿಸಿತ್ತಲ್ಲಿ ಮೇಲೆ ಪಲ್ಲವನ ಜಿನಾಲಯಂ ಸರ್ವ್ವತೋಭದ್ರದಿಂದಂ"

ಇದೊಂದು ಶಾಲಾ ರಚನೆಯನ್ನು ಬಣ್ಣಿಸುವ ಅಪುರೂಪದ ಷಟ್ಪದಿ ಎಂದು ವಿದ್ವಾಂಸರು ಬಣ್ಣಿಸಿದ್ದಾರೆ. ಇದು ಸಮರಾಂಗಣ ಸೂತ್ರಧಾರ ಗ್ರಂಥದ ಸಮಕಾಲೀನ ಉಲ್ಲೇಖವೇ ಆಗಿದೆ.

ಗೃಹಮೇಕಂತು ಯಚ್ಛನ್ನಂ ಸರ್ವಂ ಶಾಲೇತಿ ಸಾ ಸ್ಮೃತಾ- ಇದು ಗ್ರಾಂಥಿಕ ಸರಳ ವಿವರಣೆ.

ಬಹುಶಾಲಾರಚನೆಯು ಈ ನಾಡಿನಲ್ಲಿ ಬಳಕೆಯಲ್ಲಿತ್ತು. ಚತುಶ್ಶಾಲಾದಿ ವಿವರಣೆಗಳನ್ನು ಸಮರಾಂಗಣ ಸೂತ್ರಧಾರ ಗ್ರಂಥದಲ್ಲಿ ಕಾಣಬಹುದು.

**ಛನ್ನೈಶ್ಚ ತುರ್ಭಿಪಾರ್ಶ್ವೈಯತ್ ತತ್ ಚತುಶ್ಶಾಲಮುಚ್ಯತೇ**
**ತ್ರಿಭಿಃ ತ್ರಿಶಾಲಂ ತತ್ ಪ್ರಹುರ್ದ್ವಾಭ್ಯಾಂ ತತ್ ಸ್ಯಾ ದ್ವಿಶಾಲಕಂ**
**ಏಕಶಾಲಕ ಮೇಕೇನ ಛನ್ನೇನ ಗೃಹಮುಚ್ಯತೇ (೧೮.೧೮/೯೧)**

ಛಾವಣಿಯಿಂದ ಹೊದಿಸಿದ್ದು ಶಾಲಾ ಗೃಹ ಪ್ರಧಾನ ಗೃಹಕ್ಕೆ ಹೊಂದಿಕೊಂಡಂತೆ ನಾಲ್ಕು ಕಡೆ ಹೊದಿಕೆ ವಿಸ್ತರಿಸಿದ್ದರೆ ಚತುಶ್ಶಾಲ, ಮೂರು ಕಡೆ ಚಾಚಿದ್ದರೆ ತ್ರಿಶಾಲ, ಅದರಂತೆ ದ್ವಿಶಾಲ, ಏಕಶಾಲಾ ರಚನೆಗಳು. "ಶಾಲಾ" ಪ್ರಧಾನಗೃಹವೂ ಹೌದು; ಪೂರಕಭಾಗವೂ ಹೌದು. ವಿಜಯನಗರದ ಕಾಲದ ಶಾಸನವೊಂದು 'ಮಠ, ಮಗ್ಗುಲು ಭಾವಿ' ಎಂದು ಉಲ್ಲೇಖಿಸಿದೆ. 'ಮಗ್ಗುಲು' ಶಾಲಾ ಪದವನ್ನು ಕುರಿತದ್ದು. ಶಿವತತ್ತರತ್ನಾಕರದಲ್ಲಿ ಶಾಲಾ ರಚನೆಗಳ ಸುದೀರ್ಘ ವಿವರಗಳಿವೆ.

**ಚತುಶ್ಶಾಲಂ ದ್ವಿಶಾಲಂಚ ತ್ರಿಶಾಲಂ ಚೈಕಶಾಲಕಂ**
**ವಕ್ಷ್ಯಾ ಮಿ ಭವನಂ ರಾಜ್ಞಾನಾಮಲಕ್ಷಣ ಸಂಯುತಂ ॥೫೮॥**
**ಅಲಿಂದಗೈಃ ಚತುರ್ದ್ವಾರ್ರೈ ಚತುಶ್ಶಾಲ ಮುದಾಹೃತಂ**
**ಸರ್ವತೋಭದ್ರ ನಾಮೇದಂ ನೃಪಾಣಾಂ ಶಸ್ಯತೇ ಗೃಹಂ**
**॥೫೯॥**

ಚತುಶ್ಶಾಲ, ದ್ವಿಶಾಲ, ತ್ರಿಶಾಲ ಮತ್ತು ಏಕಶಾಲಾ ರಚನೆಗಳನ್ನು ಅವುಗಳ ಲಕ್ಷಣ ಸಹಿತ ರಾಜರ ಭವನಗಳಿಗಾಗಿ ಹೇಳುತ್ತೇನೆ. ನೃಪರಿಗಾಗಿ ರಚಿಸಬಹುದಾದ ಅಲಿಂದ ಹಾಗೂ ನಾಲ್ಕು ದ್ವಾರಗಳಿರುವ ಚತುಶ್ಶಾಲಕ್ಕೆ ಸರ್ವತೋಭದ್ರ ಎಂದು ಹೆಸರು.

**ನಂದ್ಯಾ ವರ್ತಂ ತಥಾಖ್ಯಾತಂ ಪಶ್ಚಿಮ ದ್ವಾರವರ್ಜಿತಂ**

**ವರ್ಧಮಾನಂ ತಥಾಖ್ಯಾತಂ ದಕ್ಷಿಣದ್ವಾರ ವರ್ಜಿತಂ ॥೬೦॥**

**ಸ್ವಸ್ತಿಕಂ ಭವೇತ್ ನಾಮ್ನಾ ಪೂರ್ವ ದ್ವಾರವರ್ಜಿತಂ**

**ಉತ್ತರದ್ವಾರವಿಹೀನಂ ಚೇತ್ ರುಚಕಂ ಭವೇತ್ ಗೃಹಂ ॥೬೧॥**

**ಪಶ್ಚಿಮದಲ್ಲಿ ದ್ವಾರವಿಲ್ಲದ್ದು ನಂದ್ಯಾವರ್ತ. ದಕ್ಷಿಣದಲ್ಲಿ ದ್ವಾರವಿಲ್ಲದ್ದು ವರ್ಧಮಾನ, ಪೂರ್ವದಲ್ಲಿ ದ್ವಾರವಿಲ್ಲದ್ದು ಸ್ವಸ್ತಿಕ, ಉತ್ತರದಲ್ಲಿ ದ್ವಾರವಿಲ್ಲದ್ದು ರುಚಕವೆಂಬ ಗೃಹ.**

**ಸರ್ವತೋಭದ್ರ ನಾಮೇದಂ ಚತುಶ್ಶಾಲಮುದಾಹೃತಂ**

**ಶುಭಪ್ರದಂ ನರೇಂದ್ರಾಣಾಂ ವಿಜಯಾರೋಗ್ಯ ವರ್ಧನಂ ॥೬೨॥**

**ನಂದ್ಯಾವರ್ತಂ ವರ್ಧಮಾನಂ ಸ್ವಸ್ತಿಕಂ ರುಚಕಂ ತಥಾ**

**ಚತ್ವಾರಿಸ್ಯುಃ ತ್ರಿಶಾಲಾನಿ ಗೇಹಾನಿ ಧರಣೀಭುಜಾಂ ॥೬೩॥**

ಸರ್ವತೋಭದ್ರ ಹೆಸರುಳ್ಳದ್ದು ಚತುಶ್ಶಾಲಕ್ಕೆ ಉದಾಹರಣೆಯಾಗಿದೆ. ಇದು ರಾಜಮಹಾರಾಜರುಗಳಿಗೆ ಶುಭಪ್ರದವಾದುದು, ವಿಜಯ ಆರೋಗ್ಯವನ್ನು ಹೆಚ್ಚಿಸುವಂಥದ್ದು. ನಂದ್ಯಾವರ್ತ, ವರ್ಧಮಾನ, ಸ್ವಸ್ತಿಕ ರುಚಕ, ಇವು ತ್ರಿಶಾಲ ರಚನೆಗಳು. ಇವನ್ನು ರಾಜರಿಗಾಗಿ ರಚಿಸಬಹುದು.

**ಟಿಪ್ಪಣಿ** : ನಂದ್ಯಾವರ್ತ, ವರ್ಧಮಾನ ಸ್ವಸ್ತಿಕ ರುಚಕಗಳಿಗೆ ಕೇವಲ ದ್ವಾರವಿಲ್ಲದ್ದು ಎಂದಿದೆಯೇ ಹೊರತು ಶಾಲಾ ರಚನೆಯ ಬಗ್ಗೆ ಹೇಳಿಲ್ಲ. ನಾಲ್ಕು ಕಡೆ ಶಾಲಾ ಇದ್ದು ದ್ವಾರವಿಲ್ಲದ್ದನ್ನು ಹೇಳಿದೆ; ಇವು ಚತುಶ್ಶಾಲ ಪ್ರಬೇಧಗಳಾಗಿವೆ.

ಬೃಹತ್ ಸಂಹಿತೆ ನಾಲ್ಕು ಕಡೆ ಶಾಲಾ ರಚನೆ ಇಲ್ಲದಿರುವುದನ್ನು ಗುರುತಿಸಿದ್ದು ಉತ್ತರ, ಪೂರ್ವ, ದಕ್ಷಿಣ, ಪಶ್ಚಿಮ ದಿಕ್ಕಿನಲ್ಲಿ ಶಾಲಾರಹಿತವಾದದ್ದನ್ನು ಕ್ರಮವಾಗಿ ಹಿರಣ್ಯನಾಭ, ಸುಕ್ಷೇತ್ರ, ಚುಲ್ಲೀ, ಪಕ್ಷಘ್ನ ಎಂಬ ಹೆಸರುಳ್ಳ ತ್ರಿಶಾಲಾ ರಚನೆಗಳೆನ್ನಲಾಗಿದೆ.

**ನೈರುತೇ ಮುಖ್ಯಗೇಹಂಸ್ಯಾತ್ ಶಾಲೆ ಚ ಉತ್ತರ ಪೂರ್ವಗೇ**

**ಪೂರ್ವಾಯಾಂ ಚೋತ್ತರದ್ವಾರಮುತ್ತರಾಯಾಂ ಚ ಪೂರ್ವತಃ ॥೬೪॥**

**ಕರ್ತವ್ಯೇ ಗರ್ಭಗೇಹಸ್ಯ ದ್ವಾರೇ ದ್ವೇತು ವಿಚಕ್ಷಣೈಃ**

**ಏಕಂ ಸ್ಯಾತ್ ಪೂರ್ವತೋ ದ್ವಾರಮನ್ಯದುತ್ತರತಃ ಸ್ಥಿತಂ ॥೬೫॥**

**ಅಂಕಣಂ ದಕ್ಷಿಣಶಾಲಾ ಹಸ್ತಿನೀ ಪರಿಕೀರ್ತಿತಾ**

**ಅಂಕಣಾತ್ ಪಶ್ಚಿಮ ಶಾಲಾ ಮಹಿಷೀತಿ ನಿಗದ್ಯತೇ ॥೬೬॥**

ನೈರುತ್ಯದಲ್ಲಿ ಮುಖ್ಯ ಗೃಹವಿದ್ದು ಉತ್ತರ ಹಾಗೂ ಪೂರ್ವ ದಿಕ್ಕುಗಳಲ್ಲಿ ಶಾಲಾ ರಚನೆ ಇರಬೇಕು. ಪೂರ್ವದಿಂದ ಉತ್ತರಕ್ಕೆ, ಉತ್ತರದಿಂದ ಪೂರ್ವಕ್ಕೆ ಪ್ರವೇಶಿಸುವಂತೆ ಗರ್ಭಗೃಹಕ್ಕೆ ಎರಡು ದ್ವಾರಗಳಿರಬೇಕು. ಇವೆರಡೂ ಪೂರ್ವ ಮತ್ತು ಉತ್ತರದಲ್ಲಿರಬೇಕು. (ಗರ್ಭಗೃಹ ಎಂದರೆ ಮಧ್ಯದ ಚತುಷ್ಕವೇ; ಅದನ್ನೇ ಮುಖ್ಯಗೇಹ ಎನ್ನಲಾಗಿದೆ)

ದಕ್ಷಿಣದಲ್ಲಿರುವ ಶಾಲಾಂಕಣಕ್ಕೆ ಹಸ್ತಿನೀ ಎಂದೂ ಪಶ್ಚಿಮ ಶಾಲಾ ರಚನೆಗೆ ಮಹಿಷೀ ಎಂದು ಹೆಸರು. ಈ ದ್ವಿಶಾಲರಚನೆಗೆ ಸಿದ್ಧಾರ್ಥ ಎಂದು ಹೆಸರು. ಇದು ಅಪೇಕ್ಷಿಸಿದ ಧನವನ್ನು ನೀಡುವಂಥದ್ದು.ರಾಜರಿಗೆ ಧನವೃಧ್ಧಿಯಾಗುವುದು.

**ವಾಯುವ್ಯೇ ಗರ್ಭಗೇಹಂ ಸ್ಯಾತ್ ಶಾಲೇ ದಕ್ಷಿಣ ಪೂರ್ವಗೇ**
**ದ್ವಾರೇ ಶಾಲಾಮುಖೇಕಾರ್ಯೇ ಶಾಲಾದ್ವಾರೇ ತನ್ಮುಖೇ ॥೬೮॥**
**ಮಹಿಷೀತ್ವಂಕಣಾತ್ ಪಶ್ಚಾತ್ ಉತ್ತರಾ ಗೌಃ ಪ್ರಕೀರ್ತಿತಾ**
**ದ್ವಿಶಾಲಂ ಭಯದಂ ಚೇತದ್ ಯಮಪುರ್ಯಶ್ಚ ನಿಂದಿತಂ ॥೬೯॥**

ವಾಯುವ್ಯದಲ್ಲಿ ಗರ್ಭಗೃಹ ಅಥವಾ ಪ್ರಧಾನ ಗೃಹವಿದ್ದು ದಕ್ಷಿಣ ಹಾಗೂ ಪೂರ್ವ ದಿಕ್ಕಿನಲ್ಲಿ ಶಾಲಾ ರಚನೆಯು; ಶಾಲಾ ಮುಖದೆಡೆಗೆ ದ್ವಾರಗಳು, ಪಶ್ಚಿಮದಲ್ಲಿ ಮಹಿಷೀ ಎಂಬ ಶಾಲಾಂಕಣವು, ಉತ್ತರದಲ್ಲಿ ಗೌಃ ಎಂಬ ಶಾಲಾಂಕಣವು, ಈ ದ್ವಿಶಾಲರಚನೆಗೆ ಯಮಪುರಿ ಎಂದು ಹೆಸರು, ಇದು ಭಯಾನಕವೂ ನಿಂದಾರ್ಹವೆನಿಸಿದೆ.

**ಈಶಾನೇ ಪ್ರಥಮಂ ವೇಶ್ಮ ಶಾಲಾ ದಕ್ಷಿಣ ಪಶ್ಚಿಮೇ**
***ಅಂಕಣಾತ್ ಪೂರ್ವತಃಛ್ಛಾಗೀ ಗಾಭೀಚೋತ್ತರತಃಸ್ಥಿತಾಃ ॥೭೦॥**
**ದಡಾಖ್ಯಂ ನಾಮತಃ ಪ್ರೋಕ್ತಂ ನೃಣಾನಾಂ ಉದ್ವೇಗಕಾರಕಂ**
**ನೃಪಾಣಾಂ ನೈವಕರ್ತವ್ಯಂ ನಿವಾಸಾರ್ಥಂ ಕಥಂಚನ ॥೭೧॥**

ಈಶಾನ್ಯದಲ್ಲಿ ಪ್ರಥಮ ಗೃಹ ಅರ್ಥಾತ್ ಗರ್ಭಗೃಹ, ದಕ್ಷಿಣ ಹಾಗೂ ಪಶ್ಚಿಮ ದಿಕ್ಕಿನಲ್ಲಿ ಶಾಲಾ ರಚನೆಯು. ಪೂರ್ವದ ಅಂಕಣವು ಛಾಗೀ ಉತ್ತರದ ಅಂಕಣವು ಗೌಃ (ಗರ್ಭಗೃಹದ ದ್ವಾರಗಳು ದಕ್ಷಿಣ, ಪಶ್ಚಿಮ ಮುಖವಾಗಿರಬೇಕು) ಈ ದ್ವಿಶಾಲ ರಚನೆಗೆ ದಂಡ ಎಂದು ಹೆಸರು. ಇದು ಅರಸರಿಗೆ ಉದ್ವೇಗವನ್ನುಂಟು ಮಾಡುವಂಥದ್ದು. ರಾಜರಿಗೆ ವಸತಿಗಾಗಿ ಇದನ್ನು ರಚಿಸಬಾರದು.

**ಟಿಪ್ಪಣಿ** : ೨೦ನೇ ಶ್ಲೋಕದ ಸಾಲು ಶಿವತತ್ತ್ವರತ್ನಾಕರ ಗ್ರಂಥದಲ್ಲಿ ತಪ್ಪಾಗಿದ್ದು ಮಾನಸೋಲ್ಲಾಸ ಗ್ರಂಥದ ಪಾಠವನ್ನು ಒದಗಿಸಲಾಗಿದೆ.

ನಾಲ್ಕು ದಿಕ್ಕಿನ ಶಾಲಾ ರಚನೆಯ ಹೆಸರುಗಳೂ ತಪ್ಪಾಗಿವೆ. ಅಪರಾಜಿತ ಪೃಚ್ಛಾ ಗ್ರಂಥದಲ್ಲಿರುವ ಹೆಸರುಗಳನ್ನು ಬಳಸುವುದು ಸೂಕ್ತ. ಅದು ಖಚಿತವಾದದ್ದು. ಅವು ಕೆಳಕಂಡಂತಿದೆ.

**ಹಸ್ತಿನೀ ಮಹಿಷೀ ಚೈವ ಗಾವೀಚ ಛಾಗಲೀ ತಥಾ**
**ಪದಾನಾಂತು ದಿಶಾ ಭೇದೈಃ ಪ್ರಾಚ್ಯಾದಿಷು ಪ್ರದಕ್ಷಿಣಂ**
**ಹಸ್ತನೀಚೈಂದ್ರಸ್ಥಾನೇ ಮಹಿಷೀ ಚ ಯಮಸ್ಥಲೇ**
**ಗಾವೀಚ ವರುಣ ಸ್ಥಾನೇ ಸೌಮ್ಯ ಸ್ಥಾನೇ ತು ಛಾಗಲೀ**

ಹಸ್ತಿನೀ, ಮಹಿಷೀ, ಗಾವೀ, ಛಾಗಲೀ ಅವು ದಿಕ್ಕುಗಳನ್ನು ಅನುಸರಿಸಿ ಪೂರ್ವದಿಂದ ಪ್ರದಕ್ಷಿಣಾಕಾರವಾಗಿ ಹೆಸರುಗಳು. ಹಸ್ತಿನಿ – ಪೂರ್ವ ದಿಕ್ಕಿನಲ್ಲಿದೆ, ಮಹಿಷಿ – ದಕ್ಷಿಣದಿಕ್ಕಿನಲ್ಲಿದೆ. ಗಾವೀ / ಗೌಃ – ಪಶ್ಚಿಮ ದಿಕ್ಕಿನಲ್ಲಿದೆ. ಛಾಗಲೀ – ಉತ್ತರ ದಿಕ್ಕಿನ ಶಾಲಾ ರಚನೆಯು.

**ಆಗ್ನೇಯಾಂ ಮುಖ್ಯ ವೇಶ್ಮ ಸ್ಯಾತ್ ಶಾಲೇ ಚೋತ್ತರ ಪಶ್ಚಿಮೇ**
**ಅಂಕಣಾ ಪೂರ್ವಗಾಛ್ಛಾಗೀ ದಕ್ಷಿಣಾ ಹಸ್ತಿನೀ ಮತಾ ॥೫೭॥**
**ವಾತಾಖ್ಯಂ ನಾಮ ತತೋಕ್ತಂ ನೃಣಾನಾಮುದ್ವೇಗಕಾರಕಂ**

**ನೃಪಾಣಾಂನೈವಕರ್ತವ್ಯಂ ನಿವಾಸಾರ್ಥಂ ಕಥಂಚನ ॥೫೮॥**

ಆಗ್ನೇಯ ದಿಕ್ಕಿನ ದ್ವಿಶಾಲಾ ರಚನೆಯ ಸಾಲುಗಳು ಶಿವತತ್ತ್ವ ರತ್ನಾಕರ ಗ್ರಂಥದಲ್ಲಿಲ್ಲ. ಮಾನಸೋಲ್ಲಾಸ ಗ್ರಂಥದ (ಶ್ಲೋ: ೫೭,೫೮) ಪಾಠವನ್ನು ಸ್ವೀಕರಿಸಲಾಗಿದೆ. ಇದರಲ್ಲಿ ಮೊದಲ ಶ್ಲೋಕ ಸರಿಯಿದ್ದು, ಎರಡನೆಯ ಶ್ಲೋಕ ಪುನರಾವರ್ತನೆಯೇ. ದ್ವಿಶಾಲಾ ಸ್ವರೂಪ ತಿಳಿಯಲು ಬಾದಕವಿಲ್ಲ. ಆಗ್ನೇಯ ದಿಕ್ಕಿನಲ್ಲಿ ಮುಖ್ಯ ಗೃಹವಿದ್ದು, ಉತ್ತರ ಹಾಗೂ ಪಶ್ಚಿಮದಲ್ಲಿ ಶಾಲಾ ರಚನೆಗಳು (ಗರ್ಭಗೃಹದ ಎರಡು ದ್ವಾರಗಳು ಉತ್ತರ ಮತ್ತು ಪಶ್ಚಿಮದಲ್ಲಿದ್ದು ಶಾಲಾಬಿಮುಖವಾಗಿರಬೇಕು) ವಾತ ಎಂಬ ಹೆಸರಿನ ಈ ದ್ವಿಶಾಲಾ ರಚನೆಯು ಉದ್ವೇಗವನ್ನುಂಟು ಮಾಡುವಂಥದ್ದು. ನೃಪರಿಗಾಗಿ ರಚಿಸಕೂಡದು.

**ದ್ವಿಶಾಲಮೇಕಂ ಸಿದ್ಧಾರ್ಥಂ ಪ್ರಶಸ್ತಂ ಪೃಥಿವೀಭುಜಾಂ**
**ಕ್ರೀಡಾರ್ಥಂ ಸನ್ನಿವೇಶಾರ್ಥಂ ಭೋಗಾರ್ಥಂ ಚ ಪ್ರಶಸ್ಯತೇ ॥೬೨॥**

ದ್ವಿಶಾಲಗಳಲ್ಲಿ ಸಿದ್ದಾರ್ಥವು, ನೃಪರಿಗೆ ಪ್ರಶಸ್ತವಾದದ್ದು, ಇದನ್ನು ಕ್ರೀಡೆಗಾಗಿ, ನಿವಾಸಕ್ಕಾಗಿ, ಭೋಗಕ್ಕಾಗಿ ನಿರ್ಮಿಸಿದಲ್ಲಿ ಪ್ರಶಸ್ತವು.

ದ್ವಿಶಾಲಾ ರಚನೆಯಲ್ಲಿ ಆರು ಸಂಭಾವ್ಯತೆಗಳು. ಸಿದ್ದಾರ್ಥ, ಯಮಸೂರ್ಯ, ದಂಡ, ವಾತ, ಚುಲ್ಲೀ (ಗೃಹಚುಲ್ಲಿ) ಕಾಜ ಎಂದು ಹೆಸರುಗಳು. ಈ ರಚನೆಗಳನ್ನು ಬೃಹತ್ ಸಂಹಿತೆ ಸರಳವಾಗಿ ವಿವರಿಸಿದೆ.

**ಸಿದ್ಧಾರ್ಥಮಪರಯಾಮ್ಯೇ ಯಮಸೂರ್ಯಂ ಪಶ್ಚಿಮೋತ್ತರೇ**
**ದಂಡಾಖ್ಯಂ, ಉದಕಪೂರ್ವೇ ವಾತಾಖ್ಯಂ ಪ್ರಾಗ್ಯುತಾ ಯಾಮ್ಯಾ**
**ಪೂರ್ವಾಪರೇತು ಶಾಲೇ ಗೃಹಚುಲ್ಲೀ ದಕ್ಷಿಣೋತ್ತರೇ ಕಾಚಂ ॥೫೩, ೩೮, ೩೯॥**

೧.ಸಿದ್ಧಾರ್ಥ, ಪಶ್ಚಿಮ, ದಕ್ಷಿಣದಲ್ಲಿ ಶಾಲಾ, ೨. ಯಮಸೂರ್ಯ, ಪಶ್ಚಿಮ ಉತ್ತರದಲ್ಲಿ ಶಾಲಾ, ೩ ದಂಡ, ಪೂರ್ವ – ಉತ್ತರದಲ್ಲಿ ಶಾಲಾ, ೪ ವಾತ, ಪೂರ್ವ ದಕ್ಷಿಣದಲ್ಲಿ ಶಾಲಾ, ೫. ಗೃಹಚುಲ್ಲಿ, ಪೂರ್ವ–ಪಶ್ಚಿಮದಲ್ಲಿ ಶಾಲಾ ೬. ಕಾಚ, ಉತ್ತರ–ದಕ್ಷಿಣದಲ್ಲಿ ಶಾಲಾ

ಗ್ರಂಥದಿಂದ ಗ್ರಂಥಕ್ಕೆ ದ್ವಿಶಾಲಾಗಳ ಹೆಸರು ಬದಲಾದರೂ ಸ್ವರೂಪ ತಿಳಿಯಲು ಬಾಧಕವಿಲ್ಲ.

ದ್ವಿಶಾಲಾ ರಚನೆಯನಂತರ ಅಲಿಂದವನ್ನು ಕುರಿತ ವಿವರಗಳು ಶಿವತತ್ತ್ವ ರತ್ನಾಕರ ಗ್ರಂಥದಲ್ಲಿದೆ. ನಂತರ ಏಕಶಾಲಾ ರಚನೆಯಿದೆ. ಇಲ್ಲಿ ಕ್ರಮವಾಗಿ ದ್ವಿಶಾಲಾ ನಂತರ ಏಕಶಾಲಾ ಕ್ರಮವನ್ನು ಅನುಸರಿಸಿ ನಂತರ ಆಲಿಂದ ರಚನೆಯನ್ನು ಪ್ರಸ್ತಾಪಿಸಲಾಗಿದೆ.

**ಅನ್ಯತ್‌ಚತುಷ್‌ಪ್ರಕಾರಂ ತದೇಕಶಾಲಂ ಗೃಹಂ ಭವೇತ್ ॥೮೨॥**

**ಪ್ರಧಾನ ಗೇಹ ಸ್ತಂಭಶ್ಚ ಶಾಲಾ ಸ್ತಂಭೈಃ ಸಮೋಭವೇತ್**
**ತಸ್ಯ ಲಕ್ಷಂ ಪ್ರವಕ್ಷ್ಯಾಮಿ ಶುಭಾಶುಭ ಫಲೋದಯಂ ॥೮೩॥**

ಏಕಶಾಲಾ ಗೃಹಗಳು ನಾಲ್ಕು ಪ್ರಕಾರದ್ದೆನಿಸಿದೆ. ಪ್ರಧಾನ ಗೃಹದ ಸ್ತಂಭಗಳಂತೆ

ಶಾಲಾ ಸ್ತಂಭಗಳೂ ಸಮವಾಗಿರಬೇಕು. ಅವುಗಳ ಲಕ್ಷಣಗಳನ್ನು ಶುಭ-ಅಶುಭ ಫಲಗಳನ್ನೂ ಹೇಳುತ್ತೇವೆ.

**ಉತ್ತರಾಶಸ್ಯತೇ ಶಾಲಾ ಶಾಲಾ ಪೂರ್ವಾ ಪ್ರಶಸ್ಯತೇ**
**ದಕ್ಷಿಣಾಪಶ್ಚಿಮಾಶಾಲಾ ದ್ವೇಶಾಲೇ ಪರಿನಿಂದಿತೇ ॥೮೪॥**
**ನೃಪಾನಾಂಸುಖವಾಪಾರ್ಥಂ ಏಕರ್ತವ್ಯೇಕದಾಚನ**
**ತಿಷ್ಠನ್ ಗೃಹೇಷು ಶಸ್ತೇಷು ಶ್ರಿಯಮಾಪ್ನೋತಿ ಪುಷ್ಕಲಂ ॥೮೫॥**

ಉತ್ತರ ಮತ್ತು ಪೂರ್ವ ದಿಕ್ಕಿನ ಶಾಲಾ ರಚನೆಯು ಪ್ರಶಸ್ತವಾದುದು. ದಕ್ಷಿಣ ಹಾಗೂ ಪಶ್ಚಿಮ ದಿಕ್ಕಿನ ರಚನೆಗಳು ನಿಂದಾರ್ಹವಾದುದು. ನೃಪರ ವಾಸಕ್ಕಾಗಿ ರಚಿಸಕೂಡದು. ಪ್ರಶಸ್ತವಾದ ಗೃಹಗಳಲ್ಲಿ ವಾಸಿಸಿದಲ್ಲಿ ಸಂಪತ್ತು ವೃದ್ಧಿ ಎರಡನ್ನೂ ಕಾಣಬಹುದು.

**ಆರೋಗ್ಯಂ ವಿಜಯಂ ಕೀರ್ತಿಸಂತೋಷಂ ಪರಮಾಪ್ನುಯಾತ್**
**ಈದೃಗ್ ಲಕ್ಷಣ ಸಂಯುಕ್ತಾನ್ ವಿವಿಧಾನ್ ಬಹುಭೂಮಿಕಾನ್ ॥೮೬॥**
**ಕಾರಯಿತ್ವಾ ಮಹೀಪಾಲಃ ಪ್ರಾಪ್ಯ ಚಂದ್ರ ಬಲಂ ಮಹತ್**
**ವಿಧಾಯ ವಾಸ್ತು ಪೂಜಾದಿ ತರ್ಪಯಿತ್ವಾ ದ್ವಿಜಾನಪಿ ॥೮೭॥**

ಸಹವಂಗಲ ವಾದ್ಯೇನ ಪ್ರವಿಶೇತ್ ತತ್ರ ಹರ್ಷಿತಃ (ಇದರಿಂದ) ಆರೋಗ್ಯ, ವಿಜಯ, ಕೀರ್ತಿ, ಸಂತೋಷಾದಿಗಳು ಲಭಿಸುತ್ತವೆ. ಈ ಲಕ್ಷಣಗಳುಳ್ಳ ವಿವಿಧ ಭೂಮಿ ರಚನೆಯೊಂದಿಗೆ ನಿರ್ಮಾಣಗಳನ್ನು ಕೈಗೊಂಡಲ್ಲಿ ಚಂದ್ರಬಲದೊಂದಿಗೆ, ಸುಖ ಶಾಂತಿಗಳು ಲಭಿಸುತ್ತವೆ. ವಾಸ್ತುಪೂಜಾದಿಗಳನ್ನು ನೆರವೇರಿಸಿ, ಬ್ರಾಹ್ಮಣರಿಗೆ ಅರ್ಘ್ಯಾದಿಗಳನ್ನು ನೀಡಿ ಮಂಗಳ ವಾದ್ಯಗಳ ಸಮೇತ ಹರ್ಷಚಿತ್ತರಾಗಿ ಗೃಹಗಳನ್ನು ಪ್ರವೇಶಿಸಬೇಕು.

**ಅಲಿಂದ ರಚನೆ : ೧೬ ಪ್ರಬೇಧಗಳು**

**ದ್ರುವಂ ಹೀನಮಾಲಿಂದೇನ ಪೂರ್ವಾಲಿಂದಂ ತು ಧ(ಧಾ)ನ್ಯಕಂ**
**ಜಯಂ ಸ್ಯಾದ್ದಕ್ಷಿಣಾಲಿಂದಂ ಪಶ್ಚಿಮಾಲಿಂದಕಂ ವ(ಖ)ರಂ ॥೭೩॥**
**ದುರ್ಮುಖಂ ಚೋತ್ತರಾಲಿಂದಮೇಕಾಲಿಂದಂ ಚತುರ್ಗೃಹಂ**
**ಧ್ಯಾನ್ಯಂಜಯಂ ಚ ಶುಭದಂ ನಿಂದಿತೇ ವ(ಖ)ರ ದುರ್ಮುಖೇ ॥೭೪॥**

ಚತುಷ್ಕವು ವಾಸ್ತುವಿನ ಮೂಲ ರಚನೆಯು. ಅದು ಮಧ್ಯದಲ್ಲಿದ್ದು ನಾಲ್ಕು ಕಂಭಗಳನ್ನೊಳಗೊಂಡಿದೆ. ಅದರ ಸುತ್ತ ಮೊದಲ ಹಂತದಲ್ಲಿ ಅಲಿಂದ ರಚನೆ ಇದರ ಪ್ರಬೇಧಗಳನ್ನು ವಿವರಿಸಲಾಗಿದೆ.

ಕೇವಲ ಚತುಷ್ಕವಿದ್ದು ಅಲಿಂದವಿಲ್ಲದ್ದು ಧ್ರುವ[೧] ಎಂದು ಹೆಸರಿಸಲಾಗಿದೆ. ಚತುಷ್ಕದೊಂದಿಗೆ ಪೂರ್ವ ದಿಕ್ಕಿನಲ್ಲಿ ಅಲಿಂದವಿದ್ದರೆ ಧ(ಧಾ)ನ್ಯಕ.[೨] ದಕ್ಷಿಣ ದಿಕ್ಕಿನಲ್ಲಿ ಅಲಿಂದವಿದ್ದರೆ ಜಯ.[೩] ಪಶ್ಚಿಮ ದಿಕ್ಕಿನಲ್ಲಿ ಅಲಿಂದವಿದ್ದರೆ ವ(ಖ)ರ.[೪] ಉತ್ತರ ದಿಕ್ಕಿನಲ್ಲಿ ಅಲಿಂದವಿದ್ದರೆ ದುರ್ಮುಖ.[೫] ಏಕಾಲಿಂದ ರಚನೆಗಳು ನಾಲ್ಕು; ದ(ಧಾ)ನ್ಯ ಮತ್ತು ಜಯ ಪ್ರಬೇಧಗಳು ಶುಭಪ್ರದವಾದವು. ವ(ಖ)ರ ಮತ್ತು ದುರ್ಮುಖ

ಪ್ರಬೇಧಗಳು ನಿಂದಾರ್ಹವೆನಿಸಿವೆ.

**ಪೂರ್ವ ದಕ್ಷಿಣತ್ತೋಲಿಂದಂ ನಂದ ಮಿತ್ಯಭಿಧೀಯತೇ**
**ಯಾಮ್ಯಾ ಪಶ್ಚಿಮತೋಲಿಂದಂ ಮನೋಹರಮುದಾಹೃತಂ ॥೭೫॥**
**ಪೂರ್ವೋತ್ತರತ್ತೋಲಿಂದಂ ಗೃಹಂಕ್ರೂರಂ ನಿಗಧ್ಯತೇ**
**ಪಶ್ಚಿಮೋತ್ತರತ್ತೋಲಿಂದಂ ಕ್ಷಯಮಿತ್ಯಭಿಧೀಯತೇ ॥೭೬॥**

ಪೂರ್ವ ಮತ್ತು ದಕ್ಷಿಣದಿಕ್ಕಿನಲ್ಲಿ ಅಲಿಂದವು ನಂದ[೬] ಎಂದು ಹೆಸರು. ದಕ್ಷಿಣ ಮತ್ತು ಪಶ್ಚಿಮ ದಿಕ್ಕಿನಲ್ಲಿ ಅಲಿಂದವಿದ್ದದ್ದು ಮನೋರಮ[೭] ಎನ್ನಲಾಗಿದೆ. ಪೂರ್ವ ಮತ್ತು ಉತ್ತರದಿಕ್ಕಿನಲ್ಲಿ ಅಲಿಂದ ವಿರುವುದು ಕ್ರೂರ[೮] ಎಂದು ಹೆಸರು. ಪಶ್ಚಿಮ ಮತ್ತು ಉತ್ತರದಿಕ್ಕಿನಲ್ಲಿ ಲಿಂದವುಕ್ಷಯ[೯] ಎನ್ನಲಾಗಿದೆ.

**ಪೂರ್ವ ಪಶ್ಚಿಮತೋಲಿಂದಂ ಕಾಂತಂ ನಾಮನಿಗದ್ಯತೇ**
**ದಕ್ಷಿಣೋತ್ತರತ್ಯೋಲಿಂದಂ ಸುಪಕ್ಷಂ ಪರಿಚಕ್ಷತೇ ॥೭೭॥**

ಪೂರ್ವ ಪಶ್ಚಿಮ ದಿಕ್ಕಿನಲ್ಲಿ ಅಲಿಂದವುಳ್ಳದ್ದು ಕಾಂತ[೧೦] ಎಂಬ ಪ್ರಬೇಧವು. ದಕ್ಷಿಣ ಉತ್ತರದಿಕ್ಕುಗಳಲ್ಲಿ ಅಲಿಂದವಿದ್ದರೆ ಸುಪಕ್ಷ[೧೧] ಎಂಬ ಹೆಸರಿದೆ.(ಈ ರೀತಿದ್ವಯಾಲಿಂದ ರಚನೆಯಲ್ಲಿ ಆರು (ಪ್ರಬೇಧಗಳು)

**ಉತ್ತರಾಲಿಂದ ಹೀನಂಯತ್ ಸುಮುಖಂ ತತ್ ಪ್ರಕೀರ್ತಿತಂ**
**ಪಶ್ಚಿಮಾಲಿಂದತೋ ಹೀನಂ ಯದಕ್ರಾಂತಂ ಧನದಂ ಗೃಹಮುಚ್ಯತೇ ॥೭೮॥**
**ದಕ್ಷಿಣಾಲಿಂದ ಹೀನಂ ಯದಕ್ರಾಂತಂ ತದುದಾಹೃತಂ**
**ಪೂರ್ವಾಲಿಂದ ಹೀನಂ ಯದ್ ವಿಪುಲಂ ಪರಿಕೀರ್ತಿತಂ ॥೭೯॥**
**ಸರ್ವತ್ತೋಲಿಂದ ಯುಕ್ತಂ ವಿಜಯಂ ಪರಿಕೀರ್ತಿತಂ**
**(ಈಗ ಮೂರು ದಿಕ್ಕಿನಲ್ಲಿ ಅಲಿಂದವುಳ್ಳದ್ದನ್ನು ಪರಿಚಯಿಸಲಾಗಿದೆ)**

ಉತ್ತರದಿಕ್ಕಿನಲ್ಲಿ ಅಲಿಂದವಿಲ್ಲದ್ದು (ಉಳಿದ ಮೂರು ದಿಕ್ಕುಗಳಲ್ಲಿ ಅಲಿಂದವಿರುವುದು) ಸುಮುಖ[೧೨] ಎಂದು ಹೆಸರು. ಪಶ್ಚಿಮ ದಿಕ್ಕಿನಲ್ಲಿ ಅಲಿಂದವಿಲ್ಲದ್ದು ಧನದ[೧೩] ಎಂದು ಹೆಸರು. ದಕ್ಷಿಣಾ ದಿಕ್ಕಿನಲ್ಲಿ ಅಲಿಂದವಿಲ್ಲದ್ದು ಅಕ್ರಾಂತ[೧೪] ಎಂದು ಹೆಸರು. ಪೂರ್ವ ದಿಕ್ಕಿನಲ್ಲಿ ಅಲಿಂದವಿಲ್ಲದ್ದು ವಿಪುಲ[೧೫] ಎಂದು ಹೆಸರಿಸಲಾಗಿದೆ. ಎಲ್ಲಾ ಕಡೆಯೂ (ನಾಲ್ಕು ದಿಕ್ಕಿನಲ್ಲಿ) ಅಲಿಂದವಿರುವುದು ವಿಜಯ ಎಂದು ಹೆಸರು.

**ಏವಂ ಷೋಡಶಗೇಹಾನಿ ಕಥಿತಾನಿ ಪರಿಸ್ಫುಟಂ**
**ಯಥಾನಾಮಫಲಂ ತೇಷು ವಿಜ್ಞೇಯಂ ತನ್ನಿವಾಸಿನಂ ॥೮೦॥**
**ರಾಜ್ಞಾತ್ತಸ್ಮಾತ್ ಪ್ರಕರ್ತವ್ಯಂ ನೃಪಾಣಾಂ ಗೇಹಮುತ್ತಮಂ**
**ಹೀನಸ್ತಂಭಮಲಿಂದಂ ಸ್ಯಾತ್ ಶಾಲಾ ಸ್ತಂಭೈ ಸಮಾವೃತಾ ॥೮೧॥**
**ನೃಪಾಣಾಂ ಗೃಹಕರ್ತೃಣಾಂ ಕ್ರಮ ಏವ ನಿರೂಪಿತಃ**

ಈ ರೀತಿ ಹದಿನಾರು ರೀತಿಯ ಗೃಹಗಳನ್ನು, ಅಲಿಂದ ರಚನೆಯನ್ನು ಸ್ಫುಟವಾಗಿ ಹೇಳಲಾಗಿದೆ. ಆಯಾ ಹೆಸರುಗಳಿಗೆ ತಕ್ಕಂತೆ ಗೃಹವಾಸಿಗಳಿಗೆ ಫಲವು. ಆದ್ದರಿಂದ ರಾಜರು ಉತ್ತಮವಾದ ಗೃಹಗಳನ್ನು ನಿರ್ಮಿಸಬೇಕು. ಸ್ತಂಭರಹಿತವಾದದ್ದು ಅಲಿಂದ,

ಸ್ತಂಭಸಹಿತವಾದದ್ದು ಶಾಲಾ, ರಾಜರುಗಳಿಗೆ, ಗೃಹಕರ್ತೃಗಳಿಗೆ ಕ್ರಮವಾಗಿ ನಿರೂಪಿಸಲ್ಪಟ್ಟಿವೆ.

**ಟಿಪ್ಪಣಿ :** ಅಪರಾಜಿತ ಪೃಚ್ಛಾ, ಸಮರಾಂಗಣ ಸೂತ್ರಧಾರ ಗ್ರಂಥಗಳಲ್ಲಿಯೂ ಈ ೧೬ ಪ್ರಬೇಧಗಳನ್ನು ಹೆಸರಿಸಿದ್ದು, ಶುಭಾಶುಭ ಫಲದೊಂದಿಗೆ ವಿಸ್ತರಿಸಿ ಹೇಳಲಾಗಿದೆ.

**ವಿದ್ಯಾಲಿಂದಾನ್ ಸರ್ವೇಷು ಲಘುಸ್ಥಾನೇಷು ಪಂಡಿತಃ**
**ಸವ್ಯಾವರ್ತಂ ಗೃಹಮುಖಾದೇತಾಂಶ್ಚ ವಿನಿಯೋಜಯೇತ್ ॥**
**ವಿಷಮಾಲಿಂದ ಸಂಯೋಗಾದ್ ಭವನಾನಾಂ ಪೃಥಕ್ ಪೃಥಕ್**
**ನಾಮಾನಿ ಗೃಹದೋಷಾಶ್ಚ ವಕ್ಷ್ಯಂತೇನುಕ್ರಮದತಃ ॥**
**ಧ್ರುವಂ ಧನ್ಯಂ ಜಯಂ ನಂದಂ ಖರಂ ಕಾಂತಂ ಸುಮನೋರಮಂ**
**ಸುಮುಖಂ ದುರ್ಮುಖಂ ಕ್ರೂರಂ ಸುಪಕ್ಷಂ ಧನದಂ ಕ್ಷಯಂ ॥**
**ಆಕ್ರಂದಂ ವಿಪುಲಂ ಚೈವ ವಿಜಯಂ ಗೃಹಮುತ್ತಮಂ**
**(ಸಮರಾಂಗಣ ಸೂತ್ರಧಾರ ಅ. ೨೭ ಶ್ಲೋಕ ೪–೭)**

ಈ ಗ್ರಂಥದಲ್ಲಿ ಹೆಚ್ಚಿನ ವಿವರಗಳಿವೆ. ಈ ವಿವರಗಳೂ, ಬಳಸಿದ ಹೆಚ್ಚಿನ ಪರಿಭಾಷಿಕ ಪದಗಳೂ ಅರ್ಥವಾಗದು. ಶಿವತತ್ತ್ವರತ್ನಾಕರ ಮತ್ತು ಮಾನಸೋಲ್ಲಾಸ ಗ್ರಂಥಗಳೇ ಮೂಲಸ್ವರೂಪವನ್ನು ತಿಳಿಯುವಲ್ಲಿ ಸಹಾಯಕವಾಗಿವೆ.

ದೇವಾಲಯ ಮೂಲದ ಉದಾಹರಣೆಗಾಗಿ ಐಹೊಳೆಯ ರಚನೆಗಳನ್ನೇ ಆಶ್ರಯಿಸಬೇಕು. ಈ ದೇವಾಲಯಗಳನ್ನು ಗುರುತಿಸುವಾಗ ಶಿವತತ್ತ್ವರತ್ನಾಕರದ ವಾಸ್ತು ವಿವರಗಳು ಸ್ಮೃತಿಪಟಲದಲ್ಲಿರಬೇಕು.

ಮೊದಲಿಗೆ ಲಾಡ್‌ಖಾನ್ ದೇವಾಲಯ, ಇದು ಸಾರ್ವಜನಿಕರ ಉಪಯೋಗಕ್ಕಾಗಿ ರಚಿಸಿದ ಸಭಾ ಗೃಹ ಮಧ್ಯೆಚತುಷ್ಕ, ಸುತ್ತ ಎರಡು ಹಂತದ ಅಲಿಂದ, ಮುಂಭಾಗದಲ್ಲಿ ಮುಖಮಂಟಪ, ಮೇಲಕ್ಕೆ ಏರಲು ಸೋಪಾನಗಳು. ದೇವಾಲಯುವಾಗಿ ಪರಿವರ್ತಿಸುವಾಗ ಮಧ್ಯದ ಚತುಷ್ಕವನ್ನೇ ಗರ್ಭಗೃಹವಾಗಿ ಮಾಡಬಹುದಿತ್ತು. ಆರಂಭದಲ್ಲಿ ಮಧ್ಯೆ ಗರ್ಭಗೃಹವಿತ್ತು ಎನ್ನುವುದಕ್ಕೆ ಕ್ರಿ.ಶ. ಮೂರನೇ ಶತಮಾನದ ತಲಕಾಡಿನ ಉತ್ಖನನದಲ್ಲಿ ದೊರೆತ ಕಟ್ಟಡ ಪುರಾವೆಯಾಗುತ್ತದೆ. ಗೌಡರ ಗುಡಿಯಲ್ಲಿ ಗರ್ಭಗೃಹವು ಮಧ್ಯದಲ್ಲಿದೆ. ಸುತ್ತ ಅಲಿಂದ ರಚನೆ. ಆಯತಾಕಾರ ರಚನೆಯಲ್ಲಿ ಗರ್ಭಗೃಹ ಒಂದು ಹೆಜ್ಜೆ ಹಿಂದಿದೆ. ಗರ್ಭಗೃಹಕ್ಕೆ ಭಿತ್ತಿ ಇದೆ. ಸುತ್ತ ತೆರೆದ ಅಲಿಂದ, ಮುಖಮಂಟಪವಿಲ್ಲ.

ಚಿಕ್ಕ ಗುಡಿಯಲ್ಲಿ ಹೆಚ್ಚು ವ್ಯತ್ಯಾಸವಿಲ್ಲ. ತೆರೆದ ಅಲಿಂದಕ್ಕೆ ಬದಲಾಗಿ ಭಿತ್ತಿ, ಜಾಲಂದ್ರ ಜೋಡಣೆ, ಜಾಲಂದ್ರದಿಂದ ಗಾಳಿ ಬೆಳಕಿಗೆ ಅವಕಾಶ. ಮುಂಭಾಗದಲ್ಲಿ ಮುಖಮಂಟಪವಿದೆ.

ಮಲ್ಲಿಕಾರ್ಜುನ, ಹುಚ್ಚಪ್ಪಯ್ಯ ಗುಡಿಗಳಲ್ಲಿ ಗರ್ಭಗೃಹವು ಪೂರ್ತಿ ಹಿಂಸರಿದು ಪ್ರತ್ಯೇಕಗೊಂಡಿದೆ. ಗರ್ಭಗೃಹದ ಮುಂಭಾಗದಲ್ಲಿ ಮಧ್ಯೆ ಚತುಷ್ಕವಿದೆ. ಶಾಸ್ತ್ರ ಗ್ರಂಥಗಳು ಇದನ್ನು ಹೇಳಿಲ್ಲ. ಈ ಚತುಷ್ಕವೇ ಮುಂದಿನ ದೇವಾಲಯಗಳಲ್ಲಿ ನವರಂಗವಾಗಿ

ಪರಿವರ್ತನೆಗೊಂಡಿದೆ. ಪ್ರವೇಶಕ್ಕೆ ಮುಖಮಂಟಪ, ಕೆಲವೆಡೆ ಕ್ಷಾಸನ ಜೋಡಣೆ.

ಗರ್ಭಗೃಹಡಿಂದಕ್ಕಿದ್ದು ಮುಂದೆ ನವರಂಗ ಜೋಡಿಸಿದ್ದು ಮೂಲತಃ ಏಕಶಾಲಾರಚನೆ; ಆದರೆ ವಿದ್ವಾಂಸರು ಇದನ್ನು ಏಕಕೂಟ ಎಂದಿದ್ದಾರೆ. ಶಾಸನಗಳಲ್ಲಿ ತ್ರಿಕೂಟ ಎಂಬ ಪದಬಳಕೆಯಲ್ಲಿದೆ. ಮೂರು ದಿಕ್ಕಿನಲ್ಲಿ ಮೂರು ಗರ್ಭಗೃಹಗಳಿರುವುದು ತ್ರಿಶಾಲಾ ರಚನೆಯೇ. ಆದರೆ ತ್ರಿಕೂಟ ದೇವಾಲಯ ಎನ್ನುವುದು ಬಳಕೆಯಲ್ಲಿದೆ. ಈ ಪದಕ್ಕೆ ಶಾಸ್ತ್ರದ ಬೆಂಬಲವಿಲ್ಲ. ರೂಢಿಗತವಾದದ್ದು. ಮೂರು ಕಡೆ ಗರ್ಭಗೃಹವಿದ್ದು ಮುಂಭಾಗದಲ್ಲಿ ಮುಖಮಂಟಪವಿದ್ದರೆ ಅದು ಚತುಶ್ಶಾಲ ರಚನೆಯ ಸ್ವರೂಪ.

ಚತುಶ್ಶಾಲ ರಚನೆಗೆ ಉಣಕಲ್ಲಿನ ಚತುರ್ಮುಖ ದೇವಾಲಯ ಸ್ಪಷ್ಟ ಉದಾಹರಣೆ. ಮಧ್ಯೆ ಗರ್ಭಗೃಹ, ಸುತ್ತ ಅಲಿಂದ (ಪ್ರದಕ್ಷಿಣಾಪಥ) ನಾಲ್ಕು ಕಡೆ ಶಾಲಾ ರಚನೆ (ಮುಖಮಂಟಪಗಳು) ಗೇರುಸೊಪ್ಪೆಯ ಬಸದಿ, ಕಾರ್ಕಳದ ಬಸದಿಗಳು ಚತುಶ್ಶಾಲಾದಿಂದ ವಿಸ್ತರಿಸಿದ ರಚನೆ. ಹೆಡತಲೆಯ ಲಕ್ಷ್ಮೀಕಾಂತ ಸ್ವಾಮಿ ದೇವಾಲಯದ ಮುಂಭಾಗದ ವಿಸ್ತಾರವಾದ ಪ್ರತ್ಯೇಕ ರಚನೆ ಚತುಶ್ಶಾಲಾ ರಚನೆಯೇ.

ದ್ವಿಶಾಲಾ ಅಥವಾ ದ್ವಿಕೂಟರಚನೆಗೆ ಬೇಲೂರಿನ ಕಪ್ಪೆ ಚೆನ್ನಿಗರಾಯನ ದೇಗುಲವನ್ನು ಗುರುತಿಸಬಹುದು.

ಏಕಶಾಲಾ ರಚನೆಗೆ ಬೆಳವಾಡಿಯ ವೀರನಾರಾಯಣ ದೇವಾಲಯದ ಮುಂಭಾಗದಲ್ಲಿರುವ ಪ್ರತ್ಯೇಕ ಪ್ರವೇಶ ದ್ವಾರವನ್ನು ಗುರುತಿಸಬಹುದು. ಮೂಲಕ್ಕೆ ಅಪವಾದವಿಲ್ಲದಂತೆ ಹಲವು ರಚನೆಗಳಿವೆ. ಶಾಸ್ತ್ರರೀತ್ಯಾ ಗುರುತಿಸಲು ಸಾಧ್ಯ. ಪ್ರಾಕಾರಕ್ಕೆ ಹೊಂದಿಕೊಂಡಂತೆ ಪ್ರವೇಶದ್ವಾರವಾಗಿ ಏಕಶಾಲಾ ರಚನೆಗಳಿವೆ. ಕೇವಲ ಗರ್ಭಗೃಹ, ಮುಖಮಂಟಪವೂ ಇದ್ದಲ್ಲಿ ಅದು ಏಕಾಲಿಂದ ರಚನೆ. ಕೆಳದಿ ಅರಸರ ಕಾಲದಲ್ಲಿ ಕೆಲವು ದೇವಾಲಯಗಳು ಏಕಾಲಿಂದ ರಚನೆಗಳು. ಏಕಕೂಟ, ದ್ವಿಕೂಟ, ತ್ರಿಕೂಟ, ಚತುಷ್ಕೂಟ ಮೊದಲಾದ ಪದಗಳು ಚಾಲ್ತಿಗೆ ಬಂದು ಶಾಸ್ತ್ರದ ಸೂಕ್ಷ್ಮ ವಿವೇಚನೆ ಮರೆಯಾಗಿದೆ. ಶಾಸ್ತ್ರರೀತ್ಯಾ ಗುರುತಿಸುವುದು ಅಗತ್ಯ. ಈ ಲೇಖನ, ಶಾಸ್ತ್ರ ಗ್ರಂಥಗಳ ಅಧ್ಯಯನಕ್ಕೆ ಪೂರಕ ಎಂದು ಭಾವಿಸುತ್ತೇನೆ.

ಎಂ.ಎನ್. ಪ್ರಭಾಕರ್

**ಪರಾಮರ್ಶನ ಗ್ರಂಥಗಳು**

೧. ಅಗ್ರವಾಲಾ ವಿ.ಎಸ್. (ಸಂ) **ಸಮರಾಂಗಣ ಸೂತ್ರಧಾರ**, ಓರಿಯಂಟಲ್ ಇನ್‌ಸ್ಟಿಟ್ಯೂಟ್ ಬರೋಡ, ೧೯೬೬

೨. ಭಗವಾನ್ ದಾಸ್ ಜೈನ್ (ಸಂ) ಪ್ರಾಸಾದ ಮಂಡನ, ಜೈಪುರ ೧೯೬೩

೩. ಮಲ್ಲೇಪುರಂ ಜಿ. ವೆಂಕಟೇಶ (ಸಂ) **ಶಿವತತ್ತ್ವರತ್ನಾಕರ** (ಸಂ.೧) ಕನ್ನಡ ವಿಶ್ವ ವಿದ್ಯಾಲಯ, ಹಂಪಿ, ೧೯೯೯

೪. ಮಲ್ಲೇಪುರಂ ಜಿ. ವೆಂಕಟೇಶ (ಸಂ) **ಮಾನಸೋಲ್ಲಾಸ** (ಸಂ.೨) ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯ, ಬೆಂಗಳೂರು, ೨೦೧೫

೫. ಮಂಕಡ್ ಪಿ.ಎ. (ಸಂ) **ಅಪರಾಜಿತ ಪೃಚ್ಛಾ**, ಓರಿಯಂಟಲ್ ಇನ್‌ಸ್ಟಿಟ್ಯೂಟ್,

ಬರೋಡ, ೧೯೫೦
೬. ನಾರಾಯಣಶಾಸ್ತ್ರಿ ಎಸ್ (ಸಂ) ಶಿವತತ್ತ್ವರತ್ನಾಕರ (ಸಂ೧)
ಮೈಸೂರು ಪ್ರಾಚ್ಯ ವಿದ್ಯಾ ಸಂಸ್ಥೆ, ಮೈಸೂರು (೧೯೬೪)
೭. ಶ್ರೀಗೊಂಡೇಕರ್ ಜಿ..ಕೆ. (ಸಂ) ಮಾನಸೋಲ್ಲಾಸ (ಸಂ.೨) ಓರಿಯಂಟಲ್ ಇನ್‌ಸ್ಟಿಟ್ಯೂಟ್, ಬರೋಡಾ ೧೯೫೯
೮. ಅಗ್ನಿ ಪುರಾಣ, ಮಹರ್ಷಿ ಯೂನಿವರ್ಸಿಟಿ ಆಫ್ ಮ್ಯಾನೇಜ್‌ಮೆಂಟ್, ವೇದಿಕ್ ಲಿಟರೇಚರ್ ಕಲೆಕ್ಷನ್ಸ್
೯. ಪ್ರಭಾಕರ್ ಎಂ.ಎನ್. ಕಿಂಗ್ ಭೋಜದೇವ ಅಫ್ ಸಮರಾಂಗಣ ಸೂತ್ರಧಾರ, ಕ್ವಾರ್ಟರ್ಲಿ ಜರ್ನಲ್ ಆಫ್ ಮಿಥಿಕ್ ಸೊಸೈಟಿ (ಸಂ. ೧೦೫) ಸಂ.೨ ಬೆಂಗಳೂರು

# ಲಿಂಗ ವಿಂಗಡಣೆಯ ಸಾಮಾಜಿಕ ಮತ್ತು ಸಾಂಸ್ಕೃತಿಕ ನೆಲೆ-ಒಂದು ಚಿಂತನೆ.

ಡಾ. ಎಂ.ಜಿ. ವಾರಿ

ಲಿಂಗ ವಿಂಗಡಣೆಯ ಸಾಮಾಜಿಕ ಮತ್ತು ಸಾಂಸ್ಕೃತಿಕ ನೆಲೆ-ಒಂದು ಚಿಂತನೆ.

೧.೧. ಸಹಜವಾದ ಮೊದಲ ಹಂತದ ಒಂದು ಮುಕ.(ಅ.)

ಈ ವಿಶಯವಾಗಿ ಇತಿಹಾಸದ ಹಿನ್ನಲೆಯೊಂದಿಗೆ ನೋಡಿ (ಪರಾಮರ್ಶೆ>) ಪರಾಮರಿಶೆ ನಡೆಸಬೇಕಾಗುತ್ತದೆ. ಈ ದಿಶೆಯಲ್ಲಿ ಹದಿಮೂರನೇ ಶತಮಾನದ ಕೇಶಿರಾಜನತ್ತಲೇ ಹೊಳ್ಳಿ (=ಹಿಂದಕ್ಕೆ ತಿರುಗಿ) ನೋಡಬೇಕಾಗುತ್ತದೆ. ಏಕೆಂದರೆ ಲಿಂಗ ವಿಂಗಡಣೆ ಕುರಿತು ವಿವರವಾಗಿ ಬಿಚ್ಚಿಡುವ ಕಾರ್ಯ-ಕೆಲಸವನ್ನು ಮೊದಲ ಬಾರಿಗೆ ಆತನೆ ನಡೆಸುತ್ತಾನೆ. ಇದನ್ನು ಈಗಾಗಲೇ ಕಂಡುಕೊಳ್ಳಲಾಗಿದೆ.*೧

೧.೨ ಮತ್ತೊಂದು ಮುಕದ ಎರಡು ಆಯಾಮಗಳು:
(ಆ) ನಪ್‌ಸ್ತ್ರೀ, ನಪ್‌ಪುನ್,
(ಇ) ಸ್ತ್ರೀನಪ್, ಪುನ್ನ್ಪ್,

ಇದೀಗ ಎಳೆ ಎಳೆಯಾಗಿ ಬಿಡಿಸಿ ತೋರಿಸುವ ಹಾಗೆ, ಇತ್ತ ಚಿತ್ತ ಹರಿಸಬೇಕಿದೆ. ಈಚೆಗೆ ಅಂದರೆ ೨೦೦೧ರಲ್ಲಿ ಹೊಸ ಗಾಳಿ-ಬೆಳಕು ಮೂಡಿದ ಕಾಲ.*೨ ಆವಾಗಲೆ 'ಲಿಂಗಮೇಳ್ತೆರಂ' ಎಂಬ ಆ ಬರಹ ಬೆಳಕಿಗೆ ಬಂದಿತ್ತು.*೩ ಅದು ನಮ್ಮ ನೇರ ಅರಿವಿಗೆ (=ತಿಳಿವು)ತೊಡಕಾಗಿದೆ. ಎನಿಸಿತು, ಅದಕ್ಕಾಗಿ ಮರುಸಂಚಿಕೆಯಲ್ಲಿ ತಿದ್ದಿ, ತೀಡುವ ರೀತಿ ಉತ್ತರಿಸಿದ್ದೆ. ಅದರ ಒಂದು ತುಣುಕನ್ನೆ ಇಲ್ಲಿ ಹಾಜರುಪಡಿಸಲು ಇಚ್ಚಿಸುತ್ತೇನೆ.

"ಕಳೆದ ವರ್ಷವೇ ಹೊರಬಂದ ಡಿ.ಎನ್.ಶಂಕರಭಟ್ಟರ ಮಹತ್ವದ ಕೃತಿ-'ಕನ್ನಡಕ್ಕೆ ಬೇಕು ಕನ್ನಡದೇ ವ್ಯಾಕರಣ'. ಕನ್ನಡ ವ್ಯಾಕರಣ ರಚನೆ ಹಿನ್ನಲೆಯ ತತ್ವವಿಚಾರಗಳನ್ನು ಅರಿಯಲು, ಕನ್ನಡದೆ ಆದ ಪರಿಬಾಷೆಯ ಅಗತ್ಯತೆಯನ್ನು ಅವರು ಇಲ್ಲಿ ಒತ್ತು ಕೊಟ್ಟು, ತಿಳಿಯುವ ಹಾಗೆ, ಹೇಳಿದ್ದಾರೆ. ಜೊತೆಗೆ ಸಂಸ್ಕೃತ ವ್ಯಾಕರಣಕ್ಕಿಂತ ಭಿನ್ನವಾದ ಕನ್ನಡದಲ್ಲಿರುವ ವಿಶಿಷ್ಟ ಲಕ್ಷಣಗಳತ್ತ ಗಮನ ಸೆಳೆದಿದ್ದಾರೆ. ಒಟ್ಟಾರೆ ವ್ಯಾಕರಣ ಅಂದರೆ ಕನ್ನಡ ಭಾಷೆ ರಚನೆಯ ವಿಷಯ ಕುರಿತಾದ ಅವರ ಈ ಗ್ರಂಥ, ನಮ್ಮನ್ನು ಸ್ವಂತ

ಚಿಂತನೆಯತ್ತ ಮುಖದಿರುಹಲು ಪುಟ ಕೊಡುತ್ತದೆ.

ಸಂಸ್ಕೃತದಲ್ಲಿ ಶಾಬ್ದಿಕ ಸ್ವರೂಪವನ್ನಾಧರಿಸಿದ ಅಂದರೆ ಶಬ್ದದ ಆಂತರಿಕ ರಚನೆಯಲ್ಲಿ ಕಾಣಿಸುವ ನಿಯಮ ಅನುಸಾರ ಲಿಂಗ ವಿಭಾಗೀಕರಣ ಕಂಡುಬರುತ್ತದೆ. ಆದರೆ ಕನ್ನಡದಲ್ಲಿ ಹಾಗಲ್ಲ. ಸಾಮಾಜಿಕ ನೆಲೆ, ಜೊತೆಗೆ ಸಾಂಸ್ಕೃತಿಕ ಹಿನ್ನಲೆಯ ಕೆಲವು ವಿಚಾರಗಳನ್ನು ಇಲ್ಲಿ ಮಾನದಂಡವಾಗಿ ತೆಗೆದುಕೊಳ್ಳಲಾಗುವುದು, ಗಮನೀಯ ಅಂಶ. ಅದನ್ನೇ ಇಲ್ಲಿ ಈ ರೀತಿ ತೋರಿಸಲಾಗಿದೆ.

ಅ) ದ್ರಾವಿಡ ಮೂಲದಿಂದ ಬಂದ ವರ್ಗೀಕರಣ ಪದ್ಧತಿ.

ಉದಾ: ಮಹತ್ ಮತ್ತು ಅಮಹತ್ ವರ್ಗ.

ಆ) ಸಾಂಸ್ಕೃತಿಕ ಬದುಕಿನ ಹಿನ್ನಲೆಯ ಮಾಪುಗೋಲು.*೪

ಉದಾ:ನಪ್‌ಪುನ್ ಮತ್ತು ನಪ್ ಸ್ತ್ರೀ,

ಇ) ಸಮಾಜದಲ್ಲಿ ಗಂಡ–ಹೆಂಡಿರ ಸಂಬಂಧದ ಭಾವನೆ, ವಿಚಾರಗಳೆ ಇಲ್ಲಿ ಮಾನದಂಡ. ಉದಾ:ಪುನ್ನಪ್, ಸ್ತ್ರೀನಪ್,೫

೧.೨.೧ ಇದೀಗ ಸಾಂಸ್ಕೃತಿಕ ಮತ್ತು ಸಾಮಾಜಿಕ ಸಂಗತಿಗಳನ್ನು ಕಯ್ಗೆತ್ತಿಕೊಳ್ಳಲಿದ್ದೇನೆ. ಅದರಲ್ಲೂ ಸಾಂಸ್ಕೃತಿಕ ಆಯಾಮದ ವಿಶಯವನ್ನು ಈಗಾಗಲೇ ಕೇಶಿರಾಜ ಉದಾಹರಣೆಯೊಂದಿಗೆ ಉಲ್ಲೇಕಿಸುತ್ತ, ಗೆರೆ ಕೊರೆಯುವ ಹಾಗೆ, ಹೇಳಿ ಆಗಿದೆ.

ಉದಾ:ಸಿರಿ, ಸರಸ್ವತಿ, ದೇವತೆ ಎಂಬುವುಮ್ ಅಂತೆ;

(ಅಂತೆ ಎಂದರೆ 'ಸ್ತ್ರೀ ನಪ್' ಗಳಾಗುತ್ತವೆ ಎಂದರ್ತ.)

'ರವಿ ಮೂಡಿದನ್, ರವಿ ಮೂಡಿದುದು.

(ಅಂತೆ) ಗ್ರಹಂಗಳೆಲ್ಲಂ ಪುನ್ನಪುಂಸಕ ಲಿಂಗಂಗಳ್, (ಅಪ್ಪುವು.)

ಇವೆರಡು ಸಾಂಸ್ಕೃತಿಕ ಆವರಣ ಹಿನ್ನಲೆಯಲ್ಲಿ ವಿವರಣೆಗೊಳ್ಳುವ ಬಗೆಗಳು. ಇವೆರಡನ್ನು ನಿಕರವಾಗಿ (ನಮೂದು>) ನಮುದು ಮಾಡಿರುವುದು, ಕೇಶಿರಾಜನ ಹೆಗ್ಗಳಿಕೆ.

೧.೨.೨ ಇನ್ನು ನಮ್ಮ ಸಂಸ್ಕೃತಿಯ ಕಪ್ಪು ಚುಕ್ಕೆಯಾಗಿ ಗುರುತಿಸಬಹುದಾದ, ಮತ್ತೊಂದು ರೀತಿಯ ಉದಾಹರಣೆಗಳನ್ನು ಕೊಡುವುದೂ ಗಮನೀಯವಾಗಿದೆ.

ಉದಾ: ಆಳ್+ಇವನ್>ಆಳಿವನ್, ಆಳ್+ಇದು>ಆಳಿದು.

ಆ ಪೆಣ್ ಜಾಣೆ. ಆ ಪೆಣ್ ಬಂದುದು.

ಆ ಕನ್ಯಕೆ ಸುಲಕ್ಷಣೆ. ಆ ಕನ್ಯಕೆ ಪೊಲ್ಲದು.

(ಸ್ರೀನಪ್‌ಗೆ ಕೊಟ್ಟ ಉದಾ,)

ಇಲ್ಲಿಯ 'ಆಳು'*೬ ಮತ್ತು 'ಹೆಣ್ಣು'ಎನ್ನುವ ಇವೆರಡು ಕ್ರಮವಾಗಿ 'ಪುನ್ನಪ್' ಮತ್ತು 'ಸ್ರೀನಪ್'–ಗೆ ಕೊಡುವ ಉದಾಹರಣೆಗಳಾಗಿವೆ. ಈ ಕುರಿತು ಮರು–ಆಲೋಚನೆಯೊಂದಿಗೆ ಹೆಜ್ಜೆ ಇಡಬೇಕಾಗಿದೆ. ಸಾಂಸ್ಕೃತಿಕ ವಲಯದ ಮತ್ತೊಂದು ಟಿಸಿಲಾಗಿ ನೋಡಬೇಕಾಗುತ್ತದೆ. ಇದನ್ನು ನಮ್ಮ ಸಂಸ್ಕೃತಿಯ 'ಕಪ್ಪು ಚುಕ್ಕಿ' ಎನ್ನಬೇಕು. ಹಾಗೆಂದರೆ ಆಳು ಪದ ಆರ್ಯರು ಹುಟ್ಟು ಹಾಕಲು ಕಾರಣವಾದ ಅತವಾ ಹಾಕಿದ

ಜಾನಾಂಗಿಕವಾದ ನಾಕು ಬಗೆಯ ವಿಂಗಡಣೆಯಲ್ಲಿ ಬಹು ಕೆಳಹಂತದಲ್ಲಿ ಗುರಿತಿಸಲಾಗುವ ಪದವಾಗಿದೆ. ಒಟ್ಟಾರೆ ಗಂಡಾಳಿರಲಿ, ಹೆಣ್ಣಾಳಿರಲಿ, ಒಂದು ಬೆಲೆ ಕೊಡುವ ಸ್ತಾನ-ಮಾನವಂತು ಈ ಪದಕ್ಕೆ ಇಲ್ಲವೇ ಇಲ್ಲ ! ಇದನ್ನೆ ಮತ್ತೆ ಹೇಳವುದಾದರೆ, ವಯ್ದಿಕಶಾಹಿ ಪದ್ದತಿ ವಿದಿಸಲಾದ 'ಚತುರ್ವರ್ಣ'ದ ಲಾಬಿಯೇ ಕಾರಣ.

**೧.೩ ದುಡಿದು ತಿನ್ನುವ ಕೆಳಜನಾಂಗ :**

ಹಲವು ಬಗೆಯ ಒಳನುಡಿಗಳು (ಜಾನಾಂಗಿಕ ಮತ್ತು ಪ್ರಾದೇಶಿಕವಾಗಿ) ಕ್ರಿಯಾಶೀಲತೆಯಿಂದ ನಳನಳಿಸಲು ಕಾರಣರಾದವರು, ಅದರಲ್ಲೂ ಮುಖ್ಯವಾಗಿ ಊರುಗೋಲಾದವರು, ಈ ಕೆಳಸಮುದಾಯದವರು ಅಲ್ಲವೆ?

**ವಾಕ್ಯಗಳು :**

ಹೇರಳವಾದ ಸಿಟ್ಟು, ಸೆಡುವು, (ತಾತ್ಸಾರ>)ತಾಚಾರ, 'ಹ್ಯಾಂವ', ಈ ಬಾವಗಳು ಗಂಡ-ಹೆಂಡಿರಲ್ಲಿ ಮಡುಗಟ್ಟಿದಾಗಲೂ ಈ ಎರಡು ಅಂಶಗಳು (ಪುನ್ನಪ್, ಸ್ತ್ರೀನಪ್,) ಬಳಕೆ ಉಂಟು.

– ಅಕಿ, ನಾ ಏನ್ ಹೇಳ್ತೀನಿ, ಎಲ್ಲಾದ್ದೂ ಅಡ್ಡಡ್ಡ ಮಾತಾಡ್ತಯ್ತಿ !!

[ಆಕೆ>ಅಕಿ, ನಾನು>ನಾ, ಹೇಳುತ್ತೇನೆ(ಎಂಬೊ)>ಹೇಳ್ತೀನಿ, ಎಲ್ಲದಕ್ಕೂ>ಎಲ್ಲದ್ದೂ>ಎಲ್ಲಾದ್ದೂ, ಅಡ್ಡ+ಅಡ್ಡ>ಅಡ್ಡಡ್ಡ=ತಿರುಗು-ಮುರುಗು, ವಿರುದ್ದವಾಗಿ, ಮಾತಾಡುತ್ತದೆ>ಮಾತಾಡ್ತಯ್ತಿ,]

– ಕುಡದ ಬಂದು, ಒಂದಸಂವ್ನ ಬಡಿಯಾಕಹತ್ತೀದಾ, ನಾ ತಡ್ಕೊಳ್ಳಾಕ ಆಗದ ನುಗಸಿಬಿಟ್ಟ್ಯಾ, ಅಗಾ, ಅಲ್ಲಿ ದಂದಕ್ಕಿ ಮೂಲ್ಯಾಗ, ಬಿದ್ದತಿ ನೋಡು.!!

[ಕುಡಿದು>ಕುಡದ, ಒಂದೇಸಮನಾಗಿ>ಒಂದಸಂವ್ನ=ಬಿಟ್ಟುಬಿಡದೆ, ನಿರಂತರವಾಗಿ, ತಡೆದುಕೊಳ್ಳಲು ಆಗದೆ>ತಡ್ಕೊಳ್ಳಾಕ ಆಗದ, ನುಗಸಿಬಿಟ್ಟ್ಯಾ=ತಳ್ಳಿಬಿಡು, ಅಗೋ (ಅನುಕರಣಪದ)>ಅಗಾ, ದಂದಕ್ಕಿ=ಕೊಟ್ಟಿಗೆ, ಮೂಲೆಯಲ್ಲಿ>ಮೂಲ್ಯಾಗ, ಬಿದ್ದಿದೆ>ಬಿದ್ದತಿ,]

– ಕುಡದ ಬಂದು ಬಿದ್ದತಿ ನೋಡು ! ಒಂದ್ ದುಡಿಲಿಲ್ಲ-ದುಕ್ಬಡ್ಲಿಲ್ಲ.

[ದುಡಿ-ದುಕ್ಕಪಡು>ದುಡಿ-ದುಕ್ಬಡು-ಇದೊಂದು ಜೋಡುನುಡಿ, ವಿಶೇಶವಾಗಿ ದಯ್ಹಿಕ ದುಡಿಮೆಯಲ್ಲಿ ಮಾತ್ರ ಸಹಜವಾಗಿ ಮಾಡಿ ಮುಗಿಸುವ ಬಲವಾದ ಇಚ್ಚೆ, ಸಹನೆ, ಜೊತೆಗೆ ಪರಿಶ್ರಮ-ಇವೆಲ್ಲ ಬೇಕೆ ಬೇಕು. ಇದಕ್ಕೆ ಬೆನ್ನು ತಿರುಗಿಸಿದರೆ ಸೋಂಬೇರಿ, ಕೆಲಸಗೇಡಿ ಪಟ್ಟ ಕಟ್ಟಿಟ್ಟದ್ದು. ಇದನ್ನೆ ದುಡಿಲಿಲ್ಲ-ದುಕ್ಬಡಲಿಲ್ಲ ಎನ್ನುವುದು.]

ವಿರಳವಾಗಿ ಸಮೂಹ ಸೂಚಕವಾಗಿಯೂ ಬಳಕೆ ಇದೆ.

– ಅವರ ಮನ್ಯಾಗ ಸೊಸಿನ ಬಿಟ್ರ, ಎಲ್ಲಾರೂ ದನ ಇದ್ದಾಂಗ ಅದಾವು!

[ದನ ಇದ್ದ ಹಾಗೆ>ದನ ಇದ್ದಾಂಗ (ಉಪಮೆ ಬಳಕೆ.)

– ಅವರೂರಾಗ ಹೆಣ-ಗಂಡ ಸೇರಿ ಹೊಡಿ. ಬಡಿ. ಕಡಿ. ಮಂದೀನ ತುಂಬ್ಯಾವು!

[ಅದಾವು. ತುಂಬ್ಯಾವು – ಬಹು ವಚನವನ್ನುಳ್ಳ ನಪ್ ಸೂಚಕ ಕ್ರಿಯಾಪದಗಳೇ ಇವು.]

ಇನ್ನು 'ಹೆಣ್ಣು'ಎನ್ನುವ ಪದದ ವಿಶಯಕ್ಕೆ ಬರೋಣ. 'ಹೆಣ್ಣು' ಗಂಡಿನ

ಉಪಬೋಗದ ವಸ್ತು, ಎಂದು ಹಿಂದೆ, ಇಂದು, (ಮೇಲ್ಮಟ್ಟದಲ್ಲಿ ತೋರದೆ ಹೋದರೂ ಒಳಗೊಳಗೆ,) ಪರಿಗಣಿಸುತ್ತ ಬರಲಾಗಿದೆ. ಮೂಲತಹ ಜಡಗಟ್ಟಿದ ಆರ್ಯ ಸಂಸ್ಕೃತಿಯಲ್ಲಿ ಗಂಡಿಗೆ ವಿಶೇಶ ಸ್ತಾನ ನೀಡುತ್ತಾ ಬಂದಿದೆ. ಅಶ್ಟೇ ಅಲ್ಲ, ಹೊನ್ನು ಮಣ್ಣಿನೊಂದಿಗೆ ಹೆಣ್ಣು ಪದವನ್ನು ಸೇರಿಸಿ 'ಹೆಣ್ಣು, ಹೊನ್ನು, ಮಣ್ಣು' ಎಂಬ ಪದಕಂತೆ (=ಪದಪುಂಜ) ಹಿಂದಿನಿಂದಲೂ ಬಹು ಚಾಲ್ತಿಯಲ್ಲಿರುವುದು. ಇದಕ್ಕೊಂದು ಜೀವಂತ ಸಾಕ್ಶಿ. ಈ ಪದಕಂತೆಯನ್ನು ಪ್ರಾಸದ ಸೊಗಸಿಗಾಗಿ ಸೇರಿದ್ದಂತು ಅಲ್ಲ ! ಹೊನ್ನು ಮಣ್ಣಿನ ಹಾಗೆ 'ಸ್ರೀ' ಯೂ 'ನಪ್'ಗೆ ಸೇರಿದೆ ಎಂದು ತಿಳಿಯಲಾಗುವುದು.

**ಆಳು :**

ಕೇಶಿರಾಜ ಮಾತ್ರ ಬಾರತೀಯ ಸಾಂಪ್ರದಾಯಿಕ ನೆಲೆ [ಇದನ್ನು ಬಹು (ನಿಖರ>)ನಿಖರವಾಗಿ ಆರ್ಯ+ದ್ರಾವಿಡ, ಇಂತು ಈ ಎರಡರ ಮಿಶ್ರಣಗೊಂಡ ಸಂಸ್ಕೃತಿ ಎನ್ನಬೇಕು.]ಯಲ್ಲಿ "ಪುನ್ನಪುಂಸಕಗಳ್"(ಸೂ–೧೦೧) ಎಂಬ ವಿಬಾಗದಡಿ ಆಳಿವನ್, ಆಳಿದು, ಎನ್ನುವ ಒಂದೇ ವಿಶಯದ ಎರಡು ಉದಾ;ಗಳನ್ನು ಕೊಡುತ್ತಾನೆ. ಇಲ್ಲಿ ಸ್ಪಸ್ಟವಾಗಿ ಆರ್ಯ ಸಂಸ್ಕೃತಿಯೇ ಮೇಲುಗಯ್ ಸಾದಿತಗೊಂಡಂತೆ ತೋರುತ್ತದೆ. ಏಕೆಂದರೆ (ಪುನ್+ನಪ್>) 'ಪುನ್ನಪ್'ಗಳೆರಡೆ ಇಲ್ಲಿ ಸೂಚಿತವಾಗಿವೆ. ಇದು ಅಲ್ಪಮಟ್ಟಿಗೆ ಮೇಲ್ವರ್ಗದ ಮೇಲ್ಪದರಿನಲ್ಲಿ ಇದೆಯೇನೋ ಎನ್ನಬಹುದು.

ಆದರೆ ದಕ್ಶಿಣ ಬಾರತದ ನಡು–ಮದ್ಯ ಎನ್ನುವ ವಲಯದಲ್ಲಿ ಜನಜೀವನದ ಒಳಪದರಿನ ಚಿತ್ರ ದರುಶನ ಸ್ವಲ್ಪ ಬೇರೆಯಾಗೇ ಇದೆ. ಇದಕ್ಕೆ ಮುಕ್ಯ ಕಾರಣವೆಂದರೆ ಇಲ್ಲಿಯ ಶರಣರ, ಸಂತರ ಚಲನವಲನದ ಚಟುವಟಿಕೆ ಒಂದು ನಿರ್ಣಾಯಕ ಪರಿಣಾಮ ಬೀರುವಂತಾಗಿದೆ. ಅದರಲ್ಲೂ ಬಸವಣ್ಣ (ಈತ ಒಬ್ಬ ವ್ಯಕ್ತಿ ಆಗಿ ಅಲ್ಲ; ಒಂದು ಸಮೂಹ ಶಕ್ತಿಯ ಸನ್ನೆಯಾಗಿ ಕಾಣಿಸಿಕೊಂಡವನು,) ಮತ್ತು ಇತರ ಶರಣ ಸಮೂಹ, ದುಡಿಮೆ ಜನಾಂಗಕ್ಕೆ ಆಶಾಕಿರಣವಾದವರು. ಸಮಾನತೆಯ ನೆಲೆಯಲ್ಲಿ ಗಟ್ಟಿ ಬದುಕನ್ನು ಕಟ್ಟಿಕೊಡಲು ಯತ್ನಿಸಿದವರು. ಈ ಶರಣರ ಕಾಯಕ ಮತ್ತು ದಾಸೋಹದ ಕ್ರಿಯಾ ಚಟುವಟಿಕೆಗಳು ಮಾತ್ರ ಶ್ರಮಿಕ ಜನರ ತಮ್ಮತನವನ್ನು ಬೆಳೆಸಲು ಅನುವು ಮಾಡಿಕೊಟ್ಟಿದೆ. ಈ ಮುಂಚೂಣಿಯ ಹೋರಾಟದಲ್ಲಿ ಹೆಣ್ಣುಮಕ್ಕಳಿಗೂ ವಿಶೇಶ ಸ್ತಾನ–ಮಾನ ಕಲ್ಪಿಸಿ ಕೊಡಲಾಯ್ತು. ಇದನ್ನ ಇಂದಿನ ಜನಾಂಗಗಳಲ್ಲೂ ಕಾಣ್ತೇವೆ.

**ಬಳಕೆಯ ವಾಕ್ಯ :**

–'ಇವತ್ತ* ನಾಕ ಹೆಣ್ಣಾಳು, ಮೂರ ಗಂಡಾಳು ಬಂದಾವು/ಬಂದಾರಾ'

[* – ತೇಲು ಉಚ್ಚಾರಣೆ, ಇವತ್ತ*=ಇಂದು, ನಾಲ್ಕು>ನಾಕು>ನಾಕ, ಮೂರು>ಮೂರ, ಬಂದಾವು<ಬಂದಿವೆ, ಬಂದಿದ್ದಾರೆ>ಬಂದಾರಾ,]

– 'ಇವತ್ತ* ನಿನ್ನೆಕಿನ ಹೆಣ್ಣಾಳ ಹೆಚ್ಚ ಬಂದಾರಾ'

[ನಿನ್ನೆಗಿಂತಲೂ > ನಿನ್ನೆಕಿನ, ಹೆಚ್ಚು > ಹೆಚ್ಚ,]

– 'ಜೀತದಾಳ ಅಂವಾ' [ಜೀತದ+ಆಳು>ಜೀತದಾಳು>ಜೀತದಾಳ, ಅವನು > ಅಂವಾ,]

– 'ಮಗ್ಗಲ ಮನಿ ಹೆಣ್ಣಾಳು ದುಡಿಯಾಕ ಬಲೆ ಬಂಟಿ ಅದಾಳಾ !'

[ಮಗ್ಗಲಮನಿ=ನೆರೆಮನೆ, ದುಡಿಯುವುದಕ್ಕೆ >ದುಡಿಯಾಕ, ಬಲೆ=ಬಹಳ, ಬಂಟ= ಗಟ್ಟಿ-ಮುಟ್ಟಾದ ಗಂಡಾಳು, (ಬಂಟ+ಇ)ಬಂಟಿ=ಕಟ್ಟುಮಸ್ತಾದ ಹೆಣ್ಣಾಳು,]

ಆಳನ್ನು ಒಳಗೊಂಡ ಈ ಮೂರು ಜೋಡುನುಡಿಯನ್ನೆ ಒಮ್ಮೆ ಗಮನವಿಟ್ಟು ನೋಡಿ.

೧. ಆಳು-ಹೋಳು, ೨.ಆಳು-ಕಾಳು, ೩.ಆಳು-ಹಾಳು.

ನಿಜ ಸಂಗತಿ ಎಂದರೆ ಆಳನ್ನು ನಡೆಸಿಕೊಳ್ಳುವಲ್ಲಿ, ಅವನ ದುಡಿಮೆಗೆ ಪ್ರತಿಪಲವನ್ನು ಕೊಡುವಲ್ಲಿ, ಇಲ್ಲೆಲ್ಲ ಶೋಶಣೆ ಮಾಡುತ್ತಲೆ ಬರುತ್ತಿದ್ದೇವೆ. ಹಾಗೆಯೇ ಆಳು-ಹೋಳು, ಆಳು-ಹಾಳು- ಈ ಎರಡು ಜೋಡುನುಡಿಯ ಬಳಕೆಯಲ್ಲಿ ಯಜಮಾನ ಸಂಸ್ಕ್ರುತಿಯ (ದರ್ಪ>)ದರಪ-ದಿಮಾಕು ಅಡಗಿದೆ ಎನ್ನಬೇಕು. ಅದರಲ್ಲೂ ಹೆಣ್ಣಾಳು-ಗಂಡಾಳುಗಳನ್ನು ನೋಡುವ, ಅವರಿಗೆ(ಮಜೂರಿ>)ಮಜುರಿ ನೀಡುವ, ಈ ಎರಡರಲ್ಲೂ ಬೇದ-ಬಾವವನ್ನು ಮಾಡುತ್ತಲೆ ಬರುತ್ತಿದ್ದೇವೆ.

ಒಟ್ಟಾರೆ ಹೇಳುವುದಾದರೆ 'ಆಳು' ಪದ ದಕ್ಶಿಣ ಬಾರತದಲ್ಲಿ ತ್ರಿಲಿಂಗವಾಗಿಯೂ ಬಳಕೆ ಇದೆ, ಎನ್ನಬೇಕು.

೧.೪ ತ್ರಿಲಿಂಗಕ್ಕೆ ಸಮ್ಮಂದಿಸಿ 'ಶಿಶು' ಮತ್ತು 'ಕೂಸು' ಎಂಬ ಎರಡು ಪದಗಳನ್ನು ಕೊಡುವುದು, ಗಮನ ಸೆಳೆಯುತ್ತದೆ. ಇವೆರಡು ಸಮಾನ ತಿರುಳುಳ್ಳ ಪದಗಳೆ ! ಒಂದು ಸಕ್ಕದ, ಇನ್ನೊಂದು ಕನ್ನಡ ಪದವಾಗಿದೆ.

ಅವನ್ ಶಿಶು. ಅವಳ್‌ಶಿಶು. ಅದು ಶಿಶು.-ಸಾಮಾನ್ಯ ಜನತೆಯಲ್ಲಿ ಚಾಲ್ತಿಯಲ್ಲಿ ಇಲ್ಲದಿರುವ, ಕೇವಲ ಹುಟ್ಟಿಸಿಕೊಂಡು (=ಕಲ್ಪಿಸಿಕೊಂಡು) ಹೇಳುವ, ವಾಕ್ಯಗಳಾಗಿವೆ. '

'ಕೂಸು'೭ ಪದದಲ್ಲಿ ಬವ್ದಿಕ ಬೆಳವಣಿಗೆ ಹಂತದಲ್ಲಿ ಗುರುತಿಸಲಾಗುವ ಮಹತ್, ಅಮಹತ್-ಎನ್ನುವ ದ್ರಾವಿಡ ಬಾಶೆಯ ವಿಂಗಡಣೆಯ ಮಾನದಂಡವೇ ಇಲ್ಲಿ ನಿಕರವಾಗಿ ಕೆಲಸ ಮಾಡಿದೆ.

೧.೫ 'ಲಿಂಗಮೊಂಬತ್ತು ತೆರಂ' ಎಂದು ಹೇಳುವಾಗ ಕೇಶಿರಾಜ ಪೂರ್ತಿ ಅಲ್ಲದಿದ್ದರೂ ಒಂದಿಸ್ಟು ಸಂಸ್ಕ್ರುತ ವ್ಯಾಕರಣಕ್ಕೆ ಶರಣಾಗಿ ಹೋದವನು, ಹೀಗಿರುವಾಗ (ದ್ರಾವಿಡ ಅಂದರೆ) ಕನ್ನಡದ ಲಿಂಗ ವಿಂಗಡಣೆ ಚವ್ಕಟ್ಟಿನ ಕುರುಹು ಎಲ್ಲಿಯೂ ಅಂದರೆ ಯಾವ ಸುಳಿವೂ ಇಲ್ಲವೆ ಇಲ್ಲ, ಎಂಬ ನಿಮಿತ್ತವನ್ನು ಹೊರಿಸಲಾಗುತ್ತದೆ. (ಇಲ್ಲಿ ಹಲವರ ದ್ರುಸ್ಟಿ ದೋಶವು ಕಾಣುವಂತಾಗಿದೆ.) ಇದು ಎಷ್ಟು ಸರಿ? ಒಟ್ಟಾರೆ 'ಶಮದ'ದ ಹಲವು ಸೂತ್ರಗಳನ್ನು ಇತರೆ ಸಾಂದರ್ಬಿಕ ಸಾಕ್ಶಿಗಳು ದೊರೆಕಿಯಾವೆ?! ಸಿಕ್ಕುವುದಾದರೆ ಅದನ್ನಿಟ್ಟುಕೊಂಡು ತಾಳೆ ಮಾಡಿ, ತರ್ಕಿಸುವ ಗೋಜಿಗೆ ನಾವು ಹೋಗಲೇ ಇಲ್ಲ! ಈ ಎಲ್ಲ ಅವಾಂತರಕ್ಕೆ ಇದೂ ಒಂದು ಕಾರಣ.

ಉದಾಗೆ: ಈ ಸೂತ್ರವನ್ನೆ ಒಮ್ಮೆ ಮೆಲುಕು ಹಾಕಿ.

ಕೆಲಕೆಲವು ಸಕ್ಕದದ ಮೂ<br>
ರು ಲಿಂಗಮುಮ್ ರೂಢಿವೆತ್ತ ಕರ್ನಾಟಕದೊಳ್<br>
ನಿಲೆ ನಪ್+ಅರಿ(ಯಿರಿ).....

[ಸೂತ್ರ -೧೬೬]

ಕೇಶಿರಾಜನ ಈ ಹೇಳಿಕೆಯಿಂದ ನೇರವಾಗಿ ಸಂಸ್ಕೃತ ಮತ್ತು ಕನ್ನಡದ ಲಿಂಗ ವಿಂಗಡಣೆ ಬಗೆ, ಬೇರೆ ಬೇರೆಯೇ ಆಗಿತ್ತೆಂಬುದು, ಅವನಿಗೆ ನಿಚ್ಚಳವಾಗಿ ತಿಳಿದಿತ್ತೆಂದು, ಹೇಳಬಹುದು. ಇದರಿಂದ 'ಶಮದ'ದ ಒಟ್ಟಾರೆ ಸಾರವನ್ನು ಅರಿಯದೆ, ಕಣ್ಣಿಗೆ ಪಟ್ಟಿ ಕಟ್ಟಿಕೊಂಡಿರುವ ಹಾಗೆ, ಕೇಶಿರಾಜನೊಂದಿಗೆ 'ಶಮದ'ವನ್ನು ಸಾರಾಸಾಗಟಾಗಿ ದೂರ ಇಡುವುದು, ಎಸ್ಟು ಸರಿಲ ?! ಇದನ್ನು ಮತ್ತೊಮ್ಮೆ ನಮ್ಮೊಳಗೆ ನಾವು ಪ್ರಶ್ನೆ ಹಾಕಿಕೊಳ್ಳಬೇಕಿದೆ !

೧.೫.೧ ಹಾಗೆಯೇ ಲಿಂಗ ವಿಂಡಣೆಗೆ ಸಮ್ಮಂದಿಸಿದಂತೆ ಕೇಶಿರಾಜ ಸಕ್ಕದ ವ್ಯಾಕರಣ ಚವ್ಕಟ್ಟಿನ ಬದುವನ್ನೇ ಹಿಡಿದು ಸಾಗುತ್ತಿರುವುದರಿಂದ 'ಲಿಂಗಮೊಂಬತ್ತು ತೆರಂ' ಎಂದು ಬೇರೆ ಹಾದಿ ಕಾಣದೆ ಹೇಳಬೇಕಾಯ್ತೇನೊ? ಆದರೆ ವಿವರಗೊಳ್ಳುವ ಒಳಗಿನ ಹೂರಣದಲ್ಲಿ ಮಾತ್ರ ಬಹಳಸ್ಟು ಕನ್ನಡ ಬಾಶೆ ಆಶಯವೇ ಅಡಗಿದೆ ಎನ್ನಬೇಕು, ಕೊನೆಗೆ ಸಂಸ್ಕೃತ ಸೆಳೆವಿಗೆ ಸಿಲುಕಿ, (ಪುನ್‌ಸ್ತ್ರೀ, ತ್ರಿಲಿಂಗ, ವಾಚ್ಯಲಿಂಗ, ಅವ್ಯಯಲಿಂಗ ಇತ್ಯಾದಿಗಳೊಂದಿಗೆ,) ಇನ್ನೊಂದಿಸ್ಟು ಒತ್ತಾಯದಿಂದ ತಂದು ತುರುಕುವ ಯತ್ನ ನಡೆಸಿದ್ದಾನೆ. ಆಮೇಲೆ ಅನುಮಾನದ ಸುಳಿಯಲ್ಲಿ ಸಿಲುಕಿದಂತೆ ಕಂಡು ಬಂದಿದೆ, ಇದರಿಂದ ಕೊನೆಗೆ "ಕನ್ನಡದೊಳ್ ಪರಿವರ್ತಿಸವು+ಉಳಿದ ಲಿಂಗಮ್+ಒಳವಾಗಿರ್ದುಮ್" (ಸೂತ್ರ-೧೦೧) ಎಂದು (ತೇಪೆ>) 'ತ್ಯಾಪಿ' ಹಚ್ಚುವ ಮೂಲಕ, ನಿರಾಳ ನಿಟ್ಟುಸಿರಿನಿಂದ ಕೊಂಚ ಬಿಡುಗಡೆ ಹೊಂದಿದಂತೆ, ತೋರುತ್ತದೆ.

೧.೬ ಇನ್ನು ಮುಂದೆ (ಇ) ಎಂದು ಗುರಿತಿಸಲಾದ ಸಂಗತಿಯನ್ನು ಕಂಡುಕೊಳ್ಳಬೇಕೆಂಬ ಅಂಶ ಕೇಶಿ.ಗೆ ಹೊಳೆಯಲಿಲ್ಲ ಏಕೆ, ಎಂಬ ಅನುಮಾನ ನಮ್ಮೊಳಗೆ ಉಳಿಯುತ್ತದೆ. ಇದಕ್ಕೆ ಸಮಾದಾನ ನೀಡುವ ಹಾಗೆ, ಉತ್ತರ ಕೊಡಬಹುದಿಸ್ಟೆ, ಮೂಲತಹ ಸಂಕರಗೊಂಡ ಸಂಸ್ಕೃತಿ (ಆರ್ಯ+ದಾವಿಡ) ಪ್ರಕಾರ ಕೆಳಜನಾಂಗದ ದುಡಿಮೆ ವರ್ಗದವರನ್ನು (ಹಾಗೆಯೇ ಅವರಾಡುವ ಬಾಶೆಯನ್ನು ಸಹ,) ಕಡೆಗಣಿಸಿರುವುದು, ಇಲ್ಲಿ ಎದ್ದು ಕಾಣುತ್ತದೆ. (ಇದನ್ನು ಈಗಾಗಲೇ 'ದುಡಿದು ತಿನ್ನುವ ಕೆಳಜನಾಂಗ' ಎಂಬ ಒಳ, ಶಿರಶಿಕೆಯಲ್ಲಿ ಗಮನಿಸಲಾಗಿದೆ) ಅದಕ್ಕೆಂದೆ ಕೇಶಿರಾಜ ದುಡಿಯುವ ಜನರ ಬಾಶೆಯನ್ನು (ತಾತ್ಸಾರ>), ತಾಚಾರ ಮಾಡುವ ಹಾಗೆ (ಸೂತ್ರ=೫೮), ತರಾಟೆಗೆ ತೆಗೆದುಕೊಂಡಿದ್ದಾನೆ.

ಇಸ್ಟಾದರೂ ಇದಕ್ಕೆ (ವಿರೋದ>) ವಿರೊದವಾಗಿ ಕಾಣುವ ಈ ಮೂರು ನುಡಿಗಳತ್ತ ಕಣ್ಣು ಹಾಯಿಸಿ.

–'ನಾಮರೂಢಿ ಅಳಿಯದ ಪಕ್ಷಮ್' : ೬೨
–'ರೂಢಿವೆತ್ತ ಕರ್ನಾಟಕದೊಳ್' : ೧೬೬
–'ಲೋಕರೂಢಿ ಕಿಡದವೊಲ್' : ೨೬೬

ಈ ಪದರೂಪಗಳನ್ನೆಲ್ಲ ನೋಡಿದರೆ, ಕನ್ನಡದ ಆಡುಬಾಶೆಯ ಅರಿವು ಇದ್ದೆ ಇತ್ತೆಂಬುದು, ಸುಲಬವಾಗಿ ಗುರುತಿಸಿ, ಹೇಳಬಹುದು. ಹಾಗೆಯೇ ಆಗಿನ ಪಂಡಿತ

ವಲಯದಲ್ಲಿರುವ ಪರಿಸರದ ಸಾಂಪ್ರಾದಾಯಿಕ ಆಗು-ಹೋಗುಗಳ ಸಿಕ್ಕಿನಲ್ಲಿ ಸಿಕ್ಕು, ಹಾಗೆಯೇ ಯೋಚಿಸುವ ಅನಿವಾರ್ಯತೆ ಇತ್ತು. ಆ ಪರಿಸರದ ಪರಿಣಾಮದಿಂದ ಕೊನೆಗೆ "ಗ್ರಾಮ್ಯರ್+ಅರಿಯದೆ+ಉಚ್ಚರಿಸುವರ್ ಕುಳಾಂತ ಬ್ರಮೆಯಿಮ್" ಎಂಬ ತಾಚಾರದ ಮಾತು, ಅವನಿಂದ ಹೊರಹೊಮ್ಮಲು ಕಾರಣವಾಗಿದೆ.*೧೦

ಅಡಿಟಿಪ್ಪಣಿ

೧. ನನ್ನ ಆರಂಬಿಕ ವ್ಯಾಕರಣ ಸಮ್ಮಂದಿ ಸಂಶೋದನೆ ಲೇಕನಗಳಲ್ಲಿ, 'ಲಿಂಗಮೊಂಬತ್ತು ತೆರಂ-ಒಂದು ಟಿಪ್ಪಣಿ' ಎಂಬುದೂ ಒಂದಾಗಿತ್ತು. ಇದು ಮೊದಲ ಬಾರಿಗೆ 'ಅಂಕಣ' ಪತ್ರಿಕೆಯಲ್ಲಿ (೧೯೮೫) ಬೆಳಕು ಕಂಡಿತ್ತು. ಆಗ 'ಲಿಂಗಮೊಂಬತ್ತು ತೆರಂ' ಎನ್ನುವ ಕೇಶಿರಾಜನ ಚಿಂತನೆಯತ್ತ ಗಮನ ಹರಿಸಿ, ಅಲ್ಲಿ ನನಗೆ ಕಂಡು ಬಂದ ತೊಡಕನ್ನು ಬಿಡಿಸಲು, ಮೊದಲ ಬಾರಿಗೆ (ಯತ್ನ>) ಯತನವನ್ನು ನಡಿಸಿದ್ದೆ.

ಆತ ಸಕ್ಕದ ವ್ಯಾಕರಣಕಾರರ ಓಲಯ್ಕೆಗೊ, ಏನೊ- ಒಟ್ಟಾರೆ 'ಲಿಂಗಮೊಂಬತ್ತು ತೆರಂ' (ಸೂತ್ರ:೯೮) ಎಂದು ಸಾರಿಬಿಟ್ಟ ! ಆಮೇಲೆ ಎಚ್ಚತ್ತವನಂತೆ, (ಅಸ್ಟೇನೂ ಗಟ್ಟಿ ದನಿ ಅಲ್ಲದ ರೀತಿ,) 'ಉಳಿದ ಲಿಂಗಮ್+ಒಳವಾಗಿ+ಇರ್ದುಮ್ ಕನ್ನಡದೊಳ್ ಪರಿವರ್ತಿಸವು' - ಎಂದು ಕೇಶಿರಾಜ ತಿಪ್ಪೆ ಸಾರಿಸುವ ಕೆಲಸವನ್ನೂ ಮಾಡುತ್ತಾನೆ ! ಹಾಗಾದರೆ ಇನ್ನೇನು? ಅದಕ್ಕಾಗಿ ಮತ್ತೊಮ್ಮೆ ಅವಲೋಕನ (ದೃಷ್ಟಿ>) ದಿಟ್ಟಿಯನ್ನು ಹರಿಸಿದ್ದೇನೆ. ಇದೇ ಈ ಲೇಕನದ ಸಾರ?

೨. ಹೊಸ ಬಿರುಗಾಳಿಯನ್ನೆ ಸ್ರುಸ್ಟಿಸುತ್ತಾ ಹಾದಿ-ಬೀದಿಯಲ್ಲೆಲ್ಲಾ ಅಡರಿಕೊಂಡ ಕಸ-ಕಡ್ಡಿ, ದೂಳನ್ನೆಲ್ಲಾ ಒಂದೇ ಬಾರಿಗೆ ದೂಳಿಪಟವನ್ನಾಗಿಸಿದ ಭಟ್ಟರ ಪುಸ್ತಕವೊಂದು ('ಕನ್ನಡಕ್ಕೆ ಬೇಕು ಕನ್ನಡದೇ ವ್ಯಾಕರಣ') ಸುಮಾರು ೨೦೦೦ರಲ್ಲೆ ಹೊರಬಂತು. ಅದು ಸಹಜವಾಗೇ ಕನ್ನಡ ಬಾಶೆ ಮತ್ತು ವ್ಯಾಕರಣ ಲೋಕದಲ್ಲೆ ಮೊದಲ ಬಾರಿಗೆ ಹೊಸ ಬೀಸುಳ್ಳ ಬಾಗಿಲನ್ನೆ ತೆರೆಯುವಂತಾಯಿತು. ಆದರೆ ಜಡಮತಿಗಳಾದ ಕನ್ನಡಿಗರು, ಹಾಕಿದ ಸಂಸ್ಕ್ರುತ ಬೇಲಿಯನ್ನು ದಾಟಲಾಗದೆ, 'ವದ್ದ್ಯಾಡು'ವಂತಾಗಿದೆ. [ಒದೆ-ಒದ್ದು(ಬೂತದ ಉಳಿಕೆ ರೂಪ)+ಆಡು > ಒದ್ದಾಡು > ಒದ್ದ್ಯಾಡು > ವದ್ದ್ಯಾಡು = ಚಟಪಟಿಸು, ತುಮುಲಕ್ಕೆ ಒಳಗಾಗು,] ಇದರಿಂದ ವಿಲವಿಲಗೊಳ್ಳುವಂತಾದುದು, ನಮ್ಮೆಲ್ಲರನ್ನೂ ಆತಂಕಕ್ಕೆ ದಬ್ಬಿದ ವಿಶಯವೇ !

೩. ಉತ್ತರ ಕರ್ನಾಟಕದ ಪ್ರಕಟಣಾ ರಂಗದಲ್ಲಿ ಹೆಸರು ಮಾಡಿದ ನೆಲೆ, ನಮ್ಮ ಕುಮಾರವ್ಯಾಸನ ಹುಟ್ಟೂರು, ಗದಗ ! ಇಲ್ಲಿಂದಲೇ ಸದ್ದು-ಗದ್ದಲ ಇಲ್ಲದೆ ಸಾಹಿತ್ಯ, ಕಲೆ, ಇತರ ಸಾಮಾಜಿಕ ವಿಶಯಗಳಿಗೆ ಮೀಸಲಾದ, 'ಛಂದ:ಸ್ಮ್ರುತಿ' ಎಂಬ ಪತ್ರಿಕೆಯೊಂದು, ನಾಕಯ್ದು ವರುಶಗಳ ಹಿಂದೆ ಬೆಳಕಿಗೆ ಬಂದಿತು. ಆವಾಗಲೆ ಪ್ರತಿಕ್ರಿಯೆ ರೂಪದಲ್ಲಿ ('ಲಿಂಗಮ್+ಏಳ್ತೆರಂ' ಎಂಬ ಪ್ರೊ. ಗಣಾಚಾರಿ ಅವರ ಲೇಕನಕ್ಕೆ) ನನ್ನದೊಂದು ಬರಹ ಪ್ರಕಟವಾಗಿತ್ತು.

ಅಲ್ಲಿರುವ ಬರಹದ ಮೊದ ಮೊದಲ ಒಂದೆರಡು ಅಂಶಗಳನ್ನು ಹೊರತುಪಡಿಸಿ, ಇನ್ನುಳಿದ ಎರಡು ಅಂಶಗಳ ವಿಸ್ತರಣೆಯ ವಿವರಣೆಗಳನ್ನುಳ್ಳ ಹಂತದ ನಿರೂಪಣೆಯಲ್ಲೆ,

(ಸದ್ಯ>)ಸದ್ದೆ ಈ ಲೇಕನ (ಮಯ್+ತಳೆ>) ಮಯ್ದಳೆಯುತ್ತ ಬಂದಿದೆ.

ತಿಂಗಳ ಪತ್ರಿಕೆ : ಛಂದ:ಸ್ಮೃತಿ, ಸಂ.೨, ಸಂ.೧೦, ಎಪ್ರೀಲ್-ಜೂನ್:೨೦೦೧.

೪. ಇಲ್ಲಿ ನಾನು ವಿಶ್ಲೇಶಿಸುವ ನಿರೂಪಣೆಯಲ್ಲಿ ಕೊಂಚ ಬದಲಾವಣೆ (ಅದಲು-ಬದಲು ಎನ್ನುವ ರೀತಿ,) ತರಲು ಇಚ್ಚಿಸಿದ್ದೇನೆ. ಏಕೆಂದರೆ ಬದುಕಿನ ಸಾಂಸ್ಕೃತಿಕ ನೆಲೆಯಲ್ಲಿ (ದ್ರಾವಿಡ ಬಾಶೆಗಳ ಲಿಂಗ ವಿಂಗಡಣೆಯ ಮೇರೆಗೆ,) 'ನಪ್' ಆಗಿರುವ ವಸ್ತು ಪರಿಕರಗಳನ್ನು ಪ್ರೀತಿ, ಆತ್ಮೀಯ, ಬಾವನೆಯ ಅಪ್ಪುಗೆ ಒಡನಾಟ ಇರುವುದರಿಂದ, ಇಲ್ಲಿ 'ನಪ್‌ಪುನ್', 'ನಪ್‌ಸ್ತ್ರೀ', ಎಂಬ ರೀತಿ ಗುರುತಿಸಲಾಗಿದೆ. ಇನ್ನು ಬದುಕಿನ ಜೀವಂತ ವ್ಯಕ್ತಿಗಳ ಒಡನಾಟ ಇರುವಾಗ ಹ್ರುದಯ ಸಮ್ಮಂದಿ ಬಾವನೆಗಳು ಬತ್ತಿ ಹೋಗಲು ಇಲ್ಲವೆ ಕಮರಿ ಹೋಗಲು, ಸಾದ್ಯ. ಆಗ ಅದನ್ನು 'ಸ್ತ್ರೀನಪ್', 'ಪುನ್ನಪ್' ಎಂದು ಹೆಸರಿಸಿ ಕರೆಯುವುದು, ಹೆಚ್ಚು ಯೋಗ್ಯ ಅನಿಸುತ್ತದೆ.

೫. ೧) ಇಲ್ಲಿ ಇನ್ನಸ್ಟು ಒಳಹೊಕ್ಕು ನೋಡಿದರೆ, ಗಂಡ-ಹೆಂಡಿರಸ್ಟೆ ಅಲ್ಲ, ಅತಿ ಅಲ್ಪ ಮಟ್ಟಿಗಾದರೂ

(ಕೆಳಸಮಾಜ) ಜನ ಸಮೂಹ ಸೂಚಕವಾಗಿಯೂ ಬಳಕೆ ಆಗುವುದಿದೆ.

೨) ಮೇಲೆ ಸೂಚಿಸಿದ ಈ ಪತ್ರಿಕೆಯಲ್ಲಿ ಈ ಲೇಖನ (ಅ.ಟಿ.ಇರಲ್ಲಿ) ಪ್ರಕಟವಾಗಿದೆ.

೬. ಆಳು : ಇದೊಂದು ಅಪ್ಪಟ ಕನ್ನಡ ಪದ. ಈ ಪದದ ತಿರುಳಿನ ಏಳು-ಬೀಳುಗಳನ್ನು ನೋಡಿದರೆ ಸಾಕು, ಮೇಲೇಳುವುದಕ್ಕಿಂತಲೂ ಸಾಕಸ್ಟು 'ಬೀಳು'ಗಳನ್ನೆ ಕಂಡಿದೆ. ಇದನ್ನು ಸದ್ದೆ (<ಸದ್ಯ) ಕರ್ನಾಟಕ ವಲಯಕ್ಕಸ್ಟೆ ಸೀಮಿತಗೊಳಿಸಿದರೆ, ಈ ಪದದ ಇತಿಹಾಸವನ್ನು ಅಲ್ಪಮಟ್ಟಿಗೆ ಮೂರು ಮಜಲುಗಳಾಗಿ ಗುರುತಿಸಿಕೊಳ್ಳಬಹುದು.

(೧) ಕಟ್ಟಾಳು : ಇದಕ್ಕೆ ಬಲಿಸ್ಟ, ಗಟ್ಟಿಗ, ಶೂರ, ದೀರ ಎಂಬ ತಿರುಳಿದೆ. ಇಂತ ಗಟ್ಟಿಗರನ್ನೇ ಮುಂದು ಮಾಡಿಕೊಂಡು ರಾಜರುಗಳು ಸಯ್ನ್ಯ ಕಟ್ಟಿದರು.

ಕಾಲ್ದಳ, ಆನೆದಳ, ಕದುರೆದಳ ಮತ್ತು ರತದಳ ಎಂಬುದಾಗಿ ಇವರೆಲ್ಲರ ಇರುವಿಕೆ ಮತ್ತು ಉಳಿವು, ಇಡಿ ರಾಜ್ಯದ ಅಳಿವು-ಉಳಿವಿನ ಸಂಗತಿಯಾಗಿತ್ತು. ಆದರೆ ಕೆಲವೊಮ್ಮೆ ಅವರನ್ನು ನಡೆಸಿಕೊಂಡ ರೀತಿ, ಊಹಿಸಲು ಸಾದ್ಯವಾಗದಸ್ಟು ಹೀನಾಯವಾಗಿತ್ತು !

ಇದು ಮಾತ್ರ ಸಂಕರಗೊಂಡ ನಮ್ಮ ಸಂಸ್ಕೃತಿಯಲ್ಲಿ ಒಂದು ಕಪ್ಪು ಚುಕ್ಕೆಯಾಗೆ ಉಳಿದಿದೆ. ಮೇಲ್‌ಜಾತಿಯ ಜನಗಳು ಆಳಾಗಿ ದುಡಿವ ಜನಾಂಗಗಳನ್ನು ಸರಿಯಾಗಿ ಉಪಯೋಗಿಸಿಕೊಂಡರು. ತಾವು ಅನುಭವಿಸುವ ಸವ್ಲಬ್ಯಗಳಿಂದ ಅವರನ್ನು ದೂರ ಇಟ್ಟರು. ಇದು ಮಾತ್ರ ವಸ್ತುವಿನ ಬಗೆಗೆ ಹೇಳುವ "ಗಜ ಚಿಟಜ ಣುಡಿಂತಿ" ಎನ್ನುವಂತೆ ಅವರನ್ನು ಕಾಣಲಾಯ್ತು ಮತ್ತು ನಡೆಸಿಕೊಳ್ಳಲಾಯ್ತು, ಎನ್ನಬೇಕು.

(೨) ಆಳಮನಸ್ಯಾ : ಒಟ್ಟಾರೆ ದುಡಿಮೆ ಜನಾಂಗದತ್ತ ಮೊದಲ ಆಶಾಕಿರಣವಾಗಿ ಕಾಣಿಸಿಕೊಂಡವರು, ಬಸವಣ್ಣ ಮತ್ತು ಇತರ ಶರಣ ಸಮುದಾಯ. ಆ ಶರಣರು ಹುಟ್ಟುಹಾಕಿದ 'ಕಾಯಕ' ಮತ್ತು 'ದಾಸೋಹ' ಈ ಎರಡು ಕ್ರಿಯಾಚಟುವಟಿಕೆಗಳು ಮಾತ್ರ ಶಿವಬಕ್ತರಾದ ಸಾಮಾನ್ಯರ ಅಂತರಂಗದಲ್ಲಿ

'ಮನಸ್ಯಾಗ' ಬೇಕಾದ ನಂಬಿಕೆ, ವಿಶ್ವಾಸ, ಆತ್ಮಬಲ, ಮೂಡಿಸಿತು. ಜೊತೆಗೆ ತಪ್ಪುಗಳು ಕಂಡಾಗ ಪ್ರಶ್ನೆಯೊಂದಿಗೆ ಪರಿಶೀಲಿಸುವ (ಛಾತಿ>)ಚಾತಿಯನ್ನು ತಂದುಕೊಟ್ಟಿತು.ಇಂತು ದುಡಿಮೆ ಜನಾಂಗಗಳಲ್ಲೆಲ್ಲಾ ಯಪ್ಪಾ-ಯಣ್ಣಾ, ಯವ್ವ-ಯಕ್ಕ, ಎಂಬ ಸಂಸ್ಕೃತಿಯ ಒಲವಿನ ತೆಕ್ಕೆಯೊಳಗೆ ಒಗ್ಗೂಡಿಸಿ, ನಯ, ವಿನಯ ಚಿಗುರೊಡೆಯುವಂತೆ ಮಾಡಿತು. 'ನಾವೆಲ್ಲ ಸಹಜೀವಿಗಳು, ಎಂಬ ಏಕಬಾವ ಹುಟ್ಟಲೂ ಕಾರಣವಾಯಿತು. ಇದರ ಒಂದು ಪಳೆಯುವಿಕೆಯ ಪದವಾಗಿ 'ಆಳಮನಸ್ಯಾ' ಎಂಬುದನ್ನು ಗಮನಿಸುವುದು, ಸೂಕ್ತವಾಗಿ ತೋರುತ್ತದೆ.

(ಋ) ಜೀತದಾಳು: ಕಟ್ಟೆಯ ಕಲ್ಲು ಮತ್ತೆ ಕಟ್ಟೆಗೆ ಸೇರಿದಂತಾಯಿತು. ಇವತ್ತು ಜೀತದಾಳಾಗಿ ದುಡಿಯುವವರ ಸಂಕೆ ಕಡಿಮೆ ಆಗಿರಬಹುದು. ಆದರೆ ಈ ದುಡಿಮೆ ಜನಗಳನ್ನು ನಾವು ನೋಡುವ, ಅವರೊಂದಿಗೆ ನಡೆವಳಿಯಲ್ಲಿ ತೋರ್ಪಡಿಸುವ ಬಗೆ ಮಾತ್ರ 'ಜೀತದಾಳು' ಎನ್ನುವುದಕ್ಕಿಂತ ಬೇರೆ ಎನಿಲ್ಲ. ಕಾರಣ (ಪೇಶ್ವೆ>)ಪೇಶವೆಗಳ ಆಳಿಕೆಯಲ್ಲಿ ಮತ್ತೆ ವಯ್ದಿಕ ಶಾಹಿ ನಡೆವಳಿ ಕುಡಿಯಿಟ್ಟಿದೆ. ಇದು ನಮ್ಮ ಇಂದಿನ ಪತನಗೊಳ್ಳುತ್ತಿರುವ ಸಂಸ್ಕೃತಿಯ ಸ್ತಿತಿ-ಗತಿ !

೭. ಬರಹದ ದಾಕಲೆಗೆ ಅನುಸಾರ "ಕೂಸು"ಪದದ ಉಲ್ಲೇಕ ಮೊಟ್ಟಮೊದಲು ಒಂಬತ್ತನೆ ಶತಮಾನದ ವಡ್ಡಾರಾದನೆಯಲ್ಲಿ ಕಂಡುಬರುತ್ತದೆ. ಮೊದಲ ಕವಿಯಾಗಿ ಮಿಂಚಿದ ಪಂಪನಲ್ಲೂ ಬಹು ಸ್ಪಸ್ಟವಾಗಿ 'ಪೆಣ್‌ಗೂಸು' ಎಂದೆ ಬಳಕೆ ಆಗಿರುವುದು ನಿಚ್ಚಳವಿದೆ.

೧೨ನೇ ಶತಮಾನದ ಶರಣರ ಕಾಲದಲ್ಲೂ ಇದೇ ತಿರುಳು ಮುಂದುವರಿಯುತ್ತದೆ. ಆದರೆ ೧೩ನೇ ಶತಮಾನದ ಕೇಶಿರಾಜನ ಕಾಲದಲ್ಲಿ ಈ ಪದದ ತಿರುಳು ಸೀಮಿತಗೊಳ್ಳುತ್ತ ಹೋಗುತ್ತದೆ.

ಇಂದಿನ ಚಾಲ್ತಿಯ ಹೊಸಗನ್ನಡದಲ್ಲಿ 'ಕೂಸು'ಪದ ಪೂರ್ತಿ ನಪ್‌ಆಗಿ ಬಳಕೆಯಾಗುತ್ತದೆ.

೮. (೧) "ಕುಣಿಯಾಕ ಬರಲಿಕ್ರ ನೆಲಾ ಡೊಂಕಯ್ತಿ ಅಂದ್ಲಂತ"

[ಕುಣಿಯುವುದಕ್ಕೆ > ಕುಣಿಯಾಕ, ಬರಲಿಕ್ರ=ಬಾರದೆ ಹೋದಾಗ, ಡೊಂಕು ಇದೆ>ಡೊಂಕಿದೆ

>ಡೊಂಕಯ್ತಿ, ಅಂದಳಂತೆ > ಅಂದ್ಲಂತ,]

ವಿವರಣೆ : ಇನ್ನೂ ಕುಣಿಯಲು ಬಾರದ (ಅಂದರೆ ಇನ್ನು ಕಲಿಕಾ ಹಂತದಲ್ಲಿರುವ ಸೋಗಲಾಡಿ)(ನೃತ್ಯಗಾರ್ತಿ>)ನುತ್ರ್ಯಗಾತಿಯೊಬ್ಬಳು ನೆಲವೇ ಡೊಂಕಿದೆ (=ಡೊಂಕಾಗಿದೆ) ಎಂದು ದೂರುತ್ತಿದ್ದಳಂತೆ !!

ಹೀಗಿದೆ ನಮ್ಮ ಇಂದಿನ ಓದು-ಬರಹ ಉಳ್ಳ ವಿದ್ವತ್ತಿನ ಲೋಕ!

(ಬ) ಕೇಶಿರಾಜ ಇಲ್ಲಿ ಬೆನ್ನು ತಿರುಗಿಸಿದ ಎರಡು ದ್ರುವಗಳ ತಾಕಲಾಟದಲ್ಲಿ ಸಿಕ್ಕು, 'ವದ್ದ್ಯಾಡು'ವಂತಾಗಿದೆ, ಎನ್ನಬೇಕು. ಸಂಸ್ಕೃತವೇ ನಮ್ಮಯ ಉಸಿರು, ಅದೇ ಜೀವ, ಜೀವಾಳ,- ಎನ್ನುವ ಪಂಡಿತ ಮಾನ್ಯರಾದ ಒಂದು ಪಂಗಡ ಇತ್ತು. ಇವರು,

ರಾಜಸಭೆಯ ನೆರಳಲ್ಲೆ ಉಸಿರಾಡುವವರು/ಉಸಿರೆತ್ತುವವರು. ಈ ರಂಗದಲ್ಲಿಯೂ ಕೇಶಿರಾಜ ಗುರುತಿಸಿಕೊಂಡವನು. ಹಾಗೆಯೇ ಅವರನ್ನು ಮೆಚ್ಚಿಸಬೇಕೆಂಬ ತೀವ್ರ ಸೆಳೆತದ ಹಂಬಲದವನು. ಇದನ್ನ (ಸದ್ಯ>) ಸದ್ದೆ (ನಾವು ನಮ್ಮ ತಿಳಿವಿನ ದಾರಿ ಸುಗಮಗೊಳಿಸಿಕೊಳ್ಳಲು,) 'ಉತ್ತರದ್ರುವ' ಎನ್ನೋಣ.

ಇನ್ನೊಂದು ಕನ್ನಡ ಆಡುನುಡಿಯು, (ಅನೇಕ>) ಅನೆಕ ಒಳನುಡಿ ಉಳ್ಳದು. ಈ ಬಗ್ಗೆಯೂ ಕಳಕಳಿ, ಕಾಳಜಿ ಹೊಂದಿದವನು ಕೇಶಿರಾಜ. ಆಗ ಉತ್ತರ ಕರ್ನಾಟಕದ ಒಳನುಡಿಯೇ ಹಿರಿಮೆ, ಹೆಗ್ಗಳಿಕೆ, ಪಡೆದಿತ್ತು. ಇದೇ ಒಂದು ರೀತಿ ಮಾದರಿ ಆದ 'ಲೋಕರೂಡಿ' ಆಗಿ ಚಾಲ್ತಿಯಲ್ಲಿತ್ತು. ಈ ಲೋಕರೂಡಿಯ ತುಡಿತ–ಮಿಡಿತವೂ ಅವನಲ್ಲಿ  ಬೇರೂರಿದೆ. ಇದನ್ನ 'ದಕ್ಶಿಣದ್ರುವ' ಎನ್ನಬಹುದು.

ಈ 'ಉತ್ತರ ದ್ರುವ' ಮೇಲಿನದು, 'ದಕ್ಶಿಣ ದ್ರುವ' ಕೊಂಚಮಟ್ಟಿಗಾದರೂ ಕೆಳಗಿನದು, ಎಂಬ ಬಾವನೆ ಕೇಶಿರಾಜನ ಸುಪ್ತ ಮನದಾಳದಲ್ಲಿ ಬೇರೂರಿದೆ, ಎಂದು ಅನಿಸುತ್ತದೆ. ಹೀಗೆ ಅವನ ಎಚ್ಚರದ ಅರಿವಿಗೆ ಬಾರದೆ ಎರಡು ಪಾತ್ರದಾರಿಯಾಗಿ ಕೆಲಸ–ಕಾರ್ಯ ಮಾಡಬೇಕಾಗಿ ಬಂದಿತೆಂದು ತೋರುತ್ತದೆ. ಹೀಗೆ ಎರಡು ಸೆಳೆತಗಳ ನಡುವೆ ಸಿಲುಕಿ, ಕೇಶಿರಾಜನ ಮನದಲ್ಲಿ ತೂಗುಯ್ಯಾಲೆಯ 'ವದ್ದ್ಯಾಟ' ನಡೆದಂತೆ ಕಂಡುಬರುತ್ತದೆ.

ಇದನ್ನೆ ಹೀಗೂ ಗುರುತು ಹಾಕಿಕೊಳ್ಳಲು ಅವಕಾಶ ಇದೆ.

[ಒದೆ>ಒದ್ದು (ಬೂತದ ಉಳಿಕೆ ರೂಪ)+ಆಡು/ಆಟ>ಒದ್ದಾಡು/ಟ>(ಬಾದಾಮಿ ಒಳನುಡಿ)

ಒದ್ದ್ಯಾಟ/ಡು>ವದ್ದ್ಯಾಟ/ಡು,

– ವದ್ದ್ಯಾಟ = ಚಟಪಡಿಸುವಿಕೆ, ತುಮುಲಕ್ಕೆ ಒಳಗಾಗುವಿಕೆ, (ಹೆಸರು ಪದ)

– ವದ್ದ್ಯಾಡು = ತಳಮಳಿಸು, ಗೊಂದಲದಲ್ಲಿ ಸಿಕ್ಕಿಕೊಳ್ಳು, (ಕೆಲಸ ಪದ)

ಈ ಸಂಗತಿಯನ್ನೇ ಇನ್ನಸ್ಟು ಅಚ್ಚುಕಟ್ಟಾಗಿ ವಿಂಗಡಿಸಿ, ಜೊತೆಗೆ ವಿಸ್ತರಿಸಿ, ಈ ರೀತಿ ವಿವರಿಸಬಹುದು.

ಉತ್ತರ ದ್ರುವದತ್ತ

ವಾಲಿದಾಗಿನ ಪಾತ್ರ,   'ತ್ಯಾಪಿ'

ಬಳಿಯುವ

ಕೆಲಸ,      ದಕ್ಶಿಣ ದ್ರುವದತ್ತ

ವಾಲಿದಾಗಿನ ಪಾತ್ರ,

ಒಳವು ಮಹಾಪ್ರಾಣಂಗಳ್ ವಿಳಸತ್ ಕರ್ನಾಟ ಭಾಷೆಯೊಳ್ –೨೫ – ನಾಮರೂಥಿ ಅಳಿಯದ ಪಕ್ಷಂ, ೬೨

ಕರ್ನಾಟಕದೊಳ್...... ಲಿಂಗಂ+

ಒಂಬತ್ತು ತೆರಂ, – ೯೮      ಪರಿವರ್ತಿಸವು ಕನ್ನಡದೊಳ್ ಉಳಿದ ಲಿಂಗಮ್ +

ಒಳವಾಗಿರ್ದುಂ, – ೧೦೧ ರೂಢಿವೆತ್ತ ಕರ್ನಾಟಕದೊಳ್, – ೧೬೬

ಸಪ್ತ ವಿಧ ವಿಭಕ್ತಿಗಳ್+ಅವು ಇರ್ಪುವು. – ೧೦೩

ದ್ವಿವಚನಮ್+ಉಚಿತದೆ ಬರ್ಕುಮ್, – ೧೦೪ ಲೋಕರೂಢಿ ಕಿಡದವೊಲ್, – ೨೬೬

ಗ್ರಾಮ್ಯರ್+ಅರಿಯದೆ+ಉಚ್ಚರಿಸುವರ್ ಕುಳಾಂತ ಬ್ರಮೆಯಿಂ. – ೩೮

(ಕಾಲದ ಒತ್ತಡಕ್ಕೆ ಸಿಲುಕಿ) ಇದು ದೇಸಿಯೊಳ್ ಚೆಲ್ವು, – ೧೭೦ ತದ್ಭವಂಗಳ ಲಕ್ಕಣಮನ್ ಕನ್ನಡಕ್ಕೆ ಲಕ್ಷಿಸಿ ಪೇಳ್ವೆನ್. – ೨೬೭

**೯. ಬದು ಮತ್ತು ಬೇಲಿ**

ಈ (ಎರಡು>)'ಯಾಡ್ಡು' ಪದಗಳ ತಿರುಳಿನ ಒಳಪದರನ್ನು ತಿಳಿಯುವಲ್ಲಿ ಒಂದು ಸೊಗಸು ಅಡಗಿದೆ. ಒಂದು ಹೊಲದ ಮೇರೆಯನ್ನು ಗುರುತಿಸಲು ಇರುವ ಗಡಿರೇಕೆಯನ್ನೇ ಸ್ಥೂಲವಾಗಿ 'ಬದು' ಎನ್ನುತ್ತೇವೆ. ಈ ರೀತಿ ಹೊಲದ ಗಡಿಯನ್ನು ಗುರುತಿಸುವ ಬದುಗುಂಟ (ಇರುವ) ದಟ್ಟ ಹಸಿರಿನಿಂದ ಕೂಡಿದ ಹೊದಿಕೆಯನ್ನೆ 'ಬೇಲಿ' ಎನ್ನಲಾಗುವುದು. ಒಂದು ಹೊಲದೊಳಗೆ ಬರುವ ಹಾಗೆ ಒಂದು ಮಾರಳತೆ ಇಲ್ಲವೆ ಅರ್ದ ಮಾರಳತೆ ಇರುವ ಹಾಗೆ, ಈ ಬೇಲಿ ಹರಡಿಕೊಂಡಿರುತ್ತಿತ್ತು. ಈ ಬೇಲಿ ಎನ್ನುವ ಮುಳ್ಳು-ಕಂಟಿಯ ಪೊದೆಯಲ್ಲಿ ನಾನಾ ತರಹದ ಸಣ್ಣ-ಪುಟ್ಟ (ಗಿಡ ಗಂಟಿಗಳಿಗೆ) ಬಳ್ಳಿ ರೂಪದ (ಉದಾ.ಗೆ ತೊಂಡೆ ಬಳ್ಳಿ) ಹಲವು ಗಿಡಗಳಿಗೆ, ನಾನಾ ಬಗೆಯ ಚಿಕ್ಕ-ಪುಟ್ಟ ಜೀವಿಗಳಿಗೆ ಸಮ್ರುದ್ದ ತಾಣವಾಗಿ (ಇಲಿ, ಹೆಗ್ಗಣ, ಹಾವು, ಓತಿಕಾಟ, ಎತ್ತರವಾದ ಹುತ್ತಗಳು, ಹುತ್ತದ ಸುತ್ತ ಹಲವು ಬಗೆಯ ಇರುವೆಗಳ ದಂಡು, ಇತ್ಯಾದಿ,) ಆಸರೆ ಪಡೆಯುತ್ತಿದ್ದವು. ಯಾವುದೆ ದನ-ಕರುಗಳು ಹೊಲದೊಳಗೆ ಬರಲು ಆಗದೆ, ಹೊಲದ ಬೆಳೆಯನ್ನು ಕಾಪಾಡಲಾಗುತ್ತಿತ್ತು.

ಈ ಬೇಲಿಗೆ ಸಮ್ಮಂದಿಸಿದಂತೆ ಜನಜನಿತ ನುಡಿಗಳು ಇವು,

– ಬೇಲಿಯೇ ಎದ್ದು ಹೊಲ ಮೇಯ್ದಂತೆ ! (ಏನೂ ಮಾಡಲಾಗದ ಹತಾಶ ಸ್ತಿತಿಯಲ್ಲಿ ಈ ನುಡಿ,)

– ಓತಿಕಾಟಕ್ಕೆ ಬೇಲಿನ ಸಾಕ್ಶಿ ಎಂಬಂತೆ ! (ಗಾದೆ ಮಾತು)

(ಕಳ್ಳನಿಗೆ ಬೆಂಬಲವಾಗಿ ಸುಳ್ಳುಗಾರನೊಬ್ಬ ಸಾಕ್ಶಿ ನುಡಿದಂತೆ.)

೧೦. ಇದು ಆ ಕಾಲದ ಬಾಶೆಯ ದಿಕ್ಕನ್ನೇ (ಕೇಶಿರಾಜನ ಅರಿವಿಗೆ ಬಾರದೆ) ಸೂಚಿಸಿದಂತಾಗಿದೆ.

# ಸರಳ ಸಂಸ್ಕೃತ ಛಂದ

ಬಿ.ಎಸ್. ಚಂದ್ರಶೇಖರ್

ಸಂಸ್ಕೃತದ ಸರಳವೂ ಸಾಮಾನ್ಯವೂ ಆದ 'ಶ್ಲೋಕ'ವೆಂಬ ಹೆಸರಿನ ಛಂದಸ್ಸು ಕುರಿತ ಈ ಲೇಖನ ಜನಪ್ರಿಯ ಶ್ಲೋಕದಿಂದಲೇ ಆರಂಭವಾಗಲಿ:

**ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ**
**ಪ್ರಸನ್ನವದನಂ ಧ್ಯಾಯೇತ್ ಸರ್ವ ವಿಘ್ನೋಪಶಾಂತಯೇ**

ಎಂಟು ಅಕ್ಷರದ ಎರಡೇ ಸಾಲು. ಒಂದೊಂದು ಸಾಲಿನಲ್ಲೂ ಹದಿನಾರು ಅಕ್ಷರಗಳು– ನಾಲ್ಕಕ್ಷರದ ನಾಲ್ಕು ಗಣಗಳು. ಪ್ರತಿ ಸಾಲಿನ ಕೊನೆಯ ನಾಲ್ಕು ಅಕ್ಷರಗಳು ಲಘು–ಗುರುಗಳ ಎರಡು ಜೋಡಿ ('ಲಗಂ ಲಗಂ'). ಶ್ಲೋಕವೊಂದನ್ನು ನಾಲ್ಕು ಸಾಲಾಗಿ ವಿಂಗಡಿಸಿಕೊಂಡು ಬರೆಯಲೂ ಸಾಧ್ಯ:

**ಗಂಗಾಪಾಪಂ ಶಶೀ ತಾಪಂ**
**ದೈನ್ಯಂ ಕಲ್ಪತರುಸ್ತಥಾ**
**ಪಾಪಂ ತಾಪಂ ಚ ದೈನ್ಯಂಚ**
**ಘ್ನಂತಿ ಸಂತೋ ಮಹಾಶಯಾಃ**

ಹೀಗೆ ಎಂಟೆಂಟು ಅಕ್ಷರದ ನಾಲ್ಕು ಸಾಲುಗಳಾಗಿ ಶ್ಲೋಕವನ್ನು ನೋಡಿದರೆ, ೧ ಮತ್ತು ೩ನೆಯ ಸಾಲುಗಳ ಅಂತ್ಯದಲ್ಲಿ ಯಾವ ವಿಶೇಷ ಲಕ್ಷಣವೂ ಕಾಣಲಾರದು. ೨ ಮತ್ತು ೪ನೆಯ ಸಾಲುಗಳ ಕೊನೆಯಲ್ಲಿ 'ಲಗಂ ಲಗಂ' (ಲಘು–ಗುರುಗಳ ಜೋಡಿ) ಬರುತ್ತದೆ.

ಶ್ಲೋಕವೆಂಬ ಛಂದಸ್ಸಿನ ಲಕ್ಷಣವನ್ನು ಇನ್ನೂ ಕೊಂಚ ಸ್ಪಷ್ಟವಾಗಿ ಹೇಳಬೇಕೆಂದರೆ– ಅದನ್ನು ನಾಲ್ಕು ಪಾದಗಳಾಗಿ ನೋಡಿದಾಗ–ಪ್ರತಿಪಾದದ ೫ನೇ ಅಕ್ಷರ ಲಘು, ೬ (ಮತ್ತು ೮ನೇ ಅಕ್ಷರ) ಗುರು. ೭ನೇ ಅಕ್ಷರ: ೧–೩ನೇ ಪಾದಗಳಲ್ಲಿ ಗುರು; ೨–೪ನೇ ಪಾದಗಳಲ್ಲಿ ಲಘು.

**ಶ್ಲೋಕೇ ಷಷ್ಠಂ ಗುರುಜ್ಞೇಯಂ**
**ಸರ್ವತ್ರ ಲಘುಪಂಚಕಂ**
**ದ್ವಿಚತುಃಪಾದಯೋರ್ಹ್ರಸ್ವಂ**
**ಸಪ್ತಮಂ ದೀರ್ಘಮನ್ಯಯೋಃ**

ಎಂದರೆ ೨-೪ನೇ ಪಾದಗಳ ೭ನೇ ಅಕ್ಷರ ಲಘು (ದ್ವಿಚತುಃಪಾದಯೋರ್ಹಸ್ವಂ ಸಪ್ತಮಂ); ಅನ್ಯ೧-೩ನೇ ಪಾದಗಳ ೭ನೇ ಅಕ್ಷರ ಗುರು (ಸಪ್ತಮಂ ದೀರ್ಘಮನ್ಯಯೋಃ).

ಆದರೆ ಅನೇಕ ಪದ್ಯಗಳಲ್ಲಿ ೧ ಅಥವಾ ೩ ನೇ ಪಾದದ ಏಳನೇ ಅಕ್ಷರವೂ ಲಘುವಾಗಿಯೇ ಇರುವುದು ಕಂಡುಬಂದಿದ್ದರಿಂದ 'ಶ್ಲೋಕ'ವು ಮೇಲಿನ ನಿಯಮವನ್ನು ಮೀರಿದಂತಾಯಿತು. ಇಂಥವುಗಳನ್ನು ಅಪವಾದವಾಗಿ ಕಾಣದೆ ಶ್ಲೋಕದ ಚೌಕಟ್ಟಿನಲ್ಲೇ ನೋಡಲು ಅನುವಾಗುವಂತೆ 'ಛಂದೋಮಂಜರಿ'ಯಲ್ಲಿ ಶ್ಲೋಕದ ಲಕ್ಷಣವನ್ನು ಕುರಿತು ಹೀಗೆ ಹೇಳಿದೆ:

**ಪಂಚಮಂ ಲಘು ಸರ್ವತ್ರ**
**ಸಪ್ತಮಂ ದ್ವಿಚತುರ್ಥಯೋಃ**
**ಗುರುಷಷ್ಠಂತು ಪಾದಾನಾಂ**
**ಶೇಷೇಷ್ವನಿಯಮೋ ಮತಃ**

ಈ ಲಕ್ಷಣಪದ್ಯದಂತೆ ಐದನೇ ಅಕ್ಷರ ಎಲ್ಲ ಪಾದಗಳಲ್ಲೂ ಲಘುವಾಗಿರಬೇಕು (ಪಂಚಮಂ ಲಘು ಸರ್ವತ್ರ); ೨ ಮತ್ತು ೪ರಲ್ಲಿ ಏಳನೇ ಅಕ್ಷರ ಲಘು ಆಗಿರಬೇಕು (ಸಪ್ತಮಂ ದ್ವಿಚತುರ್ಥಯೋಃ). ಆರನೇ ಅಕ್ಷರ ಮಾತ್ರ ಎಲ್ಲ ಪಾದಗಳಲ್ಲೂ ಗುರುವೇ ಆಗಿರಬೇಕು (ಗುರುಷಷ್ಠಂತು ಪಾದಾನಾಂ). ೧ ಮತ್ತು ೩ನೇ ಪಾದಗಳಲ್ಲಿ ಏಳನೇ ಅಕ್ಷರ ಲಘು ಅಥವಾ ಗುರು-ಯಾವುದು ಬೇಕಾದರೂ ಆಗಬಹುದು.

ವಾಲ್ಮೀಕಿ ರಾಮಾಯಣದ ಆರಂಭದಲ್ಲಿ ಶ್ಲೋಕದ ಸ್ವರೂಪವನ್ನು ತಿಳಿಸುವ ಒಂದು ಶ್ಲೋಕವೂ ಇದ್ದು ಅದರ ಮೊದಲನೇ ಸಾಲು 'ಪಾದಬದ್ಧೋಕ್ಷರಸಮಃ' ಎಂದಿದೆ. ಇಲ್ಲಿ ಆರನೆಯ ಅಕ್ಷರವು ('ರ') ಲಘುವಾಗಿದೆ! ಇದರಿಂದ ತಿಳಿದುಬರುವ ಅಂಶವೆಂದರೆ- ಶ್ಲೋಕವು ಸಂಸ್ಕೃತದ ಅಕ್ಷರವೃತ್ತಗಳಂತೆ ತೀರ ಬಿಗಿಯಾದ ಬಂಧವಲ್ಲ, ಸಡಿಲವಾದ ಕಾವ್ಯ ಬಂಧ. ಅಂತಲೇ ಅದು ಸರಳವೂ, ಸುಗಮವೂ ಆಗಿ ಜನಪ್ರಿಯವಾಗಿದೆ.

ಅಂದಹಾಗೆ ಈ 'ಛಂದಸ್' ಶಬ್ದದ ಮೂಲ 'ಛದ್' ಎಂಬ (ಸಂಸ್ಕೃತ) ಧಾತು. 'ಛದ್ ಛಾದನೇ' (ಹೊದ್ದಿಸಿರುವುದು): ಛಂದಸ್ಸು ಎಂಬುದು ಮಂತ್ರಕ್ಕೆ ಆವರಣ, ಹೊದ್ದಿಕೆ, ಪುಸ್ತಕಕ್ಕೆ ರಕ್ಷಾಕವಚವಿದ್ದಂತೆ. ಇನ್ನೊಂದು ನಿರ್ವಚನದ ಪ್ರಕಾರ 'ಛದಿ ಆಹ್ಲಾದನೇ' (ಆನಂದವನ್ನು ನೀಡುವಂಥದು). ಈ ಎರಡೂ ಅರ್ಥಗಳು ಛಂದಸ್ಸಿಗೆ ಅನ್ವಯವಾಗುತ್ತದೆ.

ಸಂಸ್ಕೃತ ಛಂದಸ್ಸು ಮೂಲತಃ ಅಕ್ಷರ ಛಂದಸ್ಸು. ವೈದಿಕ ಛಂದಸ್ಸು ಸಂಸ್ಕೃತ ಛಂದಸ್ಸಿನ ಆರಂಭ. ಪುರಾಣ, ಶಾಸ್ತ್ರ,ಮಹಾಕಾವ್ಯ - ಹೀಗೆ ಎಲ್ಲೆಲ್ಲೂ ಶ್ಲೋಕ ವಿಜೃಂಭಿಸಿದೆ. ರಾಮಾಯಣವಂತೂ ಶೋಕವು ಶ್ಲೋಕವಾಗಿ ಪರಿವರ್ತಿತವಾದಾದ ರಚಿತವಾದ ಕತೆಯೇ ತಾನೆ? ನಿಷಾದನ ಕೃತ್ಯದಿಂದ ವಿಷಾದಗೊಂಡ ವಾಲ್ಮೀಕಿ ಹೇಳಿದ್ದಾದರೂ ಏನು?

**ಮಾ ನಿಷಾದ ಪ್ರತಿಷ್ಠಾಂತ್ವಮಗಮಃ ಶಾಶ್ವತೀಃ ಸಮಾಃ**
**ಯತ್ಕ್ರೌಂಚ ಮಿಥುನಾದೇಕಮವಧೀಃ ಕಾಮಮೋಹಿತಂ**

(ನಾಲ್ಕು ಸಾಲುಗಳಾಗಿ ವಿಂಗಡಿಸಿ ನೋಡಿದಾಗ ಮೇಲೆ ಹೇಳಿದ ಶ್ಲೋಕದ ಲಕ್ಷಣಗಳು ಇಲ್ಲಿರುವುದನ್ನು ಕಾಣಬಹುದು; ಆದರೆ ೮ನೇ ಅಕ್ಷರ ಇಲ್ಲಿ ಗುರುವಾಗಿಲ್ಲ.) ಈ ನವೀನ ಛಂದದಿಂದ ಪುಳಕಿತನಾದ ವಾಲ್ಮೀಕಿ ಇದೇ ಛಂದದಲ್ಲಿ ಕಾವ್ಯ ರಚಿಸಿದ. ಶೋಕವು ಶ್ಲೋಕವಾಗಿ ಪರಿವರ್ತಿತವಾಗಿ ರಾಮಾಯಣದ ಸೃಷ್ಟಿಗೆ ನಾಂದಿಯಾಯಿತು!

ರಾಮಾಯಣದ ಮೂಲ 'ಶ್ಲೋಕ' ಸರಿ. ಆದರೆ ಅದರ ಪ್ರತಿಲೋಮ ವಾಕ್ಯ (converse) ಸತ್ಯವಲ್ಲ! ಅರ್ಥಾತ್, ಶ್ಲೋಕದ ಮೂಲ ರಾಮಾಯಣವಲ್ಲ. ಸ್ವಚ್ಛಂದವಾದ ವೈದಿಕ ಛಂದಸ್ಸಿನಲ್ಲಿ ಗಾಯತ್ರಿ, ತ್ರಿಷ್ಟುಭ್ ಮತ್ತು ಜಗತೀ – ಈ ಮೂರು ಮುಖ್ಯವಾದವು. ಗಾಯತ್ರಿ ಒಟ್ಟು ೨೪ ಅಕ್ಷರಗಳ ಒಂದು ಛಂದಸ್ಸು (೮*೩ ಅಥವಾ ೬*೪), ತ್ರಿಷ್ಟುಭ್ ೪೪ ಅಕ್ಷರ (೧೧*೪), ತ್ರಿಷ್ಟುಭ್ ೪೮ ಅಕ್ಷರ (೮*೬, ಇತ್ಯಾದಿ). ಇವಲ್ಲದೆ ೩೨ ಅಕ್ಷರಗಳುಳ್ಳ 'ಅನುಷ್ಟುಭ್' ಕೂಡ ವಿಪುಲವಾಗಿಯೇ ಇದೆ.

ಈಗ ಗಾಯತ್ರಿಯನ್ನೇ ನೋಡೋಣ. ಅದು ೮ ಅಕ್ಷರಗಳ ೩ ಪಾದಗಳುಳ್ಳ ಛಂದಸ್ಸು; ೮*೩ = ೨೪ ಅಕ್ಷರಗಳು. ಗಾಯತ್ರಿಯನ್ನು ೪ ಪಾದಗಳಿಗೆ ವಿಸ್ತರಿಸಿದಾಗ ಬಂದದ್ದೇ 'ಅನುಷ್ಟುಭ್'; ೮*೪ = ೩೨ ಅಕ್ಷರಗಳು.

**ತತ್ಪುರುಷಾಯ ವಿದ್ಮಹೇ**
**ಮಹಾದೇವಾಯ ಧೀಮಹಿ**
**ತನ್ನೋ ರುದ್ರಃ ಪ್ರಚೋದಯಾತ್**

ಇದು ೩ ಸಾಲಿನ ಗಾಯತ್ರೀ. ಪ್ರತಿ ಸಾಲಿನಲ್ಲಿಯೂ ಎಂಟೆಂಟು ಅಕ್ಷರಗಳಿವೆ (ಕೊನೆಯಲ್ಲಿರುವ ಅರ್ಧಾಕ್ಷರ ಹಿಂದಿನ ಅಕ್ಷರಕ್ಕೆ ಸೇರುತ್ತದೆ; ಅದಕ್ಕೆ ಮಾತ್ರೆಯಿಲ್ಲ. ಹೀಗಾಗಿ 'ಯಾತ್' ಎಂಬುದನ್ನು ಒಂದೇ ಅಕ್ಷರವೆಂದು ಗಣಿಸಬೇಕು). ಇಲ್ಲಿ ಸಾಲುಗಳ ಅಂತ್ಯದಲ್ಲಿ 'ಲಗಂ' (ಲಘು–ಗುರು) ಜೋಡಿಗಳಿವೆ ಯವಿ–ದ್ಮಹೇ; ಯಧೀ–ಮಹೇ; ಪ್ರಚೋ–ದಯಾತ್). ಇದೇ ರೀತಿಯ ಇನ್ನೊಂದು ಸಾಲು ಸೇರಿದರ 'ಅನುಷ್ಟುಭ್' ಛಂದಸ್ಸು. ಋಗ್ವೇದದ ಶೇ.೨೫ರಷ್ಟು ಋಕ್ಕುಗಳು ಗಾಯತ್ರಿಯಲ್ಲೂ, ಅದಕ್ಕೂ ಹೆಚ್ಚಿನ ಸಂಖ್ಯೆಯವು ತ್ರಿಷ್ಟುಭ್ ನಲ್ಲೂ ಇವೆ. ಸುಮಾರು ೮೬೦ ಋಕ್ಕುಗಳು ಅನುಷ್ಟುಭ್ ನಲ್ಲಿವೆ. ಪುರುಷಸೂಕ್ತ, ಶ್ರೀಸೂಕ್ತ, ಈಶಾವಾಸ್ಯ ಉಪನಿಷತ್ತು ಮುಂತಾದವು ಅನುಷ್ಟುಭ್ ಛಂದಸ್ಸು ಬಳಕೆಯಾಗಿರುವ ವೈದಿಕ ಸಾಹಿತ್ಯಭಾಗಗಳು. ಪುರುಷ ಸೂಕ್ತದ ಈ ಸಾಲುಗಳನ್ನೇ ಅನುಷ್ಟುಭ್ ಛಂದಸ್ಸಿಗೆ ಉದಾಹರಣೆಯಾಗಿ ಕೊಡಬಹುದು:

**ತಸ್ಮಾದ್ವಿರಾಡಜಾಯತ**
**ವಿರಾಜೋ ಅಧಿಪೂರುಷಃ**
**ಸ ಜಾತೋ ಅತ್ಯರಿಚ್ಯತ**
**ಪಶ್ಚಾದ್ಭೂಮಿಮಥೋ ಪುರಃ**

ಸಾಲುಗಳ ಅಂತ್ಯದಲ್ಲಿ 'ಲಗಂ' (ಲಘು–ಗುರು) ಜೋಡಿಗಳನ್ನು ಗಮನಿಸಿ:

ಡಜಾ-ಯತ; ಧಿಪೂ-ರುಷಃ; ತ್ಯರಿ-ಚ್ಚತ; ಮಥೋ-ಪುರಃ; ಪಾದಾಂತ್ಯದ ಲಘು ಗುರುವಾಗುತ್ತದೆ).

ಹೀಗೆ 'ಅನುಷ್ಟುಭ್'ನ ಪ್ರತಿಪಾದದ ಅಂತ್ಯದಲ್ಲಿ ಇರುತ್ತಿದ್ದ 'ಲಗಂ' ಜೋಡಿಗಳು ೨ ಮತ್ತು ೪ನೇ ಪಾದಗಳಿಗೆ ಸೀಮಿತವಾದಾಗ ಉದ್ಭವವಾದದ್ದೇ 'ಶ್ಲೋಕ'! ೧-೩ ರ ಅಂತ್ಯದಲ್ಲಿ ವಿಶೇಷವೇನೂ ಇಲ್ಲದ್ದರಿಂದ ೪ ಪಾದಗಳನ್ನು ೨ ಪಾದಗಳಾಗಿ ಮಾಡಿಕೊಳ್ಳುವುದು ಸಹಜವಾಯಿತು. "ಖಿಜ ಗಠಿಚೆಟ್ಟುಚೆಜುಛಿ 'ಂಟಿಣಘಣಣಾಠಿ' ঀ ತಿಜಟಟ ಠಟಿ ಣಖಜ ತಿಚಿಥಿ ಠಣ ಣಖಜ ಇಠಿಛಿ 'ಖಟಠಇಚಿ' ..!" ಎಂದು ಮದ್ರಾಸಿನ ವಿದ್ವಾಂಸರಾದ ಗೋಪಾಲಕೃಷ್ಣ ಐಯರ್ ಹೇಳಿದ್ದು ಇದನ್ನೇ.

ಹೀಗೆ ಶ್ಲೋಕದ ಮೂಲವೇ 'ಅನುಷ್ಟುಭ್' ಛಂದಸ್ಸು. ಅನುಷ್ಟುಭ್ ವೈದಿಕ ಛಂದಸ್ಸಾದರೆ ಶ್ಲೋಕವು ಪುರಾಣದ, ಮಹಾಕಾವ್ಯದ ಛಂದಸ್ಸಾಯಿತು. 'ಆದಿತ್ಯಹೃದಯ'ದಲ್ಲಿ ಈ ಒಂದು ಕಾವ್ಯಮಯವಾದ ಶ್ಲೋಕವಿದೆ:

ತಪ್ತ ಚಾಮೀಕರಾಭಾಯ ವಹ್ನಯೇ ವಿಶ್ವಕರ್ಮಣೇ
ನಮಸ್ತಮೋಭಿನಿಘ್ನಾಯ ರವಯೇ ಲೋಕಸಾಕ್ಷಿಣೇ [ವಾಲ್ಮೀಕಿ ರಾಮಾಯಣ, ಯುದ್ಧಕಾಂಡ]

ಭಗವದ್ಗೀತೆಯ ಛಂದಸ್ಸೂ ಶ್ಲೋಕವೇ. ಈ ಶ್ಲೋಕಕ್ಕೆ ಪ್ರಸ್ತಾರ ಹಾಕಿ ಲಕ್ಷಣಗಳನ್ನು ಪರಿಶೀಲಿಸಿಕೊಳ್ಳಬಹುದು:

ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ
ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ [ಭಗವದ್ಗೀತೆ ೨-೨೩]

ಇನ್ನು ವಾಗರ್ಥಗಳ ಅದ್ವೈತವನ್ನು ಮನಗಂಡ ಕಾಳಿದಾಸನ ಪದ್ಯ ಯಾರಿಗೆ ಗೊತ್ತಿಲ್ಲ?

ವಾಗರ್ಥಾವಿವ ಸಂಪೃಕ್ತೌ ವಾಗರ್ಥಪ್ರತಿಪತ್ತಯೇ
ಜಗತಃ ಪಿತರೌ ವಂದೇ ಪಾರ್ವತೀ ಪರಮೇಶ್ವರೌ [ಕುಮಾರಸಂಭವ]

ಸಂಸ್ಕೃತದಲ್ಲಿ ಶ್ಲೋಕಗಳು ಅಪಾರ. ಪುರಾಣ, ಶಾಸ್ತ್ರಗ್ರಂಥಗಳು, ರಾಮಾಯಣ, ಮಹಾಭಾರತಗಳು ಶ್ಲೋಕದಿಂದ ತುಂಬಿವೆ. ಇಂದೂ ಪ್ರಚಲಿತವಾಗಿರುವ ಸ್ತೋತ್ರ ಸಾಹಿತ್ಯ, ವೈದಿಕ ಪೂಜಾವಿಧಿಗಳಲ್ಲಿ, ಅಮರವೆನಿಸಿರುವ ಸುಭಾಷಿತಗಳಲ್ಲಿ ವಿಜೃಂಭಿಸುತ್ತಿರುವುದೂ ಶ್ಲೋಕವೇ!

'ಸಂಸ್ಕೃತದ್ದಾಯಿತು, ಕನ್ನಡದಲ್ಲಿ ಶ್ಲೋಕವಿದೆಯೇ?' ಎಂಬ ಪ್ರಶ್ನೆ ಸಹಜ. ಕನ್ನಡ ಕವಿಗಳು ಲಯಬದ್ಧವಾದ ಸಂಸ್ಕೃತದ ಅಕ್ಷರವೃತ್ತಗಳಿಗೆ ಮಾರುಹೋದರು. ಉತ್ಪಲ-ಚಂಪಕದ ಮಾಲೆಗಳನ್ನು ಕಟ್ಟಿದರು. ಶಾರ್ದೂಲ-ಮತ್ತೇಭಗಳಂತೆ ಕ್ರೀಡಿಸಿದರು (ಕನ್ನಡದ್ದೇ ಆದ ತ್ರಿಪದಿ, ಚೌಪದಿ, ಸಾಂಗತ್ಯ, ಷಟ್ಪದಿ ಮುಂತಾದವುಗಳಂತೂ ಇದ್ದೇ ಇವೆ). ಆದರೆ ಅನುಷ್ಟುಭ್ ಕನ್ನಡಕ್ಕೆ ಇಷ್ಟವಾಗಲಿಲ್ಲ. ಪಾದಾಂತ್ಯಗಳಲ್ಲಿ 'ಲಗಂ' ಬರುವುದು ಕಷ್ಟವಾಯ್ತು, ಬಂದದ್ದೂ ಹಿತವಾಗಿ ಕಾಣಲಿಲ್ಲ. ಇದಕ್ಕೆ ವಿದ್ವಾಂಸರು

ಕಾರಣ ಕೊಟ್ಟಿದ್ದಾರೆ. ಕನ್ನಡದಲ್ಲಿ ಕಡ್ಡಾಯವಾಗಿದ್ದ ಆದಿಪ್ರಾಸವವೂ ಒಂದು ಕಾರಣ. ಲಘು-ಗುರು (ಲಗಂ) ಆರಂಭದ ಪದಗಳು ಕನ್ನಡದಲ್ಲಿ ಅಷ್ಟಿಲ್ಲ. ಲಗಂ ಬರುವ ಜಗಣ (ಜಭಾನ=ಲಘು-ಗುರು-ಲಘು), ಯಗಣ (ಯಮಾತಾ=ಲಘು-ಗುರು-ಗುರು) ಇವೂ ಕನ್ನಡದಲ್ಲಿ ವಿರಳ. ಕನ್ನಡಿಗರ ಪ್ರೀತಿಯ ಭಾಮಿನಿಯಲ್ಲಿ ಜಗಣ ಬಂದರೆ ದೋಷ. 'ಲಗಂ' ಕನ್ನಡದ ಓದಿಗೆ ಒಗ್ಗಿಲ್ಲ, ಹಾಡಿಗೂ ಜಗ್ಗಿಲ್ಲ. ಸಂಸ್ಕೃತದವರು ಶ್ಲೋಕವನ್ನು ಮೆರೆಸಿದ ಹಾಗೆ ಕನ್ನಡದವರು 'ಕಂದ'ನನ್ನು ಎತ್ತಿ ಆಡಿಸಿದರು. ಒಟ್ಟಾರೆ ಕನ್ನಡದ ಜಾಯಮಾನಕ್ಕೆ 'ಶ್ಲೋಕ'ವೆಂಬ ಛಂದವು ಅಳವಡಲಿಲ್ಲ.

ಕವಿರಾಜಮಾರ್ಗದ ಎರಡನೇ ಪರಿಚ್ಛೇದದಲ್ಲಿ ೨೮ ಶ್ಲೋಕಗಳಿವೆ. ಅವುಗಳಲ್ಲೊಂದು:

**ಅಜೇಯಂ ಪೋಲ್ಕುಮಾಮತ್ತಗಜಂ ವಾರಿಜನಾಭನಂ**
**ತ್ರಿಜಗನ್ಮದನಂ ಮತ್ತಂ ನಿಜ ನೀಳ ಘನಾಭನಂ**

ದುಷ್ಕರಕಾವ್ಯ ಅಥವಾ ಚಿತ್ರಕಾವ್ಯಗಳಿಗೆ ಸಂಬಂಧಿಸಿದಂತೆ ಇವನ್ನು ಕಾಣಿಸಲಾಗಿರುವುದರಿಂದ ಇದು ಕನ್ನಡಕ್ಕೆ ಸಹಜವಾಗಿರದೆ ಕೃತಕತೆಯಿಂದ ಕೂಡಿದ್ದೆಂಬುದೂ ಸ್ಪಷ್ಟವಾಗುತ್ತದೆ. ಪ್ರಾಚೀನ ಕನ್ನಡ ಕವಿಗಳು ಕನ್ನಡದ ಶ್ಲೋಕಗಳನ್ನು ಅಪರೂಪವಾಗಿ ತಮ್ಮ ಕೃತಿಗಳಲ್ಲಿ ಕಾಣಿಸಿದ್ದಾರೆ. ಪಂಪನು ಶ್ಲೋಕದ ತಂಟೆಗೇ ಹೋಗಿಲ್ಲ. ಛಂದೋಕಾರರ ಪೈಕಿ ಶ್ಲೋಕದ ಲಕ್ಷಣವನ್ನು ಹೇಳಿರುವವನು ನಾಗವರ್ಮನೊಬ್ಬನೇ:

**ಅಯ್ದಾರೆಂಬೆರಡೆಡೆಯೊಳ**
**ಮೆಯ್ದುಗೆ ಲಘುಗುರು ಕರಾಬ್ಧಿ ಪದ ಸಪ್ತಕದೊಳ್**
**ಮೆಯ್ದೋರುಗೆ ಲಘುಲಕ್ಷಣ**
**ಮೆಯ್ದುಗೆ ಸಂಪೂರ್ಣಮಪ್ಪಷ್ಟವರ್ಣಂ ಶ್ಲೋಕಂ**

(ಕೆಲವು ಛಂದೋಕಾರರು ಛಂದಸ್ಸಿನ ಲಕ್ಷಣ ಪದ್ಯಗಳನ್ನು ಆಯಾ ಛಂದಸ್ಸುಗಳಲ್ಲೇ ಹೆಣೆದಿದ್ದಾರೆ; ಆದರೆ ಮೇಲಿನ ಲಕ್ಷಣ ಪದ್ಯವು ಕಂದದಲ್ಲಿದೆ.)

ಹೊಸಗನ್ನಡ ಕೃತಿಗಳಲ್ಲಿ ಕೂಡ ಶ್ಲೋಕ ಇಲ್ಲವೆಂಬಷ್ಟು ಕಡಿಮೆ. ಮುಳಿಯ ತಿಮ್ಮಪ್ಪಯ್ಯನವರು ರಚಿಸಿದ ಒಂದು ಕನ್ನಡದ ಶ್ಲೋಕ ಹೀಗಿದೆ:

**ಹಗಲೂ ಇರುಳೂ ತಾವು ತಿರುಗುತ್ತಿರುವಂದದಿ**
**ಸುಖವೂ ದುಃಖವೂ ಮೇಲೆ ಮೇಲೆ ಬಪ್ಪುದು ಮಂದಿಗೆ**

(ಇಲ್ಲಿ ಪಾದಾಂತ್ಯದ ಅಕ್ಷರಗಳು ಲಘುವಾಗಿದ್ದರೂ ಅವನ್ನು ಗುರುವೆಂದು ಪರಿಗಣಿಸಲಾಗುವುದು. ಆದ್ದರಿಂದ ಇದು ಶ್ಲೋಕವಾಗುತ್ತದೆ.)

ಪು.ತಿ.ನರಸಿಂಹಾಚಾರ್ಯರ 'ಅನುಷ್ಟುಪ್ ವಿಲಾಸ' ಎಂಬ ಕವಿತೆ ಛಂದೋಪ್ರಯೋಗದ ದೃಷ್ಟಿಯಿಂದ ಗಮನಾರ್ಹ. ಅದರಲ್ಲಿರುವ ಶ್ಲೋಕಗಳಲ್ಲಿ ಎರಡು ಹೀಗಿವೆ:

**'ಗಂಡನೋ ಮಿಂಡನೋ ಕಾಣೆಂ ಚೋರರ್ಗೇತರ ಬಂಧನಂ**
**ಬೇಹರಂ ತೀರ್ವ ಮಧ್ಯಾಹ್ನಮಾನೆನ್ನಾಪಣಕೊರ್ವನೆ'**

**.'ಊನಮಿಲ್ಲ ಸತೀತ್ವಕ್ಕೆ ಸ್ಪರ್ಶಮಾಕಸ್ಮಿಕಂ ಪ್ರಭು**
**ಎಲ್ಲ ತಪ್ಪಿಂಗುಮೊಪ್ಪುಂಟು ಸರ್ವಪಾಪಹರಂ ಧನಂ'**
**ಇನ್ನೊಂದು ಕವನದಲ್ಲಿ ಬಂದಿರುವ ಶ್ಲೋಕ:**
**'ನವಭಾರತ ನಿರ್ಮಾತಂ ಗಾಂಧೀ ಖ್ಯಾತಂ ಮಹೋನ್ನತಂ**
**ಬರ್ಕೆ ಇಂದೆಲ್ಲ ಮನಕಂ ಚಾರು ಹಸ್ತಂ ಶುಚಿಸ್ಥಿತಂ'**
**[ಗಾಂಧೀಸ್ತವ]**

ಅವರದೇ ಮತ್ತೊಂದು ಸಾಲು: 'ವಾಮಾ ನಿತಂಬ ಸಾನ್ನಿಧ್ಯಂ ಕಬರೀಪುಷ್ಪ ವಿಭ್ರಮಂ'. ಇವು ಶ್ಲೋಕಗಳೇ ನಿಜ; ಆದರೆ ಕನ್ನಡದ್ದೆನ್ನಬಹುದೇ? ಶ್ಲೋಕವು ಸಂಸ್ಕೃತಕ್ಕೇ ಲಾಯಖ್ಖು ಎಂದು ಪು.ತಿ.ನ. ಪ್ರಯೋಗ ಸ್ಪಷ್ಟೀಕರಣ ನೀಡಿರುವಂತಿದೆ.

ಶ್ಲೋಕ ಕುರಿತ ಲೇಖನದ ಸಮಾಪ್ತಿಯೂ ಶ್ಲೋಕದಿಂದಲೇ ಆಗಬಾರದೇಕೆ? ಭವಭೂತಿಯ ಈ ಶ್ಲೋಕದಿಂದ ಮಂಗಳ:

**ಇದಂ ಕವಿಭ್ಯಃ ಪೂರ್ವೇಭ್ಯಃ ನಮೋವಾಕಂ ಪ್ರಶಾಸ್ಮಹೇ**
**ವಂದೇಮಹಿ ಚ ತಾಂ ವಾಣೀಂ ಅಮೃತಾಂ ಆತ್ಮನಃ ಕಲಾಂ**
**[ಉತ್ತರರಾಮ ಚರಿತೆ]**

[ತಾತ್ಪರ್ಯ: ಪುರಾತನ ಕವಿವರೇಣ್ಯರಿಗೂ ಪರಮಾತ್ಮನ ಅಂಶಳೂ ನಿತ್ಯಳೂ ಆಗಿರುವ ವಾಣಿಗೂ ಇದೋ ನಮನ!]

**ಗ್ರಂಥಋಣ:**

೧. ಕನ್ನಡ ಛಂದಸ್ಸಿನ ಚರಿತ್ರೆ ಸಂಪುಟ ೧ ಮತ್ತು ೨: ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ.
೨. ಸಂಸ್ಕೃತ ಸಾಹಿತ್ಯ ಪರಂಪರೆ: ಡಾ.ಎಂ.ಶಿವಕುಮಾರ ಸ್ವಾಮಿ
೩. ಪುರುಷ ಸೂಕ್ತ, ಶ್ರೀ ಸೂಕ್ತ– ಶ್ರೀ ಬನ್ನಂಜೆ ಗೋವಿಂದಾಚಾರ್ಯ
೪. ಸಂಸ್ಕೃತ ಲೋಕೋಕ್ತಿಗಳು ಮತ್ತು ಕವಿಸೂಕ್ತಿಗಳು: ಸಂ.ಎಚ್.ಎಸ್. ಅಚ್ಚಪ್ಪ
೫. ಪು.ತಿ.ನ. ಅವರ ಸಮಗ್ರಕಾವ್ಯ
೬. ಸಸ್ವರ ಮಹಾನ್ಯಾಸಾದಿ ಮಂತ್ರಾಃ (ಅನುವಾದ):ವಿದ್ವಾನ್ ಶೇಷಾಚಲ ಶರ್ಮಾ

# ಪಿಕಿಳಿಹಾಳ

ಆಜ್ಜಪ್ಪ ಬಾಬು ಕಂಬಾರ

ನಮ್ಮ ಭಾರತ ಭೂಮಿಯಲ್ಲಿ ಅನೇಕ ಐತಿಹಾಸಿಕ ಸ್ಥಳಗಳು ಇವೆ. ಈ ಸ್ಥಳಗಳು ಅನೇಕ ಚಾರಿತ್ರಿಕ ಅಂಶಗಳ ಆಧಾರಗಳ ಹಿನ್ನೆಲೆಯಲ್ಲಿ ವಿಭಾಗಿಸಲಾಗಿದೆ. ಪ್ರಾಗೈತಿಹಾಸಿಕ, ಹಳೆಶಿಲಾಯುಗ, ಬೃಹತ್ ಶಿಲಾಯುಗ,ಸೂಕ್ಷ್ಮಶಿಲಾಯುಗ ಮತ್ತು ನೂತನಶಿಲಾಯುಗದ ಕಾಲಗಳಿಗೆ ಸಂಬಂಧಿಸಿದ ಸ್ಥಳಗಳು ಇವೆ. ಗುಹೆಗಳು, ಗುಡ್ಡಗಳು (ಮರಡಿಗಳು),ಬೆಟ್ಟಗಳು, ಊರುಗಳು, ನದಿಯ ದಂಡೆಗಳು, ಕಲ್ಲಾಸರೆಗಳು ಆದಿಮಾನವನ ವಸತಿಗಳು ಮತ್ತು ನೆಲೆಗಳನ್ನು ಬಚ್ಚಿಟ್ಟುಕೊಂಡಿರುವ ಕುರುಹುಗಳ ಗಣಿಗಳಾಗಿವೆ. ಕರ್ನಾಟಕ ನಾಡಿನಲ್ಲಿ ಆದಿಮಾನವನ ವಸತಿ ಮತ್ತು ನೆಲೆಗಳು ಬಹಳಷ್ಟು ಇವೆ. ಅವುಗಳಲ್ಲಿ ಗುಹೆಗಳು, ಗೋರಿಗಳು, ಗುಡ್ಡಗಳು (ಮರಡಿಗಳು), ಬೆಟ್ಟಗಳು, ಊರುಗಳು, ನದಿಯ ದಂಡೆಗಳು, ಬಂಡೆಗಳು, ಕಲ್ಲಾಸರೆಗಳು ಪ್ರಮುಖ ನೆಲೆಗಳಾಗಿವೆ. ಆದಿಮಾನವನು ಮಹತ್ವದ ಐತಿಹಾಸಿಕ ನೆಲಗಳು ಗುಹೆಗಳು, ಮರಡಿಗಳು ಮತ್ತು ಊರುಗಳು ಪ್ರಮುಖ ಸ್ಥಳಗಳ ಎಂದು ಹೇಳಬಹುದು. ಊರುಗಳು ಆದಿ ಮಾನವನು ವಾಸಿಸಿದ ಅನೇಕ ಕುರುಹುಗಳನ್ನು ತನ್ನ ಮಡಲಲ್ಲಿ ಬಚ್ಚಿಟ್ಟುಕೊಂಡಿರುವ ಪ್ರದೇಶಗಳಾಗಿವೆ. ಸನ್ನತಿ, ಮುದಗಲ್ಲ, ರಾಜನ್‌ಕೊಳೂರು, ಪಾಲ್ಕಿಗುಂಡು, ಗವಿಮಠ, ಬಳಿಚಕ್ರ, ಹಿರೆಬೆಣ್ಣಕಲ್ಲುಮತ್ತು ಪಿಕಿಳಿಹಾಳ ಇತ್ಯಾದಿ ಅನೇಕ ಊರುಗಳು ಆದಿಮಾನವನು ವಾಸಿಸಿದ ಅನೇಕ ಕುರುಹುಗಳನ್ನು ಹೊಂದಿರುವ ಸ್ಥಳಗಳಾಗಿವೆ.ಮಾನವನು ಈ ಊರಗಳಲ್ಲಿ ಬಿಡಿಸಿದ ಚಾರಿತ್ರಿಕ ಚಿತ್ರಗಳು, ವೈಜ್ಞಾನಿಕ ಅಂಶಗಳು ಮತ್ತು ಭೌದ್ಧಿಕ ಅಂಶಗಳ ಆಧಾರಗಳ ಹಿನ್ನೆಲೆಯಲ್ಲಿ ಉನ್ನತವಾಗಿವೆ. ಪಿಕಿಳಿಹಾಳವು ಐತಿಹಾಸಿಕ ಸ್ಥಳಗಳಿಗೆ ಸೇರಿದ ಅನೇಕ ಗುಹೆಗಳು, ಬೆಟ್ಟಗಳು ಮತ್ತು ಮರಡಿಗಳನ್ನು ಹೊಂದಿರುವ ಬಹುಮುಖ್ಯ ಹಳ್ಳಿಯಾಗಿದೆ. ಪಿಕಿಳಿಹಾಳ ಎಂಬ ಹಳ್ಳಿ ರಾಯಚೂರು ಜಿಲ್ಲೆಯ



ಲಿಂಗಸ್ಗೂರು ತಾಲ್ಲೂಕಿನ ಮುದಗಲ್ಲ ಮತ್ತು ತಾವರಗೇರಿ ರಸ್ತೆಯ ಮಧ್ಯ ಬರುವ ಐತಿಹಾಸಿಕ ಸ್ಥಳವಾಗಿದೆ. ಮುದಗಲ್ಲ ಐತಿಹಾಸಿಕ ಗ್ರಾಮದೊಂದಿಗೆ ಪಿಕಳಿಹಾಳ ಗ್ರಾಮವು ತನ್ನ ಸೀಮೆಯನ್ನು ಹಂಚಿಕೊಂಡಿದೆ. ಪಿಕಳಿಹಾಳ ಗ್ರಾಮದ ಚಾರಿತ್ರಿಕ ಹಿನ್ನಲೆಯನ್ನು ಮತ್ತು ಮಾನವನ ಜನವಸತಿಯ ಕುರುಹುಗಳನ್ನು ಅನೇಕ ಅಧ್ಯಯನಗಳು ತೋರಿಸಿವೆ. ನನ್ನ ಸಹೋದ್ಯೋಗಿಗಳಾದ ಡಾ. ಮಹಾದೇವಸ್ವಾಮಿ, ಮೊಹ್ಮದ ಹುಸೇನ ಮತ್ತು ನಾನು ಈ ಪ್ರದೇಶದ ಕ್ಷೇತ್ರ ಕಾರ್ಯಕ್ಕೆ ಹೋಗಿರುವ ಸಂದರ್ಭದಲ್ಲಿ ಸಿಕ್ಕ ದಾಖಲೆಗಳು ಮತ್ತು ವಕ್ತೃ ನೀಡಿದ ಅಂಶಗಳನ್ನು ಆಧಾರಿಸಿ ಪಿಕಳಿಹಾಳ ಐತಿಹಾಸಿಕ ಗ್ರಾಮವನ್ನು ಕಟ್ಟಿಕೊಡುವುದು ಈ ಲೇಖನದ ಉದ್ದೇಶವಾಗಿದೆ.

ಪಿಕಳಿಹಾಳ ಗ್ರಾಮದಲ್ಲಿ ಆದಿಮಾನವ ಬಳಸಿರುವ ಅನೇಕ ದಾಖಲೆಗಳು ಲಭ್ಯವಾಗಿವೆ. ಆದಿಮಾನವ ವಾಸಿಸಿದ ಗುಹೆಗಳು, ಬೊಕಿ ಚೂರುಗಳು (ಮಡಿಕೆ ಚೂರುಗಳು), ಕಬ್ಬಿಣದ ಚೂರುಗಳು, ಮಾನವನ ಚಿತ್ರಗಳು, ಪ್ರಾಣಿ ಚಿತ್ರಗಳು, ಜನಪದ ಕ್ರೀಡೆಯ ಮೈದಾನಗಳು, ಮನೆಯ ಕಟ್ಟಡಗಳು, ಮನರಂಜನೆಯ ಸಂಗೀತ ಕಲೆಗಳು, ಚಿರತೆ ಬೋನುಗಳು, ನೀರಿನ ಕೊಡಪನಗಳು, ಬೇಟೆಯ ಸಂಸ್ಕೃತಿಯ ಅಂಶಗಳು, ಕೆಂಪು ಬಣ್ಣ ಉತ್ಪಾದಿಸುವ ವೈಜ್ಞಾನಿಕ ಅಂಶಗಳು, ವ್ಯವಹಾರಿಕ ಅಂಶಗಳು ಹೊಂದಿರುವ ಅನೇಕ ಚಾರಿತ್ರಿಕ ಕುರುಹುಗಳು ಮತ್ತು ದಾಖಲೆಗಳು ಈ ಊರಿನಲ್ಲಿ ಲಭ್ಯವಾಗುತ್ತವೆ.

ಪಿಕಳಿಹಾಳ ಊರನ್ನು ಐತಿಹಾಸಿಕ, ಭಾಷೀಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಈ ಲೇಖನದಲ್ಲಿ ಚರ್ಚೆ ಮಾಡುವ ಪ್ರಮುಖ ಉದ್ದೇಶವನ್ನು ಹೊಂದಲಾಗಿದೆ. ಇದು ಪ್ರಾಗೈತಿಹಾಸಿಕ, ಆದಿಮಾನವ ವಸತಿಯ ಕಾಲಕ್ಕೆ ಸೇರುವ ಹಳ್ಳಿಯಾಗಿದೆ. ಆದಿಮಾನವನು ಬೇಟೆಗಾರಿಕೆಗೆ ಅನುಕೂಲವಾಗಲು ಬರೆದಿರುವ ಸಾರಂಗ ಮತ್ತು ಚಿಗಿರಿ/ಚಿಗರಿ (ಜಿಂಕೆ) ಚಿತ್ರಗಳು ಇವೆ. ಮಾನವನು ಲಿಪಿ ಶೋಧಿಸುವ ಪೂರ್ವದಲ್ಲಿ ಚಿತ್ರವನ್ನು ಬಿಡಿಸುವದನ್ನು ಕಲಿತುಕೊಳ್ಳಲಾಗಿದೆ. ಆದಿಮಾನವನು ತಾನು ವಾಸಿಸುವ ಪ್ರದೇಶದಲ್ಲಿ ಯಾವ ಪ್ರಾಣಿಗಳು ದೊರೆಯುತ್ತವೆಯೋ ಆ ಪ್ರಾಣಿಗಳ ಚಿತ್ರವನ್ನು ಬಿಡಸಲಾಗಿರುತ್ತವೆ. ಇಂತಹ ಚಿತ್ರಗಳನ್ನು ಮಸ್ಕಿ (ರಾಯಚೂರು), ಬಳಿಚಕ್ರ (ಯಾದಗಿರಿ), ಗವಿಮಠ (ಕೊಪ್ಪಳ), ಇನ್ನು ಅನೇಕ ಪ್ರದೇಶಗಳಲ್ಲಿ ಕಾಣಲಾಗುತ್ತದೆ. ಪಿಕಳಿಹಾಳ ಐತಿಹಾಸಿಕ ಹಳ್ಳಿಯಲ್ಲಿ ಗುಹೆಗಳು, ಕಲ್ಲಾಸರೆಗಳು ಮತ್ತು ಮರಡಿಗಳಲ್ಲಿ ಆದಿಮಾನವನು ಚಿಗಿರಿ/ಚಿಗರಿಗಳು (ಜಿಂಕೆ) ಮತ್ತು ಸಾರಂಗಗಳು ಕೆಂಪು ಬಣ್ಣದಿಂದ ಬಿಡಿಸಿರುವ ಚಿತ್ರಗಳು ಸಿಗುತ್ತವೆ.

ದ್ರಾವಿಡ ಭಾಷೆಯಲ್ಲಿ ಕೆಲವು ಧ್ವನಿಗಳು ಸಹಜವಾಗಿ ಬದಲಾವಣೆಯನ್ನು ಹೊಂದಿತ್ತವೆ. ದ್ರಾವಿಡ ಭಾಷೆಯಲ್ಲಿ 'ಪ್' ಧ್ವನಿ ವ್ಯತ್ಯಾಸ ನಾಮಪದಗಳಲ್ಲಿ ಕಾಣುತ್ತವೆ. ಪ್ ಧ್ವನಿಯು ಪಂಚ ದ್ರಾವಿಡ ಭಾಷೆಯಲ್ಲಿ ಸಹಜವಾಗಿ ಬಳಕೆಯಾಗುತ್ತದೆ. ಕನ್ನಡ ಭಾಷೆಯಲ್ಲಿ ಪ್ ಧ್ವನಿಯು ಹ್ ಧ್ವನಿಯಾಗಿ ಬಳಕೆಯಾಗಿದೆ. ಕನ್ನಡ ಭಾಷೆಯಲ್ಲಿ ಪ್ ಮತ್ತು ಹ್ ಧ್ವನಿ ಎರಡು ಸ್ವತಂತ್ರ ಧ್ವನಿಗಳಾಗಿ ಬಳಕೆಯಾಗುತ್ತವೆ. ಈ ಭಾಷೆಯಲ್ಲಿ

ಈ ಎರಡು ಧ್ವನಿಗಳು ನಾಮಪದ, ಕ್ರಿಯಾಪದ ಮತ್ತು ವಿಶೇಷಣಗಳಲ್ಲಿಸಿಗುತ್ತವೆ. ಕೆಲವೊಮ್ಮೆ ಪ್ ಧ್ವನಿಯು ಹ್ ಧ್ವನಿಯಾಗಿ ಬಳಕೆಯಾಗುತ್ತದೆ. ಉದಾ: ಪಳೆಗನ್ನಡ>ಹಳೆಗನ್ನಡ, ಪೊನ್ನು>ಹೊನ್ನು, ಪಾಲು>ಹಾಲು, ಪರ್ಬ್ಬ>ಹಬ್ಬ ಇತ್ಯಾದಿ ಪದಗಳು. ಕೆಲವು ಸಂದರ್ಭಗಳಲ್ಲಿ ಪಂಪ ಮತ್ತು ಹಂಪ ಎರಡು ರೀತಿಯ ಪದಗಳು ಬಳಕೆಯಲ್ಲಿವೆ. ಪಿಕಳಿಹಾಳ ಸ್ಥಳನಾಮದಲ್ಲಿ ಪ್ ಧ್ವನಿಯು ಹ್ ಧ್ವನಿಯಾಗಿ ಬಳಕೆಯಾಗಿಲ್ಲ. ಇಂದಿಗೂ ಆರಂಭದಲ್ಲಿ ಪ್ ಧ್ವನಿಯನ್ನು ಉಳಿಸಿಕೊಂಡು ಪಿಕಳಿಹಾಳ, ಪಿಕಳಿಹಾಳ, ಪಿಕ್ಕೆಹಾಳ, ಪಿಕಿಲಿಹಾಳ ಮತ್ತು ಪಿಕ್ಲಿಹಾಳ ಎಂದು ಜನ ನುಡಿಯಲ್ಲಿ ಬಳಕೆಯಲ್ಲಿದೆ. ಪಿಕಳಿ+ಹಾಳ=ಪಿಕಳಿಹಾಳ ಎಂದು ವಿಭಾಗಿಸಲು ಸಾಧ್ಯವಿದೆ. ಪಿಕಳಿ ಎಂದರೆ ನವಿಲು ಇಲ್ಲವೆ ಕೋಗಿಲೆ ಎಂದರ್ಥವನ್ನು ಹೊಂದಿದೆ. ಪಿಕಾಳ ಎಂದರೆ ಕೋಗಿಲೆಗಳ ಗುಂಪು ಸಮೂಹ ಎಂದರ್ಥ (ಕನ್ನಡ ಸಾಹಿತ್ಯ ಪರಿಷತ್ ನಿಘಂಟು ಪು ೫೩೦೦ ಆರನೆಯ ಸಂಪುಟ) ಹಾಳ ಎಂಬ ಪ್ರತ್ಯಯವು ಹಳ್ಳಿ ಎಂಬರ್ಥವನ್ನು ನೀಡುತ್ತದೆ. ಪಿಕಳಿ ಎಂಬ ನಾಮಪದಕ್ಕೆ ಹಾಳ ಎಂಬ ಪ್ರತ್ಯಯ ಸೇರಿಕೊಂಡು ಪಿಕಳಿಹಾಳ ಎಂಬ ಸ್ಥಳನಾಮ ನಿಷ್ಪತ್ತಿಯಾಗಿದೆ.

**ಪಿಕಳಿಹಾಳ ಐತಿಹಾಸಿಕ ಸ್ಥಳದಲ್ಲಿ ದೊರೆತ್ತಿರುವ ಪ್ರಮುಖ ದಾಖಲೆಗಳು ಈ ಕೆಳಗಿನಂತಿವೆ.**

**ಆದಿಮಾನವ ಬಿಡಿಸಿರುವ ಪ್ರಾಣಿ ಚಿತ್ರಗಳು:**

ಮಾನವನು ಲಿಪಿಯನ್ನು ಶೋಧಿಸುವ ಪೂರ್ವ ಹಂತವೇ ಚಿತ್ರಗಳನ್ನು ಬಿಡಿಸುವುದಾಗಿದೆ. ಇವನು ತನ್ನ ಜೀವನದಲ್ಲಿ ಅನೇಕ ಘಟನೆಗಳು ಸಂಭವಿಸಿದಾಗ ಮಾತ್ರ ಅನುಭವನ್ನು ದಾಖಲೀಸುವ ಚಿಂತನೆಯನ್ನು ಮಾಡಿರುವನು. ಆದಿಮಾನವನು ತನ್ನ ರಕ್ಷಣೆಯ ಉದ್ದೇಶದಿಂದ ಇಲ್ಲವೇ ಮುಂದಿನ ದಿನಗಳಲ್ಲಿ ಅಲೆಮಾರಿ ಆದಿಮಾನವನಿಗೆ ಅನುಕೂಲವಾಗಲಿ ಎಂದು ಚಿತ್ರಗಳನ್ನು ಬಿಡಿಸಲು ಆರಂಭಿಸಿದನು. ಆದಿಮಾನವ ಚಿತ್ರಗಳನ್ನು ಹೆಚ್ಚಾಗಿ ತಾನು ಸೇವಿಸುವ ಆಹಾರದ ಪ್ರಾಣಿಗಳ ಚಿತ್ರಗಳು ಇಲ್ಲವೇ ತಾನು ಬೇಟೆ ಆಡುವ ಪ್ರಾಣಿಗಳ ಚಿತ್ರಗಳನ್ನು ಬಿಡಿಸಿರುವುದು ಕಂಡು ಬರುತ್ತವೆ. ಅದರ ಆಚೆಗೂ ತನ್ನಗೆ ಅಪಾಯವನ್ನುಂಟು ಮಾಡುವ ಪ್ರಾಣಿಗಳ ಚಿತ್ರಗಳನ್ನು ವಿರಳವಾಗಿ ಬಿಡಿಸಿರುವುದು ಅಲ್ಲಲ್ಲಿ ಕಾಣಬಹುದಾಗಿದೆ. ಮಾನವನ ಬೌದ್ಧಿಕ ಚಿಂತನೆಗಳು ವೃದ್ಧಿಯಂತೆ ಅವನು ತನ್ನ ಪರಿಸರದಲ್ಲಿ ಲಭ್ಯವಾಗಿರುವ ಚೂಪಾದ ಕಲ್ಲುಗಳಿಂದ ಇಲ್ಲವೇ ಕೆಂಪು ಬಣ್ಣದಿಂದ ಚಿತ್ರವನ್ನು ಗುಹೆಗಳ, ಕಲ್ಲಾಸರೆ, ಮತ್ತು ಬಂಡೆಗಳ ಮೇಲೆ ಬರೆಯಲಾಗಿದೆ. ಈ ರೀತಿಯ ಚಿತ್ರಗಳು ಪ್ರಪಂಚದ ಚರಿತ್ರೆಯಲ್ಲಿ ದಾಖಲೀಕರಣವಾಗಿರುವುದಕ್ಕೆ ಅನೇಕ ಆಧಾರಗಳು ಸಿಗುತ್ತವೆ. ಭಾರತ ದೇಶದಲ್ಲಿ 'ಬೆಂಬಾಟ್ಕಾ' ಆದಿಮಾನವನು ಬಿಡಿಸಿದ ಚಿತ್ರಗಳು ದೊರೆಯುವ ಪ್ರಮುಖ ಸ್ಥಳವಾಗಿದೆ.

ಕರ್ನಾಟಕದಲ್ಲಿ ಆದಿಮಾನವನು ವಾಸಿಸಿದ ಅನೇಕ ಚಾರಿತ್ರಿಕ ಅಂಶಗಳು ಲಭ್ಯವಾಗುತ್ತವೆ. ಅವುಗಳಲ್ಲಿ ಚಿತ್ರಗಳು ಮತ್ತು ಗುಹೆಗಳು ಪ್ರಮುಖವಾಗಿವೆ. ಹೀಗೆ ಬಿಡಿಸಿದ ಚಿತ್ರಗಳ ಹೆಚ್ಚಾಗಿ ಗುಹೆಗಳು ಮತ್ತು ಬೆಟ್ಟಗಳಲ್ಲಿ ಕಂಡು ಬರುತ್ತವೆ. ಬಯಲು

ಪ್ರದೇಶ ಮತ್ತು ದಟ್ಟವಾಗಿರುವ ಕಾಡು ಪ್ರದೇಶದಲ್ಲಿ ಕಂಡುಬರುವುದಿಲ್ಲ ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ಸಂಶೋಧಕರು ಮುಂದಿನ ದಿನಗಳಲ್ಲಿ ಈ ಪ್ರದೇಶಗಳಲ್ಲಿ ಆದಿಮಾನವ ವಾಸಿಸಿದ ಕುರುಹುಗಳು ಸಂಶೋಧಿಸಿದ ನಂತರ ಅನೇಕ ಮಾಹಿತಿಗಳು ಲಭ್ಯವಾಗುವ ಸಾಧ್ಯತೆ ಇದೆ.

ಗುಹೆಗಳು ಮತ್ತು ಬೆಟ್ಟಗಳಲ್ಲಿ ಆದಿಮಾನವನು ಕಲ್ಲಿನಿಂದ ಕುಟ್ಟಿ ರಚಿಸಿದ ಚಿತ್ರಗಳು ಮತ್ತು ಕೆಂಪು ಬಣ್ಣದಿಂದ ಬಿಡಿಸಿದ ವರ್ಣ ಚಿತ್ರಗಳು ಪ್ರಮುಖವಾಗಿವೆ. ಈ ರೀತಿಯ ಚಿತ್ರಗಳು ಬಳಿಚಕ್ರ (ಯಾದಗಿರ) ಗವಿಮಠ (ಕೊಪ್ಪಳ) ಮಸ್ಕಿ (ರಾಯಚೂರು) ಇತ್ಯಾದಿ ಸ್ಥಳಗಳು ಪ್ರಮುಖವಾಗಿವೆ. ಇವುಗಳನ್ನು ಅನೇಕ ಅಧ್ಯಯನಗಳು ಸಂಶೋಧಿಸಿ ಸತ್ಯವನ್ನು ಇತಿಹಾಸದಲ್ಲಿ ದಾಖಲಿಸಿಲಾಗಿದೆ. ಈ ಪ್ರದೇಶಗಳಲ್ಲಿ ಇರುವ ಚಿತ್ರಗಳಂತೆ ಪಿಕಳಿಹಾಳ (ರಾಯಚೂರು) ಸ್ಥಳದಲ್ಲಿ ಕಲ್ಲಿನಿಂದ ಕುಟ್ಟಿದ ಚಿತ್ರಗಳು ಮತ್ತು ಕೆಂಪು ಬಣ್ಣದಿಂದ ಬಿಡಿಸಿದ ಚಿತ್ರಗಳು ಲಭ್ಯವಾಗುತ್ತವೆ. ಪಿಕಳಿಹಾಳದಲ್ಲಿ ಆದಿಮಾನವ ಒಂದೇ ಸ್ಥಳದಲ್ಲಿ ಚಿತ್ರವನ್ನು ಬಿಡಿಸಿಲ್ಲ. ಸುಮಾರು ೪೦-೫೦ ಎಕರೆ ಪ್ರದೇಶದಲ್ಲಿ ನೆಲಸಿರುವ ಕುರುಹುಗಳು ಸಿಗುತ್ತವೆ. ಆದಿಮಾನವನು ಗುಹೆ, ಮರಡಿ (ಬೆಟ್ಟಗಳು ಅಥವಾ ಗುಡ್ಡಗಳು) ಬಯಲಿನಲ್ಲಿ ವಾಸಿಸಿರುವ ಸಂಗತಿಗಳು ಸಂಶೋಧಿಸಿದಾಗ ಹೆಚ್ಚು ಆಧಾರಗಳು ಲಭ್ಯವಾಗಬಹುದು. ಆದಿಮಾನವನು ಪಿಕಳಿಹಾಳದ ೫೦ ಎಕರೆ ಭೂಪ್ರದೇಶದಲ್ಲಿ ಸಣ್ಣ ಸಣ್ಣ ಮರಡಿಗಳು ಇವೆ. ಇವು ಸುಮಾರು ೮೦-೧೦೦ ಅಡಿ ಎತ್ತರದವರೆಗೆ ೨೦೦-೩೦೦ ಅಡಿ ಅಗಲದ ಪ್ರದೇಶದವರೆಗೆ ವ್ಯಾಪಿಸಿವೆ. ಈ ಅಳತೆಯನ್ನು ಎಲ್ಲ ಗುಡ್ಡಗಳಿಗೆ ಅಥವಾ ಮರಡಿಗಳಿಗೆ ಅನ್ವಯ ಮಾಡಲು ಬರುವುದಿಲ್ಲ. ಆದಿಮಾನವನು ತನ್ನಗೆ ಎಲ್ಲೆಲ್ಲಿ ಅನುಕೂಲವಿದೆ ಅಲ್ಲಲ್ಲಿ ವಾಸ ಮಾಡಿದ್ದಾನೆ. ಹೀಗೆಯೆ ವಾಸ ಮಾಡುವ ಸಂದರ್ಭದಲ್ಲಿ ಅವನಲ್ಲಿರುವ ಬೌದ್ಧಿಕ ಜ್ಞಾನದಿಂದ ಪ್ರಾಣಿಗಳ ಚಿತ್ರಗಳನ್ನು ಕಲ್ಲಿನಿಂದ ಕುಟ್ಟಿ ಮತ್ತು ಕೆಂಪು ವರ್ಣದಿಂದ ಚಿತ್ರಗಳನ್ನು ಬಿಡಿಸಿದ್ದಾನೆ.

ಹೀಗೆಯ ಬಿಡಿಸಿರುವ ಚಿತ್ರಗಳು ೪-೫ ಸ್ಥಳಗಳಲ್ಲಿ ಹಂಚಿಕೆಯಾಗಿವೆ. ಒಂದೊಂದು ಸ್ಥಳಗಳಲ್ಲಿ ಒಂದೊಂದು ರೀತಿಯ ಭಾವನೆಯ ಚಿತ್ರಗಳನ್ನು ಕಾಣಬಹುದಾಗಿದೆ.



ಇಲ್ಲಿ ದೊರೆತಿರುವ ಚಿತ್ರಗಳನ್ನು ಅಧ್ಯಯನದ ದೃಷ್ಟಿಯಿಂದ ಎರಡು ರೀತಿಯಲ್ಲಿ ಚಿಂತಿಸಲಾಗಿದೆ. ಒಂದು ಕಲ್ಲಿನಿಂದ ಕುಟ್ಟಿರುವ ಚಿತ್ರಗಳು ಮತ್ತೊಂದು ಕೆಂಪು ವರ್ಣದ ಚಿತ್ರಗಳು. ಕಲ್ಲಿನಿಂದ ಕುಟ್ಟಿ ರಚಿಸಿದ



ಚಿತ್ರಗಳು ಮೂರು ಅಥವಾ ನಾಲ್ಕು ಚಿತ್ರಗಳಿಗೆ ಸೀಮಿತವಾಗಿವೆ. ಕೆಂಪು ಬಣ್ಣದಿಂದ ಬಿಡಿಸಿರುವ ಚಿತ್ರಗಳು ಗುಂಪು– ಗುಂಪಾಗಿ ಮತ್ತು ಹೆಚ್ಚು ಹೆಚ್ಚು ಚಿತ್ರಗಳನ್ನು ರಚಿಸಿರುವುದನ್ನು ಅವಲೋಕಸಿಬಹುದಾಗಿದೆ.

ಆದಿಮಾನವನು ಕಲ್ಲಿನಿಂದ ಕುಟ್ಟಿದ ಉದ್ದ ಮಾನವ ಚಿತ್ರ, (ಏಳು ಅಡಿ ಮಾನವ ಚಿತ್ರ) ಚಿಗಿರಿ/ಚಿಗರಿ (ಜಿಂಕೆ) ಚಿತ್ರ, ಊಹೆಗೆ ಸಿಗದ ಪ್ರಾಣಿಗಳ ಚಿತ್ರ, ಎತ್ತಿನ ಚಿತ್ರ ಮತ್ತು ಅದನ್ನು ಹಗ್ಗದಿಂದ ಹಿಡಿದುಕೊಂಡಿರುವ ಮಾನವ ಚಿತ್ರ ಕಂಡು ಬರುತ್ತವೆ. ಉದ್ದ ಮಾನವ ಚಿತ್ರ, ಜಿಂಕೆ ಚಿತ್ರ ಮತ್ತು ಊಹೆಗೆ ಸಿಗದ ಪ್ರಾಣಿಗಳ ಚಿತ್ರಗಳು ಅಧ್ಯಯನಕಾರರಿಗೆ ಮತ್ತು ನೋಡುಗರಿಗೆ ತಮ್ಮ ಸ್ಪಷ್ಟತೆಯನ್ನು ತೋರಿಸುವಲ್ಲಿ ಸೋತಿದ್ದಾವೆ. ಈ ಚಿತ್ರಗಳನ್ನು ತುಂಬಾ ಸೂಕ್ಷ್ಮವಾಗಿ ಅವಲೋಕನೆಯನ್ನು ಮಾಡಿದಾಗ ಮಾತ್ರ ತಮ್ಮ ಇರುವಿಕೆಯನ್ನು ಗೋಚರಿಸುತ್ತವೆ.



ಎತ್ತಿನ ಚಿತ್ರ ಮತ್ತು ಅದನ್ನು ಹಗ್ಗದಿಂದ ಹಿಡಿದುಕೊಂಡಿರುವ ಮಾನವ ಚಿತ್ರವನ್ನು ಕಾಣುತ್ತವೆ. ಎತ್ತಿನ ಚಿತ್ರ ಮಾತ್ರ ಕಲ್ಲಿನಿಂದ ಕುಟ್ಟಿ ರಚಿಸಿರುವುದರಲ್ಲಿ ಹೆಚ್ಚು ಸ್ಪಷ್ಟತೆಯನ್ನು ಹೊಂದಿದೆ. ಈ ಚಿತ್ರವನ್ನು ವಕ್ತೃ ಆಧುನಿಕ ಚಿತ್ರ ಎಂದು ತಿಳಿಸಿದನು. ಆದರೆ ಈ ಚಿತ್ರ ಆಧುನಿಕ ಚಿತ್ರ ಅಥವಾ ಆದಿಮಾನವನು ಬಿಡಿಸಿದ ಚಿತ್ರ ಎಂದು ಹೇಳುವುದಕ್ಕೆ ಇನ್ನು ಅಧ್ಯಯನಗಳು ಬೇಕಾಗುತ್ತವೆ. ಕೇವಲ ಊಹೆಯಿಂದ ಎತ್ತಿನ ಚಿತ್ರದ ಕಾಲವನ್ನು ನಿರ್ಧರಿಸುವುದು ಅಪಾಯವೆಂದು ಭಾವಿಸಬೇಕಾಗುತ್ತದೆ. ಈ ಎತ್ತಿನ ಚಿತ್ರದ ಮೇಲೆ ಪುರಾತತ್ವ ಅಧ್ಯಯನಕಾರರು ಬೆಳಕು ಚೆಲ್ಲಿದರೆ ಸ್ಪಷ್ಟತೆ ಬರುತ್ತದೆ.



ಆದಿಮಾನವ ಕೆಂಪುವರ್ಣದಿಂದ ಚಿಗಿರಿ/ಚಿಗರಿ (ಜಿಂಕೆ), ಸಾರಂಗ ತನ್ನ ಕಲ್ಪನೆಯ ಲೋಕದಲ್ಲಿರುವ ಪ್ರಾಣಿಗಳನ್ನು ಬಿಡಿಸಿದ್ದಾನೆ. ಈ ಪ್ರಾಣಿ ಚಿತ್ರಗಳ ಮೇಲೆ ಒಬ್ಬರು, ಇಬ್ಬರು ಮತ್ತು ಮೂರು ಜನರು ಕುಳಿತುಕೊಂಡಿರುವುದು ಕಾಣುತ್ತೇವೆ. ಹೀಗೆ ಕುಳಿತವರು





ಕೈಯಲ್ಲಿ ಉದ್ದವಾದ ಮತ್ತು ಚೂಪಾದ ವಸ್ತುವನ್ನು ಹಿಡಿದುಕೊಂಡು ಪ್ರಾಣಿಗಳ ಬೇಟೆಯಾಡುವ ಚಿತ್ರಗಳು ಕಂಡುಬರುತ್ತವೆ. ಈ ಚಿತ್ರಗಳು ಕಲ್ಲಾಸರೆಯಲ್ಲಿ ಬಿಡಸಲಾಗಿದೆ. ಆದರೆ ವಕ್ತೃ ಈ ಚಿತ್ರಗಳು ಇತ್ತೀಚಿನವು ಎಂದು ಹೇಳಿದನು. ಅಲ್ಲಿ ಬಿಡಿಸಿದ ಚಿತ್ರಗಳನ್ನು ಅವಲೋಕಿಸಿದಾಗ ಇತ್ತೀಚಿನ ಚಿತ್ರಗಳು ಎಂದು ಸಾಬಿತುಪಡಿಸಲು ಸಾಧ್ಯವಾಗುವುದಿಲ್ಲ. ಇವು ಹೆಚ್ಚಾಗಿ ಕೆಂಪುವರ್ಣದಿಂದ ಕೂಡಿರುವ ಚಿತ್ರಗಳಾಗಿವೆ. ಮಾನವನು ಕೆಳಗೆ ಕುಳಿತುಕೊಳ್ಳಲು ಮತ್ತು ವಿಶಾಲವಾದ ಗುಂಡಿನ ಕೆಳಗೆ ಈ ಚಿತ್ರಗಳನ್ನು ಬಿಡಿಸಲಾಗಿದೆ. ಈ ಚಿತ್ರಗಳು ಮಳೆ, ಬಿಸಿಲು ಮತ್ತು ಗಾಳಿಗೆ ಹೆಚ್ಚು ತಮ್ಮನ್ನು ಒಡ್ಡಿಕೊಂಡಿರುವುದಿಲ್ಲ. ಇದರಿಂದ ತಮ್ಮ ಮೂಲ ಕೆಂಪು ವರ್ಣವನ್ನು ಕಳೆದುಕೊಂಡಿಲ್ಲ ಎಂದು ನನ್ನ ಊಹೆಯಾಗಿದೆ. ಇದನ್ನು ಖಚಿತಪಡಿಸಲು ನನ್ನಲ್ಲಿ ಯಾವುದೇ ಆಧಾರಗಳು ಇಲ್ಲ. ಪುರಾತತ್ವ, ಚರಿತ್ರೆಯ ಮತ್ತು ಶಿಲ್ಪಿ ತಜ್ಞರ ಅಧ್ಯಯನಗಳು ಮತ್ತು ವಿಮರ್ಶೆಗಳು ಮಾಡಿದಾಗ ನಿಖರತೆ ಕಾಣಬಹುದಾಗಿದೆ.

ದೊಡ್ಡ ವಿಶಾಲ ಗುಂಡಿನ ಪೂರ್ವಭಾಗಕ್ಕೆ ಕೆಲವು ಪ್ರಾಣಿಗಳ ಕೆಂಪು ವರ್ಣದ ಚಿತ್ರಗಳು ಕಂಡು ಬರುತ್ತವೆ. ಇವು ಆದಿಮಾನವನು ಬಿಡಿಸಿದ ಚಿತ್ರಗಳು ಎಂದು ವಕ್ತೃ ಉಲೇಖ ಮಾಡಿದನು. ಇಲ್ಲಿ ಸಾರಂಗ ರೀತಿಯ ಚಿತ್ರಗಳು, ಚಿಗಿರಿ/ಚಿಗರಿ (ಜಿಂಕೆ) ಚಿತ್ರಗಳು ಒಂದರಿಂದ ಒಂದು ಸಾಲಾಗಿ ಪ್ರಯಾಣ ಮಾಡುವ ರೀತಿಯ ಚಿತ್ರಗಳು ಕಂಡು ಬರುತ್ತವೆ. ಈ ಚಿತ್ರಗಳು ಗಾತ್ರದಲ್ಲಿ ಮತ್ತು ವಿಸ್ತೀರ್ಣದಲ್ಲಿ ಒಂದೆ ರೀತಿಯಲ್ಲಿ ಇರುವುದು ಅಧ್ಯಯನಕ್ಕೆ ಹೆಚ್ಚು ಅವಕಾಶವಿದೆ. ಈ ಚಿತ್ರಗಳು ಬಿಸಿಲು, ಮಳೆ ಮತ್ತು ಗಾಳಿಗೆ ಮುಖಾಮುಖಿಯಾಗಿವೆ. ಇದರಿಂದ ಹೆಚ್ಚು ಕೆಂಪುವರ್ಣವನ್ನು





ತಮ್ಮಲ್ಲಿ ಉಳಿಸಿಕೊಂಡಿಲ್ಲ ಎಂದು ನನ್ನ ಊಹೆ. ಈ ಚಿತ್ರಗಳಲ್ಲಿ ಚಿಗಿರಿ/ಚಿಗರಿ, ಸಾರಂಗ ಮತ್ತು ಆನೆಯ ಚಿತ್ರಗಳು ಮಾತ್ರ ಕಾಣುತ್ತವೆ. ಇಲ್ಲಿ ಆದಿಮಾನವನು ತನ್ನ ಚಿತ್ರವನ್ನು ಬಿಡಿಸಿಲ್ಲ. ಈ ಪ್ರಾಣಿ ಚಿತ್ರಗಳ ಮೇಲೆ ಮಾನವನು ಕುಳಿತಿರುವುದು ಕಂಡುಬರುವುದಿಲ್ಲ. ಇಲ್ಲಿಯ ಚಿತ್ರಗಳಲ್ಲಿ ೪-೫ ರೀತಿಯ ಪ್ರಾಣಿಗಳನ್ನು ಅವಲೋಕನೆ ಮಾಡಲು ಸಾಧ್ಯವಿದೆ. ಆಧುನಿಕ ಜಗತ್ತಿನಲ್ಲಿರುವ ಪ್ರಾಣಿಯ ಚಿತ್ರದೊಂದಿಗೆ ಈ ಚಿತ್ರದಲ್ಲಿರುವ ಪ್ರಾಣಿಗಳದೊಂದಿಗೆ ಹೋಲಿಕೆ ಮಾಡುವುದು ಕಷ್ಟವಾಗುತ್ತದೆ. ಏಕೆಂದರೆ ಚಿತ್ರದಲ್ಲಿರುವ ಯಾವ ಪ್ರಾಣಿಗಳು ಇಂದು ಅರಣ್ಯದಲ್ಲಿ ಕಾಣುವುದಿಲ್ಲ. ಈ ಚಿತ್ರಗಳಲ್ಲಿ ಪ್ರಾಣಿಯ ಕೊಂಬು, ದಿಂಬ, ಕಾಲು ಮತ್ತು ಬಾಲವನ್ನು ಸ್ಪಷ್ಟವಾಗಿ ಮೂಡಿವೆ. ಪ್ರಾಣಿಗಳು ಒಂದರಿಂದ ಒಂದು ಸಾಲಾಗಿ ಪ್ರಯಾಣ ಮಾಡುವ ಚಿತ್ರಗಳನ್ನು ಕಾಣಬಹುದಾಗಿದೆ.

ಪಿಕಿಳಿಹಾಳ ಸ್ಥಳಗಳಲ್ಲಿ ಗುಹೆಗಳು ಇವೆ. ಈ ಗುಹೆಗಳಲ್ಲಿ ಯಾವುದೇ ಚಿತ್ರಗಳು ಕಂಡು ಬಂದಿರುವುದಿಲ್ಲ. ತುಂಬಾ ದೊಡ್ಡದಾಗಿರುವ ಗುಹೆ ಇದೆ ಎಂದು ವಕ್ತೃ ಹೇಳಿದನು. ಆ ಗುಹೆ ಜಾಲಿ ಮತ್ತು ಕಂಟಿಗೆಳಿಂದ ಆವರಿಸಿಕೊಂಡಿರುವುದರಿಂದ ಆ ಗುಹೆ ನನಗೆ ಸಿಗುತ್ತಿಲ್ಲ ಎಂದು ಹೇಳಿದನು. ಆ ಗುಹೆಗಳಲ್ಲಿ ಚಿತ್ರಗಳು ಇರಲು ಸಾಧ್ಯವಿದೆ ಎಂದು ಊಹೆ ಮಾಡಲು ಅವಕಾಶವಿದೆ. ಆದಿಮಾನವನು ಕಲ್ಲಾಸರೆ, ಬಂಡೆಗಳ ಹೊರ ಕವಚದ ಮೇಲೆ ಚಿತ್ರಗಳನ್ನು ಕಲ್ಲಿನಿಂದ ಕುಟ್ಟಿ ಮತ್ತು ಕೆಂಪು ವರ್ಣದಿಂದ ಬಿಡಿಸಿದ ಚಿತ್ರಗಳು ದೊರೆಯುತ್ತವೆ. ಆದಿಮಾನವನು ತಾನು ಬೇಟೆಯಾಡಿ ಆಹಾರಕ್ಕೆ ಉಪಯೋಗಿಸಿದ ಪ್ರಾಣಿಗಳ ಚಿತ್ರಗಳನ್ನು ಮಾತ್ರ ಬಿಡಿಸಿದ್ದಾನೆ. ಇಲ್ಲಿಯ ಎರಡರಿಂದ ಮೂರು ಚಿರತೆಯ ಬೋನುಗಳು ಇವೆ. ಚಿರತೆಯ ಚಿತ್ರಗಳು ಎಲ್ಲಿವೂ ಆದಿಮಾನವ ಬಿಡಿಸಿರುವುದು ಕಂಡುಬರುವುದಿಲ್ಲ. ಪಿಕಿಳಿಹಾಳದಲ್ಲಿರುವ ಚಿತ್ರಗಳನ್ನು ಅನೇಕ ಬಗೆಯ ಸಂಶೋಧನೆಯಿಂದ ಹೊಸ ಹೊಸ ವಿಚಾರಗಳು ಆಧುನಿಕ ಜಗತ್ತಿಗೆ ಲಭ್ಯವಾಗಬಹುದು. ಪಿಕಿಳಿಹಾಳದ ಆದಿಮಾನವನ ಚಿತ್ರಗಳು ಪುರಾತತ್ವ ತಜ್ಞರಿಗೆ, ಚರಿತ್ರೆಕಾರರಿಗೆ, ಚಿತ್ರಗಾರರಿಗೆ ಮತ್ತು ಚಿತ್ರ ಶಿಲ್ಪಿಗಳಿಗೆ ಅಧ್ಯಯನ ಮಾಡಲು ಸಾಕಷ್ಟು ಆಕಾರಗಳನ್ನು ಒದಗಿಸುತ್ತವೆ.

**ಕುಂಬಾರ ಕುರುಹುಗಳು:**

ಮಾನವನು ತನ್ನ ಬೌದ್ಧಿಕ ಮಟ್ಟದಿಂದ ಆಧುನಿಕ ತಂತ್ರಜ್ಞಾನದ ಜಗತ್ತಿನವರೆಗೆ ಅನೇಕ ಸಂಶೋಧನೆಗಳನ್ನು ಮಾಡಲಾಗಿದೆ. ಎಲ್ಲಾ ಸಂಶೋಧನೆಗಳಿಗೆ ಪ್ರಮುಖ ಆಧಾರ ಭೂಮಿಯೇ ಆಗಿದೆ. ಭೂಮಿಯ ಮೇಲೆ ಲಭ್ಯವಾಗುವ ಕಚ್ಚಾ ಸಂಪನ್ಮೂಲವನ್ನು ಬಳಸಿಕೊಂಡು ಮಾನವನು ದಿನನಿತ್ಯದ ಬಳಕೆಯ ವಸ್ತುಗಳನ್ನು ರೂಪಿಸಿಕೊಂಡನು. ಅದರಲ್ಲಿ ಮಡಿಕೆ (ಗಡಿಗೆ), ಪುಟ್ಟಿ, ಕಬ್ಬಿಣ, ಆಹಾರದ ವಸ್ತುಗಳನ್ನು ಸಿದ್ದಪಡಿಸಿಕೊಂಡನು.

ಇಂದಿನ ಮಾನವನ ಅನೇಕ ಆವಿಷ್ಕಾರಗಳಿಗೆ ಹಿಂದಿನ ಮಾನವನ ಆವಿಷ್ಕಾರದಲ್ಲಿ ಅನೇಕ ಕುರುಹುಗಳು ಸಿಗುತ್ತವೆ. ಚಕ್ರ ಎಂಬ ಸಾಧನೆಯನ್ನು ಮಾನವನು ಅನೇಕ



ವಸ್ತುಗಳನ್ನು ಸಾಗಿಸಲುಮತ್ತು ರೂಪಿಸಲು ಬಳಸಿಕೊಳ್ಳಲಾಗಿದೆ. ತಿಗರಿ ಎಂಬ ಚಕ್ರದ ಮೂಲಕ ಆದಿ ಮಾನವನು ಮಡಿಕೆ ಅಥವಾ ಗಡಿಗೆಯನ್ನು ಮಾಡುವುದನ್ನು ಕಲಿತುಕೊಂಡನು. ಅದು ಇಂದಿನ ಆಧುನಿಕ ಜಗತ್ತಿನ ದಿನನಿತ್ಯದ ಬಳಕೆಯ ವಸ್ತುಗಳನ್ನು ರೂಪಿಸಲು ಸಹಾಯಕವಾಗಿದೆ. ಪಿಕಳಿಹಾಳದಲ್ಲಿ ಬೊಕಿ (ಮಡಿಕೆ) ಯ ಸಣ್ಣ ಸಣ್ಣ ಚೂರುಗಳ ಲಭ್ಯವಾಗುತ್ತವೆ.

ಮಾನವನು ವಸತಿ ಮಾಡಿರುವನು ಎಂಬುವುದಕ್ಕೆ ಅನೇಕ ಕುರುಹುಗಳನ್ನು ಈ ಸ್ಥಳ ಒದಗಿಸುತ್ತದೆ. ಅದರಲ್ಲಿ ಬೊಕಿಯ (ಮಡಿಕೆ) ಚೂರುಗಳು ಪ್ರಮುಖ ಆಧಾರವಾಗಿವೆ. ಐತಿಹಾಸಿಕ ಸ್ಥಳದಲ್ಲಿ ಮಡಿಕೆಯ ಚೂರುಗಳನ್ನು ಎರಡು ರೀತಿಯಲ್ಲಿ ಕಂಡು ಬರುತ್ತವೆ. ಒಂದು ಕೆಂಪು ಬಣ್ಣದ ಮಡಿಕೆಯ ಚೂರುಗಳು ಮತ್ತು ಇನ್ನೊಂದು ಕಪ್ಪು ಬಣ್ಣದ ಮಡಿಕೆ ಚೂರುಗಳು. ಎರಡು ವಿಧದ ಮಡಿಕೆಯ ಚೂರುಗಳು ಪಿಕಳಿಹಾಳದಲ್ಲಿ ಸಿಕ್ಕಿವೆ. ಹಾಗೆಯೇ ಮಡಿಕೆಯ ಚೂರುಗಳ ಮೇಲೆ ಕೌಶಲ್ಯ ಭರಿತ ಸಣ್ಣ ಸಣ್ಣ ಚಿತ್ರಗಳನ್ನು ಬಿಡಿಸಲಾಗಿದೆ. ಮಾನವನು ಮಡಿಕೆಯನ್ನು ಕೌಶಲ್ಯಭರಿತವಾಗಿ ರೂಪಿಸುವ ಜ್ಞಾನವನ್ನು ಸಿದ್ದಿಸಿಕೊಳ್ಳಲಾಗಿದೆ. ಮಡಿಕೆಯ ಚೂರುಗಳಲ್ಲಿ ದಪ್ಪ ಮತ್ತು ತೆಳವಾದ ಚೂರುಗಳು ಕಂಡು ಬಂದಿವೆ. ಈ ಮಡಿಕೆ ಚೂರುಗಳಿಂದ ಐತಿಹಾಸಿಕ ಸ್ಥಳದ ಕಾಲ ನಿರ್ಣಯವನ್ನು ಮಾಡಲು ಪುರಾತತ್ವ ಅಧ್ಯಯನಕಾರರಿಗೆ ಸಹಾಯಕವಾಗಿವೆ. ಪಿಕಳಿಹಾಳ ಮಾನವನು ವಸತಿ ಮಾಡಿರುವ ಐತಿಹಾಸಿಕ ಸ್ಥಳಗಳಲ್ಲಿ ಒಂದಾಗಿದೆ ಎಂದು ಅರಿಯಲಾಗಿದೆ. ಇಲ್ಲಿಯ ಮಡಿಕೆಯ ಚೂರುಗಳನ್ನು ಹೊಸ ಹೊಸ ಅಧ್ಯಯನಕ್ಕೆ ತೋಡಗಿಸಿದಾಗ ಮಾನವನ ಬೌದ್ಧಿಕ ಜ್ಞಾನ ಸಂಪತ್ತು ತಿಳಿದುಕೊಳ್ಳಲು ಸಹಾಯಕವಾಗುತ್ತದೆಂದು ಹೇಳಬಹುದಾಗಿದೆ.

**ಕಂಬಾರ ಕುರುಹುಗಳು:**

ಮಡಿಕೆಯು ಚೂರುಗಳಿಂದ ದಿನಬಳಕೆಯಲ್ಲಿ ಸಮೃದ್ದವಾಗಿರುವಂತೆ ಕಂಬಾರಿಕೆಯಿಂದ ಕೃಷಿಯ ಉತ್ಪನಗಳ ಉತ್ಪಾದನೆಯಲ್ಲಿ ಸಮೃದ್ದವಾಗಿರುವಂತೆ ಕಂಡು ಬರುತ್ತದೆ. ಕಂಬಾರ ಕಾಯಕದಿಂದ ಒಕ್ಕುಲತನ (ವ್ಯವಸಾಯ) ಕ್ಕೆ ಬಹಳಷ್ಟು ಅನುಕೂಲವಾಗಿದೆ. ಹಿಂದಿನ ಕಾಲದಲ್ಲಿ ಪ್ರತಿಯೊಂದು ಕೃಷಿಯ ಉಪಕರಣಗಳು ಕಂಬಾರ ಕುಲುಮೆಯಲ್ಲಿ ಸಿದ್ದವಾಗುತ್ತಿದ್ದವು. ಪಿಕಳಿಹಾಳ ಸುತ್ತಾ-ಮುತ್ತಲಿನ ಜನರು ಕೃಷಿಯನ್ನು ಅವಲಂಭಿತವಾಗಿರುವ ಜನರು ಈ ಊರಿನ ಕಂಬಾರ ಕುಲುಮೆಯನ್ನು ಅವಲಂಭಿಸಿದರು ಎಂಬುವುದಕ್ಕೆ ಇಲ್ಲಿಯವರೆಗೆ ಉಳಿದುಕೊಂಡಿರುವ ಕಬ್ಬಿಣ ಚೂರುಗಳು, ಕಂಬಾರ ಕುಲುಮೆಯ ಬೂದಿ ಮತ್ತು ಇದ್ದಿಲು ಸುಟ್ಟ ನಂತರ ಉಳಿಯುವ

ಕೊಳಸಿಯೇ ಸಾಕ್ಷಿಗಳಾಗಿವೆ. ಇಲ್ಲಿಯ ಕಂಬಾರಿಕೆ ಸ್ಥಳವನ್ನು ಸೂಕ್ಷ್ಮವಾಗಿ ಅವಲೋಕನೆ ಮಾಡಿದಾಗ ವಿಶಾಲವಾದ ಗುಂಡಿನ ನೆರಳನಲ್ಲಿ ಕಂಬಾರನು ತನ್ನ ಕಾಯಕವನ್ನು ರೈತಪಿ ವರ್ಗಕ್ಕೆ ಮಾಡಿಕೊಟ್ಟಿರುವುದು ಭಾಸವಾಗುತ್ತದೆ.

ಈ ಕಂಬಾರ ಕುಲುಮೆಯಲ್ಲಿ ಕೃಷಿ ಉಪಕರಣ ಮಾತ್ರ ರೂಪಿತವಾಗುತ್ತಿದ್ದವೇ ಇಲ್ಲವೇ ಇತರ ಮಾನವನಿಗೆ ಬೇಕಾಗಿರುವ ಕಬ್ಬಿಣದ ವಸ್ತುಗಳು ರೂಪಿತವಾಗುತ್ತಿದ್ದವೆ ಎಂಬುವುದನ್ನು ಅಧ್ಯಯನ ಮಾಡಿದಾಗ ತಿಳಿಯಬಹುದಾಗಿದೆ. ಪಿಕಳಿಹಾಳ ಕಂಬಾರ ಕುಲುಮೆಯಲ್ಲಿ ಕೃಷಿ ಉಪಕರಣವೇ ಸಿದ್ದವಾಗುತ್ತಿದ್ದವು ಇತರ ಕಬ್ಬಿಣದ ಉಪಕರಣಗಳು ಸಿದ್ದವಾಗುತ್ತಿರಲ್ಲಿಲ ಎಂದು ಖಚಿತವಾಗಿ ಹೇಳುವುದಕ್ಕೆ ಯಾವ ಆಧಾರಗಳು ಲಭ್ಯವಾಗಿಲ್ಲ. ಪಿಕಳಿಹಾಳನ ಭೌಗೋಳಿಕ ಪರಿಸರವನ್ನು ಅವಲೋಕನೆಯ ಆಧಾರದ ಮೇಲೆ ಈ ಕುಲುಮೆಯಲ್ಲಿ ಕೃಷಿ ಉಪಕರಣಗಳು ಹೆಚ್ಚು ಸಿದ್ದವಾಗಿವೆಂದು ಹೇಳಬಹುದಾಗಿದೆ. ಕಂಬಾರಿಕೆಯ ಕುರುಹುಗಳು ಅತೀ ಹೆಚ್ಚು ಲಭ್ಯವಾಗಿರುವುದರಿಂದ ಈ ಗುಡ್ಡವನ್ನು ಕಂಬಾರ ಮರಡಿ ಎಂದು ಸ್ಥಳೀಯರು ಕರೆಯುತ್ತಾರೆ. ಪಿಕಳಿಹಾಳ ಕಂಬಾರ ಕುಲುಮೆಯಲ್ಲಿ ಯಾವ ವಸ್ತುಗಳು ಸಿದ್ದವಾಗುತ್ತಿದ್ದವು. ಅವುಗಳನ್ನು ಯಾವ ಮಾರುಕಟ್ಟೆಯಲ್ಲಿ ವ್ಯಾಪಾರ ಮಾಡುತ್ತಿದ್ದರು ಎಂಬುವುದನ್ನು ಬೇರೆ ಬೇರೆ ಅಧ್ಯಯನಗಳು ಮಾಡಿದಾಗ ಈ ಪ್ರೆಶ್ನೆಗೆ ಉತ್ತರಗಳು ಸಿಗುತ್ತವೆ. ಪಿಕಳಿಹಾಳ ಗ್ರಾಮದಿಂದ ಐತಿಹಾಸಿಕ ಸ್ಥಳವಾದ ಮುದಗಲ್ಲ ಕೇವಲ ೫ ಕಿ.ಮೀ ಅಂತರದಲ್ಲಿದೆ. ಅದರಂತೆ ಇನ್ನೊಂದು ಐತಿಹಾಸಿಕ ಸ್ಥಳವಾದ ಮಸ್ಕಿ ಕೇವಲ ೨೫ ಕಿ.ಮೀ ಅಂತರದಲ್ಲಿದೆ. ಈ ಎಲ್ಲ ಅಂಶಗಳಿಂದ ಪಿಕಳಿಹಾಳ ಕಂಬಾರ ಕುಲುಮೆಯಉತ್ಪನಗಳು ಅಧ್ಯಯನ ಮಾಡಿದಾಗ ಬೇರೆ ಬೇರೆ ವ್ಯವಹಾರಿಕ ಅಂಶಗಳು ದೊರೆಯುತ್ತವೆ.

**ಡಮಣಿ ಕಲ್ಲುಗಳು (ಸಂಗೀತ ಕಲ್ಲುಗಳು):**

ಮಾನವನು ಕಲ್ಲಿನಲ್ಲಿ ಸಂಗೀತವನ್ನು ಬಾರಿಸುವ ಕಲೆಯನ್ನು ಯಾವಾಗ ಕರಗತ ಮಾಡಿಕೊಳ್ಳಲಾಗಿದೆ ಎಂಬ ಪ್ರಶ್ನೆಗೆ ಉತ್ತರ ಸಿಗುವುದಿಲ್ಲ. ಪಿಕಳಿಹಾಳ ಐತಿಹಾಸಿಕ ಗ್ರಾಮದಲ್ಲಿ ಎರಡು ದೊಡ್ಡ ದೊಡ್ಡ ಕಲ್ಲಿನಲ್ಲಿ ಸಂಗೀತವನ್ನು ನುಡಿಸುವ ಕಲೆಯನ್ನು ಆದಿ ಮಾನವನು ಕಂಡುಕೊಂಡಿದ್ದಾನೆ. ಎರಡು ದೊಡ್ಡ ಕಲ್ಲುಗಳ ಸಂಗೀತವನ್ನು ಇನ್ನೊಂದು ಸಣ್ಣ ಕಲ್ಲಿನಿಂದ ಬಾರಿಸಿ ಬಾರಿಸಿ ಒಂದು ರೀತಿಯ ನುಣಪಿನ ಕಲ್ಲುಗಳಾಗಿ ರೂಪಗೊಂಡಿವೆ. ಈ ಕಲ್ಲುಗಳಲ್ಲಿ ಸಂಗೀತವನ್ನು ಕೇಳವುದಕ್ಕೆ ಬೇರೆ ಕಲ್ಲಿನಿಂದ ಕುಟ್ಟಿ ಇಂದಿಗೂ ಕೇಳಬಹುದಾಗಿದೆ. ಈ ಕಲ್ಲಿನಲ್ಲಿ ಸಂಗೀತ ಸ್ವರದ ಧ್ವನಿ ಒಂದೆ ರೀತಿ ಬರುವುದರಿಂದ ವಿಶೇಷ ಸಂಗೀತದ ಸ್ವರ ಧ್ವನಿಗಳು ಕೇಳಿಸುವುದಿಲ್ಲ.



ಇನ್ನೊಂದು ಸಂಗೀತ ಬಾರಿಸುವ ಕಲ್ಲಿನ ಪಕ್ಕದಲ್ಲಿ ವ್ಯಕ್ತಿ ಕುಳಿತುಕೊಂಡು



ಬಾರಿಸುವುದಕ್ಕೆ ಸ್ಥಳವನ್ನು ರೂಪಿಸಲಾಗಿದೆ. ಸಂಗೀತವನ್ನು ರಾತ್ರಿ ಸಮಯದಲ್ಲಿ ನುಡಿಸುತ್ತಿದ್ದನೊ, ಇಲ್ಲವೇ ಹಗಲಿನ ಸಮಯದಲ್ಲಿ ನುಡಿಸುತ್ತಿದ್ದನೊ ಇಲ್ಲವೇ ವಿಶೇಷವಾದ ಸಂದರ್ಭದಲ್ಲಿ ನುಡಿಸುತ್ತಿದ್ದನೊ ಎಂಬವುದಕ್ಕೆ ಯಾವುದೇ ಆಧಾರಗಳು ಸಿಗುವುದಿಲ್ಲ. ಈ ಎರಡು ಕಲ್ಲಿನಲ್ಲಿ ಸಂಗೀತ ನುಡಿಸುವುದರಿಂದ ಇವುಗಳಿಗೆ ಡಮಣಿ ಕಲ್ಲುಗಳು ಎಂದು ಕರೆಯುತ್ತಾರೆ. ಹೀಗೆ ಸಂಗೀತ ಕಲ್ಲುಗಳು ಇರುವ ಗುಡ್ಡವನ್ನು ಡಮಣಿ ಮರಡಿ ಎಂದು ಸ್ಥಳೀಯರು ಕರೆಯುತ್ತಾರೆ.

ಈ ರೀತಿಯ ಕಲ್ಲಿನಲ್ಲಿ ಸಂಗೀತ ಬರುವುದು ಹಂಪೆಯ ವಿಠಲ ದೇವಾಲಯದ ಕಂಬಗಳಲ್ಲಿ ಕಾಣುತ್ತೇವೆ. ಅದರಂತೆ ಕಲ್ಲಿನಲ್ಲಿ ಸಂಗೀತ ಬರುವುದು ಪಿಕಳಿಹಾಳ ಕಲ್ಲುಗಳಲ್ಲಿ ಕಂಡು ಬರುತ್ತದೆ. ಕಲ್ಲುಗಳಲ್ಲಿ ಸಂಗೀತವನ್ನು ಆರಂಭದಲ್ಲಿ ಮಾನವನು ರೂಢಿಸಿಕೊಂಡಿರುವುದಕ್ಕೆ ಕುರುಹುಗಳು ಕಾಣಬಹುದಾಗಿದೆ. ಮಾನವನ ಬೌದ್ಧಿಕ ಚಿಂತನೆಯ ಅಧಿಕವಾದ ನಂತರದ ದಿನಗಳಲ್ಲಿ ಚರ್ಮದಿಂದ ಸಂಗೀತ ಪರಿಕರಗಳನ್ನು ರೂಪಿಸಿಕೊಂಡಿರುವುದು ತಿಳಿಯಬಹುದಾಗಿದೆ. ಆದಿಮಾನವನು ಈ ಎರಡು ಕಲ್ಲುಗಳು ಸಂಗೀತಕ್ಕೆ ಬಳಸುತ್ತಿದ್ದನೊ ಇಲ್ಲವೆ ಇನ್ನು ಯಾವುದೊ ಕಾರ್ಯಕ್ಕೆ ಬಳಸುತ್ತಿದ್ದನೊ ಎಂಬವುದನ್ನು ಅಧ್ಯಯನಗಳಿಂದ ತಿಳಿಯಬೇಕಾಗಿದೆ. ಈ ಎರಡು ಕಲ್ಲುಗಳಲ್ಲಿ ಸಂಗೀತ ನುಡಿಸುವುದರಿಂದ ಇವುಗಳನ್ನು ಡಮಣಿ ಕಲ್ಲುಗಳು ಎಂದು ಜನಪದರು ಕರೆಯುತ್ತಾರೆ.

**ಪಗಡೆ ಮೈದಾನಗಳು:**

ಪಗಡೆಯ ಆಟವು ರಾಮಾಯಣ ಮತ್ತು ಮಹಾಭಾರತ ಮಹಾಕಾವ್ಯಗಳಿಂದ ಜನ ಜನಿತವಾಗಿದೆ. ಮಹಾಭಾರತದಲ್ಲಿ ಆಡುವ ಪಗಡೆಯ ಆಟಕ್ಕೂ ಪಿಕಳಿಹಾಳದ ಐತಿಹಾಸಿಕ ಸ್ಥಳದಲ್ಲಿರುವ ಪಗಡೆಯ ಆಟಕ್ಕೂ ಮತ್ತು ಅದರ ಮನೆ (ಮೈದಾನ)ಯ ರಚನೆಗೂ ಭಿನ್ನತೆ ಇದೆ. ಇಲ್ಲಿ ಪಗಡೆಯ ಆಟದ ಮೈದಾನಗಳು ಎರಡು ಇವೆ. ಒಂದು ದೊಡ್ಡ ಮರಡಿಯ ಮಗ್ಗಲಿನಲ್ಲಿದೆ. ಇನ್ನೊಂದು ಇರುವ ಸ್ಥಳವನ್ನು ಪಗಡೆಯ ಗುಂಡಿನ ಡಮಣಿ ಕಲ್ಲು (ಪಗಡೆಯ ಮರಡಿಯ ಡಮಣಿ ಕಲ್ಲು) ಎಂದು ಪ್ರಖ್ಯಾತವಾಗಿದೆ. ಈ ಆಟದ ಹೆಸರನ್ನು ಒಂದು ಗುಡ್ಡಕ್ಕೆ ಅಥವಾ ಮರಡಿಗೆ ನಾಮವಾಗಿ ಕರೆಯಲಾಗುತ್ತದೆ. ಈ ಆಟವು ಅಷ್ಟೊಂದು ಜನರು ಆಡುತ್ತಿದ್ದರು ಎಂದು ಭಾವಿಸಲು ಅವಕಾಶವಿದೆ. ಈ ಆಟವನ್ನು ಇಂದಿಗೂ ನಿಮ್ಮೂರಿನಲ್ಲಿ ಆಡುತ್ತಾರೆ ಎಂದು ವಕ್ತೃಗೆ ವಿಚಾರಿಸಿದಾಗ, ಇಲ್ಲ ಎಂದರು. ಹಾಗೆಯೇ ಈ ಆಟದಲ್ಲಿ ಆಡುವ ಕ್ರಮ ಏನಾದರೂ



ನಿಮಗೆ ತಿಳಿದಿದೆಯೇ ಎಂಬ ಪ್ರಶ್ನೆಗೆ ಗೊತ್ತಿಲ್ಲ ಎಂಬ ಮಾತನ್ನು ಆಡಿದರು.

ಪಗಡೆಯ ಆಟದ ಎರಡು ಮೈದಾನಗಳಲ್ಲಿ ಒಂದೇ ರೀತಿಯ ರಚನೆಯನ್ನು ಹೊಂದಿವೆ. ಪಗಡೆಯ ಮೈದಾನವು ಒಂದು ಬಂಡೆಗಲ್ಲು ಮೇಲೆ ವೃತ್ತ ಆಕಾರದ ಒಂದು ವೃತ್ತವನ್ನು ಬಿಡಿಸಲಾಗಿದೆ. ಆ ವೃತ್ತವು ಸೈಕಲ್ ಚಕ್ರದಷ್ಟು ದೊಡ್ಡದು ಇದೆ. ವೃತ್ತದ ಸುತ್ತಲು ಸುಮಾರು ೨೫–೨೬ ಸಣ್ಣ ಸಣ್ಣ ಕುಣಿಗಳು ಇವೆ. ಹಾಗೆಯೇ ವೃತ್ತದ ಪೂರ್ವದಿಂದ ಪಶ್ಚಿಮಕ್ಕೂ ಮತ್ತು ಉತ್ತರದಿಂದ ದಕ್ಷಿಣಕ್ಕೂ ಸಣ್ಣ ಸಣ್ಣ ಕುಣಿಗಳನ್ನು ಸರಳ ರೇಖೆಯ ರೂಪದಲ್ಲಿ ಚಿತ್ರಿಸಿದ್ದಾರೆ. ಇದನ್ನು ಪಗಡೆಯ (ಕವಡೆ)ಗಳನ್ನು ಯಾವ ಕ್ರಮದಲ್ಲಿಟ್ಟು ಆಟವನ್ನು ಆಡುತ್ತಿದ್ದರು ಎಂದು ಅರಿಯಲು ಸಾಧ್ಯವಾಗಿಲ್ಲ. ಪಿಕಿಳಿಹಾಳ ಸುತ್ತ–ಮುತ್ತಲಿನ ಜನಪದರು ಈ ಆಟವನ್ನು ಹೇಗೆ ಆಡುತ್ತಿದ್ದರು ಎಂದು ಸಮೀಕ್ಷೆ ಮಾಡಿದಾಗ ಮಾತ್ರ ಪಗಡೆಯ ಆಟದ ಸ್ವರೂಪವನ್ನು ಅರಿಯಬಹುದಾಗಿದೆ. ಅಲ್ಲಿಯವರೆಗೆ ಆದಿಮಾನವನು ಪಗಡೆಯ ಆಟವನ್ನು ಒಂದು ಆಟದ ರೂಪದಲ್ಲಿ ಆಡುತ್ತಿದ್ದನು ಎಂಬ ನಂಬಿಕೆಯಾಗಿ ಉಳಿಸಿಕೊಂಡು ಇರಬಹುದಾಗಿದೆ.

**ಚಿರತೆಯ ಬೋನುಗಳು (ಪಂಜರಗಳು) :**

ಪಿಕಿಳಿಹಾಳ ಐತಿಹಾಸಿಕ ಸ್ಥಳದಲ್ಲಿ ಬಹಳಷ್ಟು ಗುಡ್ಡಗಳು ಇವೆ. ಈ ಗುಡ್ಡಗಳು ಅನೇಕ ಪ್ರಾಣಿಗಳು ವಾಸಿಸುವ ನೆಲೆಯಾಗಿತ್ತು. ನವಿಲು, ಕೋಗಿಲೆ, ಮೊಲ, ಜಿಂಕೆ, ಕಾಡುಬೆಕ್ಕು, ಉಡ, ಚಿರತೆ ಇತ್ಯಾದಿ ಪ್ರಾಣಿಗಳು ಗುಡ್ಡದಲ್ಲಿ ವಾಸಿಸುತ್ತಿದ್ದವು. ಇಂದು ಜಿಂಕೆಗಳು ಕಣ್ಣು ಮರೆಯಾಗಿವೆ. ವಕ್ತೃ ಸುಮಾರು ಎರಡು ವರ್ಷಗಳಿಂದ ಎರಡು ಚಿರತೆಗಳನ್ನು ಅರಣ್ಯ ಇಲಾಖೆಯವರು ಬಂಧಿಸಿಲಾಗಿದೆ ಎಂದು ಹೇಳಿದನು. ಈ ಆಧಾರದಿಂದ ಪ್ರಾಚೀನ ಕಾಲದಿಂದಲೂ ಚಿರತೆ ವಾಸಿಸುತ್ತಿದ್ದವು ಎಂಬವುದಕ್ಕೆ ಸಾಕ್ಷಿಯಾಗಿದೆ. ಇಂದಿಗೂ ಜನಪದರಲ್ಲಿ ಚಿರತೆಯ ಬೋನುಗಳು ಉಳಿದುಕೊಂಡು ಬಂದಿವೆ. ಇಲ್ಲಿ ಎರಡು ಚಿರತೆಯ ಬೋನುಗಳು ಇವೆ. ಒಂದು ಪ್ರಾಚೀನ ಚಿರತೆಯ ಬೋನು ಇನ್ನೊಂದು ಆಧುನಿಕ ಚಿರತೆಯ ಬೋನು. ಎರಡು ಬೋನುಗಳು ರಚನೆಯಲ್ಲಿ ಒಂದೇ ರೀತಿಯಲ್ಲಿವೆ. ಪ್ರಾಚೀನ ಚಿರತೆಯ ಬೋನು ಜನವಸತಿಯ ಮನೆಯ ಮರಡಿಯ ಹತ್ತಿರದಲ್ಲಿದೆ. ಆಧುನಿಕ ಚಿರತೆಯ ಬೋನು ಜನವಸತಿಯ ಮನೆಯ ಸ್ವಲ್ಪ





ದೂರದಲ್ಲಿದೆ. ಈ ಎರಡು ಬೋನುಗಳಲ್ಲಿ ಒಂದು ನಾಯಿ ಕಟ್ಟುವಷ್ಟು ಮತ್ತು ಅದನ್ನು ತಿನ್ನಲು ಬರುವ ಚಿರತೆ ಹೋಗುವಷ್ಟು ಜಾಗ ಮಾತ್ರ ಇದೆ. ಈ ಬೋನನ್ನು ಸಣ್ಣ ಸಣ್ಣ ಕಲ್ಲುಗಳಿಂದ ಜೋಡಿಸಿ ನಿರ್ಮಿಸಲಾಗಿದೆ. ಹೀಗೆ ಜೋಡಿಸಿರುವ ಕಲ್ಲುಗಳಿಗೆ ಯಾವುದೇ ಗಾರೆ ಅಥವಾ ಗಚ್ಚನ್ನು ಲೇಪಿಸಿರುವುದು ಕಂಡು ಬರುವುದಿಲ್ಲ. ಇಲ್ಲಿ ಸಿಗುವ ಸಾಕಷ್ಟು ಕಲ್ಲುಗಳನ್ನು ಬಳಸಿಕೊಂಡು ಸುಮಾರು ೪-೫ ಅಡಿ ಉದ್ದ, ೨-೩ ಅಡಿ ಅಗಲಮತ್ತು ೩-೪ ಅಡಿ ಎತ್ತರವನ್ನು ಚಿರತೆಯ ಬೋನುಗಳು ಹೊಂದಿವೆ. ಇದರ ಒಳಗಡೆಯ ಕೊನೆಯ ಭಾಗದಲ್ಲಿ ನಾಯಿ ಕಟ್ಟುತ್ತಿದ್ದರು. ಚಿರತೆ ನಾಯಿಯನ್ನು ತಿನ್ನಲು ಬಂದಾಗ ಗೇಟಿನ ರೀತಿಯಲ್ಲಿ ತನ್ನಷ್ಟಕ್ಕೆ ತಾನು ಮುಚ್ಚಿಕೊಳ್ಳುವ ಕಲ್ಲನ್ನು ಸಿದ್ಧಪಡಿಸುತ್ತಿದ್ದರು. ಅದು ಚಿರತೆಯ ಪ್ರವೇಶ ಮಾಡಿದ ನಂತರ ನಾಯಿಯನ್ನು ಬೇಟೆಯಾಡುವ ಸಮಯದಲ್ಲಿ ಕಲ್ಲಿಗೆ ಸ್ಪರ್ಶವಾದರೆ ತಕ್ಷಣ ಬಂಧಿಸುವ ಪರಿಯನ್ನು ಬೋನುಗಳು ಹೊಂದಿವೆ. ಈ ಚಿರತೆಯ ಬೋನು ಆಧುನಿಕ ಅರಣ್ಯಾಯ ಇಲಾಖೆಯ ಬೋನುಗಳಂತೆ ಕಂಡು ಬರುತ್ತವೆ.

**ಕೊಡಪ್ಪನ ಮರಡಿ:**

ಮಾನವನಿಗೆ ವಾಸಿಸಲು ಗಾಳಿ, ನೀರು, ಆಹಾರ ಮತ್ತು ಉತ್ತಮ ಪರಿಸರದ ಅವಶ್ಯಕತೆ ಇದೆ. ಅದರಲ್ಲಿ ನೀರಿನ ಅವಶ್ಯಕತೆ ಪ್ರಮುಖವಾಗಿದೆ. ಇಲ್ಲಿಯ ಜನರು ಪ್ರಾಚೀನ ಕಾಲದಿಂದಲ್ಲೂ ನೀರನ್ನು ಕುಡಿಯಲು ಯಾವ ಮೂಲ ಉಪಯೋಗಿಸುತ್ತಿದ್ದರು ಎಂದು ತಿಳಿಯಲು ಸಾಧ್ಯವಾಗಿಲ್ಲ. ಇಲ್ಲಿ ಒಂದು ದೊಡ್ಡ ಬಂಡೆಗಲ್ಲು ಇದೆ. ಈ ಬಂಡೆಗಲ್ಲಿನ ಸುತ್ತ ಸುಮಾರು ೪೦-೫೦ ಅಡಿಯವರೆಗೆ ಕಲ್ಲುಗಳಿಂದ ಆವರಿಸಿದ ಬೆಟ್ಟ ಇದೆ. ದೊಡ್ಡ ಬಂಡೆಗಲ್ಲಿನೊಳಗೆ ಒಂದು ಕೊಡದಷ್ಟು (ಬಿಂದಿಗೆ) ನೈಸರ್ಗಿಕವಾಗಿ ಕೊರೆಯಲಾಗಿದೆ. ಇದರ ರಚನೆಯನ್ನು ಅವಲೋಕನೆ ಮಾಡಿದಾಗ ಮಾನವನ ಸೃಷ್ಟಿಗಿಂತ ನೈಸರ್ಗಿಕ ಸೃಷ್ಟಿಗೆ ಹೆಚ್ಚು ಹತ್ತಿರ ಕಾಣುತ್ತದೆ. ಇಂದಿಗೂ ಮಳೆಗಾಲದಲ್ಲಿ ನೀರು ಸಂಗ್ರಹವಾಗಿರುತ್ತದೆ. ದನ-ಕರು, ಕುರಿಗಳು ಮತ್ತು ಸುತ್ತಲಿನ ರೈತರಿಗೆ ಕೊಡಪನ ಮರಡಿಯ ಬಂಡೆಗಲ್ಲಿನ ನೀರು ಆಶ್ರಯವಾಗಿವೆ. ಇದಕ್ಕೆ ಯಾವುದೇ ಮರಳಿನ ಆಶ್ರಯ ಇಲ್ಲ. ದೊಡ್ಡ ಬಂಡೆಗಲ್ಲಿನಲ್ಲಿ ನೀರು ಬರುತ್ತದೆ. ಈ ನೀರು ಒಂದು ಕೊಡದಷ್ಟು ಮಾತ್ರ ಸಂಗ್ರಹವಾಗುಷ್ಟು ಜಾಗ ಇದೆ. ಒಂದು ಕೊಡದಷ್ಟು ನೀರನ್ನು ತೆಗದುಕೊಂಡರೆ ಮತ್ತೆ ಅಷ್ಟು ನೀರು ಕ್ಷಣದಲ್ಲಿ ಸಂಗ್ರಹವಾಗುತ್ತದೆ. ಈ ನೀರು ತುಂಬಾ ತಣ್ಣಗೆ ಮತ್ತು ಶುದ್ಧವಾಗಿರುತ್ತವೆ. ಕೊಡದಷ್ಟು ನೀರನ್ನು ಪೂರೈಸುವ ಸ್ಥಳವಾಗಿರುವುದಕ್ಕೆ ಕೊಡಪನ ಮರಡಿ ಎಂದು ಸ್ಥಳೀಯರು ಕರೆಯುತ್ತಾರೆ.

**ಹಿರಿಯ (ಹಿರೆಯ) ಸಂದಿನ ಏಳುಗುಂಡಿನ ಹೊಲ:**

ಸುಮಾರು ೮೦-೧೦೦ ಅಡಿ ಎತ್ತರದಷ್ಟು ತ್ರಿಭುಜ ಆಕಾರದಲ್ಲಿ ಮರಡಿಗಳು



ಇವೆ. ಈ ಮರಡಿಗಳ ಉತ್ತರ ದಿಕ್ಕಿಗೆ ಸುಮಾರು ೫೦ ಅಡಿಗಳ ಅಂತರದಲ್ಲಿ ಉಳುಮೆ ಮಾಡುತ್ತಿರುವ ಹೊಲ ಇದೆ. ಈ ಹೊಲದ ಮದ್ಯಭಾಗದಲ್ಲಿ ಹತ್ತು ಅಡಿಯಷ್ಟು ಜಾಗ ಆಕ್ರಮಿಸಿರುವ ಅಷ್ಟೆ ಎತ್ತರದ ಏಳು ಗುಂಡುಗಳು (ಬಂಡೆಗಲ್ಲ) ಇವೆ. ಒಂದು ಗುಂಡಿನಿಂದ ಇನ್ನೊಂದು ಗುಂಡಿಗೆ ಸುಮಾರು ೨೦-೨೫ ಅಡಿ ಅಂತರದಲ್ಲಿ ಷಟ್ಕೋನದ ಆಕಾರದಲ್ಲಿರುವಂತೆ ಕಂಡು ಬರುತ್ತವೆ. ಈ ಗುಂಡುಗಳು ಇರುವ ಹೊಲವನ್ನು ಹಿರೇಯ ಸಂದಿನ ಏಳು ಗುಂಡಿನ ಹೊಲ ಎಂದು ಕರೆಯುತ್ತಾರೆ.

ಈ ಹೊಲದ ಷಟ್ಕೋನ ಗುಂಡಿನೊಳಗೆ ಒಂದು ಬಂಗಾರ ಗುಡಿ ಇದೆ. ಈ ಗುಡಿಯನ್ನು ರಕ್ಷಣೆಯನ್ನು ಮಾಡಲು ಏಳು ಎಡೆಯ ಸರ್ಪ ಮತ್ತು ಸೊಕ್ಕಿನ ಕೋಣ ಕಾವಲು ಇವೆ. ಇದನ್ನು ಯಾರೊ ಒಮ್ಮೆ ಕಳ್ಳತನ ಮಾಡಲು ಬಂದಿದ್ದರು. ಈ ಸರ್ಪ ಮತ್ತು ಕೋಣ ದಾಳಿ ಮಾಡಿ ಬಂಗಾರ ಗುಡಿಯನ್ನು ರಕ್ಷಣೆ ಮಾಡಿವೆ ಎಂಬ ಐತಿಹ್ಯ ಇದೆ. ಇಂದಿಗೂ ಈ ಎರಡು ಪ್ರಾಣಿಗಳು ರಕ್ಷಣೆಯನ್ನು ಮಾಡುತ್ತೀವೆ ಎಂಬ ನಂಬಿಕೆ ಸ್ಥಳೀಯರಲ್ಲಿದೆ. ಈ ಐತಿಹ್ಯದ ಆಧಾರದ ಮೇಲೆ ಪುರಾತತ್ವ ಮತ್ತು ಚರಿತ್ರೆಯ ತಜ್ಞನರು ಉತ್ಖನನ ಮಾಡಿದರೆ, ಯಾವುದಾದರೂ ಸ್ಥಳದ ಕುರುಹುಗಳುಸಿಗುವ ಊಹೆ ಮಾಡಬಹುದಾಗಿದೆ. ಕೆಲವೊಂದು ಐತಿಹ್ಯಗಳು ಸೂಕ್ಷ್ಮ ಮಾಹಿತಿಯನ್ನು ನೀಡುತ್ತವೆ. ಇನ್ನು ಕೆಲವೊಂದು ಐತಿಹ್ಯಗಳು ಸಹಜ ದೃಷ್ಟಿಯಿಂದ ಸೃಷ್ಟಿಯಾಗಿರುತ್ತವೆ. ಇವುಗಳಿಂದ ಯಾವುದೇ ಅಧ್ಯಯನಕ್ಕೆ ಉಪಯುಕ್ತ ದಾಖಲೆಗಳು ಲಭ್ಯವಾಗುವುದಿಲ್ಲ. ಕೆಲವು ಸಂದರ್ಭದಲ್ಲಿ ಐತಿಹ್ಯಗಳು ಸಾಹಿತ್ಯ, ಪುರಾತತ್ವ ಮತ್ತು ಚರಿತ್ರೆಯ ತಜ್ಞನರಿಗೆ ಉತ್ತಮ ಮಾಹಿತಿಯನ್ನು ಪೂರೈಸಿ ಸಹಾಯಕವಾಗಿರುವುದು ಕಾಣಬಹುದು.

**ಮೇಗಳ ಹನುಮಂತನ ಮೂರ್ತಿ:**



ಭಾರತ ದೇಶದ ಜನಪದರಿಗೆ ರಾಮಾಯಣ ಮಹಾಕಾವ್ಯ ಕಾಲದಿಂದಲೂ ಹನುಮಂತನ ವ್ಯಕ್ತಿತ್ವ ಪರಿಚಯವಾಗಿದೆ. ಪ್ರತಿಯೊಂದು ಊರಿನಲ್ಲಿ ಒಂದು ಹನುಮಂತನ ಮೂರ್ತಿ ಮತ್ತು ಹನುಮಂತನ ದೇವಾಲಯ ಇರುತ್ತವೆ. ಹನುಮಂತನ ಮೂರ್ತಿ ಮತ್ತು ಹನುಮಂತನ ದೇವಾಲಯದ ಮೇಲೆ ಅನೇಕ ಗಾದೆ

ಮತ್ತು ಐತಿಹ್ಯಗಳು ನಾಡಿನಲ್ಲಿವೆ. "ಊರು ಸುಟ್ಟರು ಹನುಮಪ್ಪ ಹೊರಗೆ" ಅಥವಾ ಊರು ಸುಟ್ಟರು ಹನುಮಂತ ಸುಡುವುದಿಲ್ಲ" ಎಂಬ ಗಾದೆಗಳು ಇವೆ. ಈ ಗಾದೆಯ ಮಾತಿನಿಂದ ಊರಿನ ರಚನೆಯನ್ನು ತಿಳಿಯಲು ಅವಕಾಶವಿದೆ. ಹನುಮಂತನ ಮೂರ್ತಿ ಮತ್ತು ದೇವಾಲಯಗಳು ಹಳ್ಳಿಯ ಉತ್ತರದ ತುತ್ತತುದಿಯ ಭಾಗದಲ್ಲಿರುತ್ತವೆ. ಹನುಮಂತನ ಮೂರ್ತಿಯ ದೇವಾಲಯವು ಹೆಚ್ಚಾಗಿ ದಕ್ಷಿಣ ಅಭಿಮುಖವಾಗಿ ಕಟ್ಟಲಾಗಿರುತ್ತದೆ. ಮೇಲಿನ ಗಾದೆಯ ಹಿನ್ನಲೆಯಲ್ಲಿ ಹನುಮಂತನ ಮೂರ್ತಿಯ ದೇವಾಲಯ ಅವಲೋಕನೆಯನ್ನು ಮಾಡಲು ಸಾಧ್ಯವಿದೆ. ಪಿಕಳಿಹಾಳ ಗ್ರಾಮದ ಉತ್ತರದ ತುತ್ತತುದಿಯಲ್ಲಿ ಈ ದೇವಾಲಯ ಇದೆ. ಇದನ್ನು ಬೇರೆ ಬೇರೆ ಹಿನ್ನಲೆಯಲ್ಲಿ ಚರ್ಚೆಯನ್ನು ಮಾಡಿದಾಗ ಇನ್ನಷ್ಟು ಚಾರಿತ್ರಿಕ ಅಂಶಗಳು ಸಿಗುತ್ತವೆ.

ಈಗಿರುವ ಹನುಮಂತನ ಮೂರ್ತಿಯನ್ನು ಸ್ಥಳೀಯರು ಮೇಗಳ ಹನುಮಂತನ ಮೂರ್ತಿ ಎಂದು ಕರೆಯುತ್ತಾರೆ. ಒಂದೇ ಹನುಮಂತನಮೂರ್ತಿ ಗ್ರಾಮದಲ್ಲಿದ್ದರೆ ಹನುಮಂತ ಮೂರ್ತಿ ಎಂದು ಸಹಜವಾಗಿ ಕರೆಯುತ್ತಿದ್ದರು. ಆದರೆ ಇಲ್ಲಿ ಒಂದಕ್ಕಿಂತ ಹೆಚ್ಚು ಮೂರ್ತಿಗಳು ಇರುವದರಿಂದ ಬೇರೆ ಬೇರೆ ಹನುಮಂತನ ಮೂರ್ತಿ ಎಂದು ಕರೆಯುತ್ತಾರೆ. ಅಂದರೆ ಮೇಗಳ ಹನುಮಂತನ ಮೂರ್ತಿ ಇದೆ ಎಂದಾದರೆ ಕೆಳಗಿನ ಹನುಮಂತನ ಮೂರ್ತಿಯು ಇದೆ ಎಂದು ಊಹೆ ಮಾಡಬಹುದು.ಒಂದೊಂದು ಕುರುಹುಗಳ ಹಿನ್ನಲೆಯಲ್ಲಿ ಸಂಶೋಧಿಸಿದಾಗ ಹೆಚ್ಚು ಐತಿಹಾಸಿಕ ದಾಖಲೆಗಳು ದೊರೆಯುತ್ತವೆ. ಇಲ್ಲಿಯ ಪ್ರತಿಯೊಂದು ದೇವಾಲಯ, ಮೂರ್ತಿಗಳು, ಕಲ್ಲುಗಳು ಅಗಾದ ಐತಿಹಾಸಿಕ ಸತ್ಯವನ್ನು ತೋರಿಸುವ ಕುರುಹುಗಳಾಗಿವೆ. ಇವುಗಳನ್ನು ಚಾರಿತ್ರೀಕ ಅಂಶಗಳ ಆಧಾರದ ಮೇಲೆ ಅಧ್ಯಯನ ಮಾಡಿದಾಗ ಪಿಕಳಿಹಾಳದ ನೈಜ ಅಂಶಗಳು ಅರಿಯಲು ಸಾಧ್ಯವಾಗುತ್ತದೆ.

**ಸೀತೆಯ ಸೆರಗು:**

ಎ.ಕೆ.ರಾಮಾನುಜನ್ ಅವರು ಭಾರತ ದೇಶದಲ್ಲಿ ಒಂದು ರಾಮಾಯಣ ಇಲ್ಲ. ಪ್ರತಿಯೊಂದು ಊರಿನಲ್ಲಿ, ಪ್ರತಿಯೊಂದು ಸಮುದಾಯದಲ್ಲಿ ಒಂದೊಂದು ರಾಮಾಯಣಗಳು ಲಭ್ಯವಾಗುತ್ತವೆ. ಇಲ್ಲಿಯ ರಾಮ, ಲಕ್ಷ್ಮಣ, ಸೀತೆ, ಹನುಮಂತ ಮತ್ತು ಇತರ ಪಾತ್ರಗಳು ತಮ್ಮ ವ್ಯಕ್ತಿತ್ವ ಮತ್ತು ತಮ್ಮ ದಿನನಿತ್ಯದ ಬದುಕಿಗೆ ಹೊಂದಿಕೆಯಾಗುವಂತೆ ಕಟ್ಟಿಕೊಳ್ಳಲಾಗಿದೆ. ಇದರ ಹಿನ್ನಲೆಯಲ್ಲಿ "ಮುನ್ನೂರು ರಾಮಾಯಣಗಳು" ಈ ದೇಶದಲ್ಲಿವೆ ಎಂದು ಅಧ್ಯಯನಗಳ ಮೂಲಕ ತೋರಿಸಿದ್ದಾರೆ. ಪ್ರತಿಯೊಂದು ಐತಿಹಾಸಿಕ ಸ್ಥಳದ





ಅವಲೋಕನೆಯಲ್ಲಿ ರಾಮನ ಪಾದ, ಸೀತೆಯ ಸೆರಗು, ಹನುಮಂತನ ಬಾಲ, ಪಾಂಡವರು ಕುಳಿತ ಜಾಗ, ಭೀಮನ ಗದೆ ಇತ್ಯಾದಿ ಪಾತ್ರಗಳ ಮೇಲೆ ಐತಿಹ್ಯ ಮತ್ತು ಕಥೆಯನ್ನು ಕಾಣುತ್ತವೆ. ಇನ್ನು ರಾಮಾಯಣ, ಮಹಾಭಾರತ ಮತ್ತು ಪೌರಣಿಕ ವ್ಯಕ್ತಿಗಳ ಮತ್ತು ಅವರ ಪಾತ್ರಗಳ ಮೇಲೆ ಅನೇಕ ಕಥೆಗಳು ಮತ್ತು ಐತಿಹ್ಯಗಳು ದೇಶದ ಉದ್ದ-ಹಗಲಕ್ಕೂ ಲಭ್ಯವಾಗುತ್ತವೆ. ಪಿಕಿಳಿಹಾಳ ದೊಡ್ಡ ಬಂಡೆಗಲ್ಲಗಳ ಮೇಲೆ ಕೆಂಪು ಬಣ್ಣದ ಪಟ್ಟಿ ಮೂಡಿದೆ. ಅದನ್ನು ಸ್ಥಳೀಯರು ಸೀತೆಯ ಸೆರಗು ಎಂದು ಕರೆಯುತ್ತಾರೆ. ಇದು ಒಂದರ ಮೇಲೆ ಒಂದು ಮೂರರಿಂದ-ನಾಲ್ಕು ಗುಂಡಗಳು (ಕಲ್ಲುಗಳು) ಇವೆ. ಎಲ್ಲ ಗುಂಡುಗಳ (ಕಲ್ಲುಗಳು) ಎತ್ತರ ೬೦-೮೦ ಅಡಿಯವರೆಗೆ ಮತ್ತು ಅಗಲ ೧೦೦-೨೦೦ ಅಡಿಯವರೆಗೆ ವ್ಯಾಪಿಸಿವೆ. ಈ ಬೆಟ್ಟದ ಮೇಲಿಂದ ಕೆಳಗಿನವರೆಗೆ ೧೦-೧೫ ಅಡಿಯ ಅಗಲದವರೆಗೆ ಕೆಂಪುಬಣ್ಣ ಮತ್ತು ಹಸಿರು ಬಣ್ಣ ಮಿಶ್ರಿತವಾಗಿರುವ ಪಟ್ಟಿ ಕಂಡು ಬರುತ್ತದೆ. ಇದನ್ನು ಜನಪದರು ಸೀತೆಯ ಸೆರಗು ಎನ್ನುವರು.

**ಕುದುರೆ ಮರಡಿ:**

ಈ ಮರಡಿಯಲ್ಲಿ ಯಾವುದೇ ಐತಿಹಾಸಿಕ ಅಂಶಗಳು ಕಂಡು ಬರುವುದಿಲ್ಲ. ಇದು ಸುಮಾರು ೪೦-೫೦ ಅಡಿ ಎತ್ತರ ಮತ್ತು ಅಗಲ ೩೦-೪೦ ಅಡಿಯವರೆಗೆ ವ್ಯಾಪಿಸಿದೆ. ಇದರ ಆಕಾರವು ಕುದುರೆಯ ರೀತಿಯಲ್ಲಿರುದರಿಂದ ಇದನ್ನು ಸ್ಥಳೀಯರು ಕುದುರೆಯ ಮರಡಿ ಎಂದು ಕರೆಯುತ್ತಾರೆ.

**ಪಗಡೆಯ ಗುಂಡಿನ ಲಿಂಗ:**

ಪಿಕಿಳಿಹಾಳನ ಪರಿಸರದಲ್ಲಿರುವ ಕಲ್ಲಿನಿಂದ ಈ ಲಿಂಗವನ್ನು ರೂಪಿಸಲಾಗಿಲ್ಲ. ಪಿಕಿಳಿಹಾಳ ಪ್ರದೇಶದಲ್ಲಿ ಬಿಳಿಯ ಕಲ್ಲುಗಳು ಮಾತ್ರ ದೊರೆಯುತ್ತವೆ. ಪಗಡೆಯ ಗುಂಡಿನಲ್ಲಿರುವ ಲಿಂಗವು ಕರಿಯ ಕಲ್ಲಿನಿಂದ ರೂಪಿಸಲಾಗಿದೆ. ಲಿಂಗದ ಅರ್ಧ ಭಾಗ ಮಾತ್ರ ಇದೆ. ಇನ್ನು ಅರ್ಧ ಭಾಗ ಕಂಡು ಬರುವುದಿಲ್ಲ. ಲಿಂಗವು ಪಗಡೆಯ ಮೈದಾನ ಚಿತ್ರ ಹೊಂದಿರುವ ಮರಡಿಯಲ್ಲಿರುವುದರಿಂದ ಪಗಡೆಯ ಗುಂಡಿನ ಲಿಂಗ ಎನ್ನುವರು. ತ್ರಿಭುಜ ಆಕಾರದಲ್ಲಿ ದೊಡ್ಡ ದೊಡ್ಡ ಗುಂಡುಗಳು (ಕಲ್ಲುಗಳು) ಇವೆ. ಈ ಗುಂಡಗಳ ಮಧ್ಯ ಕರಿಯ ಕಲ್ಲಿನ ಲಿಂಗ ಪ್ರತಿಷ್ಠಾಪಿಸಲಾಗಿದೆ. ಇತ್ತಿಚ್ಚಿನ ಯಾವುದೋ ಕಾಲದಲ್ಲಿ ಈ ಲಿಂಗವನ್ನು ಪ್ರತಿಷ್ಠಾಪಿಸಲಾಗಿರುವುದೆಂದು ಊಹೆ ಮಾಡುಬಹುದಾಗಿದೆ.

**ಜನವಸತಿಯ ಮನೆಗಳು:**

ಭೂಮಿಯ ಮೇಲೆ ಇರುವ ಪ್ರಾಣಿಗಳಲ್ಲಿ ಮಾನವನು ಒಂದು ಪ್ರಾಣಿ.



ಎಲ್ಲ ಪ್ರಾಣಿಗಳಗಿಂತ ಮಾನವನು ಭಾಷೆ ಮತ್ತು ಬುದ್ಧಿಶಕ್ತಿಯಿಂದ ಭಿನ್ನವಾಗಿದ್ದಾನೆ. ಮಾನವನು ತಾನು ಸೃಷ್ಟಿಸಿಕೊಂಡ ಭಾಷೆಯಿಂದ ತನ್ನ ಭಾವನೆಗಳನ್ನು ಇನ್ನೊಬ್ಬರಿಗೆ ತಿಳಿಸಲಾಗುತ್ತದೆ. ತನ್ನ ಬುದ್ಧಿಶಕ್ತಿಯಿಂದ ಇನ್ನೊಬ್ಬರ ಭಾವನೆಗಳನ್ನು ಅರ್ಥಮಾಡಿಕೊಳ್ಳುವ ಮನೋಭಾವನೆಯನ್ನು ರೂಢಿಸಿಕೊಳ್ಳಲಾಗಿದೆ. ಮಾನವನ ಬೌದ್ಧಿಕ ಜ್ಞಾನದಿಂದ ಆದಿಮಾನವನಿಂದ ಆಧುನಿಕ ಮಾನವನವರೆಗೆ ಬೇರೆ ಬೇರೆ ರೀತಿಯ ಆವಿಷ್ಕಾರಗಳನ್ನು ಮಾಡಲಾಗಿದೆ. ಈ ಆವಿಷ್ಕಾರಗಳಲ್ಲಿ ತನ್ನ ಬದುಕನ್ನು ಹೊಸ ಹೊಸ ನೆಲೆಯಲ್ಲಿ ಕಟ್ಟಿಕೊಳ್ಳಲಾಗಿದೆ. ಆದಿಮಾನವನು ಗವಿಗಳಿಂದ ಬದುಕನ್ನು ಆರಂಭಸಿ. ಇಂದಿನ ಬಹುಮಹಡಿಯ ಕಟ್ಟಡಗಳವರೆಗೆ ಬದುಕನ್ನು ವಿಸ್ತರಿಸಿಕೊಳ್ಳಲಾಗಿದೆ. ಅವನ ಬೌದ್ಧಿಕ ಸಂಪತ್ತಿನಿಂದ ಪರಸರದಲ್ಲಿ ಬಹುದಿನಗಳವರೆಗೆ ಉಳಿಯುವ ಸಂಪನ್ಮೂಲವನ್ನು ಅರಿತುಕೊಂಡನು. ಅಂದರೆ ತನ್ನ ಪರಿಸರದಲ್ಲಿ ಸಿಗುವ ಮಣ್ಣು, ಕಲ್ಲು ಮತ್ತು ಮರದ ಕಟ್ಟಿಗೆಯನ್ನು ಬಳಸಿಕೊಂಡು ವಾಸಿಸಲು ಮನೆಯನ್ನು ರೂಪಿಸಿಕೊಳ್ಳಲು ಆರಂಭಿಸಿಲಾಗಿದೆ. ಮಾನವನು ಭೂಮಿಯ ಮೇಲೆ, ಭೂಮಿಯೊಳಗೆ ಮತ್ತು ಮರದ ಮೇಲೆ ಮಳೆ, ಗಾಳಿ, ಬಿಸಿಲು ಮತ್ತು ಇತರ ನೈಸರ್ಗಿಕ ವಿಕೋಪದಿಂದ ರಕ್ಷಿಸಲು ಮನೆಗಳನ್ನು ಕಟ್ಟಿಕೊಳ್ಳಲು ಸುರುವ (ಆರಂಭ) ಮಾಡಲಾಗಿದೆ.

ಮಾನವನು ಭೂಮಿಯ ಮೇಲೆ ಇಂದಿಗೂ ಮನೆಯನ್ನು ಬೇರೆ ಬೇರೆ ವಿಧಾನದಲ್ಲಿ ಕಟ್ಟಿಕೊಳ್ಳಲಾಗುತ್ತಿದೆ. ಭೂಮಿಯ ಮೇಲೆ ವಿವಿಧ ಹವಮಾನದ ಅನುಕೂಲಕ್ಕೆ ತಕ್ಕಂತೆ ಮನೆಯ ಸ್ವರೂಪವನ್ನು ರೂಪಿಸಿಲಾಗಿದೆ. ಬುಡಕಟ್ಟು ಸಮುದಾಯಗಳು ಮರದ ಮೇಲೆ ಮನೆಯನ್ನು ಕಟ್ಟಿಕೊಳ್ಳಲಾಗುತ್ತದೆ. ಕೆಲವು ಪರಿಸರದಲ್ಲಿ ಭೂಮಿಯೊಳಗೆ ಮನೆಯನ್ನು ಮಾನವನು ಕಟ್ಟಿಕೊಂಡಿದ್ದಾನೆ. ಆದರೆ ಮರದ ಮೇಲೆ, ಭೂಮಿಯೊಳಗಿನ ಮನೆಗಿಂತ ಭೂಮಿಯ ಮೇಲೆ ಕಟ್ಟಿಕೊಳ್ಳುವುದು ಸುಲಭವೆಂದು ಅರಿತುಕೊಂಡನು. ಅಂದಿನ ಇಂದಿನವರೆಗೆ ಮಾನವನು ಭೂಮಿಯ ಮೇಲೆ ಹೆಚ್ಚು ಮನೆಗಳನ್ನು ವಿವಿಧ ಪ್ರಕಾರದಲ್ಲಿ ಕಟ್ಟಲಾಗಿದೆ. ತಾನು ಜೀವಿಸುವ ಪರಿಸರದಲ್ಲಿ ಸಿಗುವ ಕಲ್ಲುಗಳು,



ಮಣ್ಣು, ಮರದ ಕಟ್ಟಿಗೆಗಳಿಂದ ಮನೆಯನ್ನು ನಿರ್ಮಿಸಿಕೊಳ್ಳಲಾಗಿದೆ.

ಹೀಗೆ ಕಟ್ಟಿರುವ ಮನೆಗಳಲ್ಲಿ ಹೆಚ್ಚು ದಿನದವರೆಗೆ ಬಾಳುವ ಮನೆಯನ್ನು ಅರಿತುಕೊಂಡನು. ಮನೆಯ ಮಣ್ಣಿನಿಂದ ಮತ್ತು ಕಟ್ಟಿಗೆಗಳಿಂದ ನಿರ್ಮಿಸಿದರೆ ಹೆಚ್ಚು ದಿನದವರೆಗೆ ಬಾಳುವುದು ವಿರಳವೆಂದು ಅರಿತುಕೊಳ್ಳಲಾಗಿದೆ. ಕಲ್ಲಿನಿಂದ ಕಟ್ಟಿದ ಮನೆಗಳು ಹೆಚ್ಚು ದಿನದವರೆಗೆ ಅಸ್ತಿತ್ವದಲ್ಲಿರುತ್ತವೆ ಮತ್ತು ಹೆಚ್ಚು ಭದ್ರತೆಯನ್ನು ಹೊಂದಿರುತ್ತವೆಂದು ತಿಳಿದು ಕಟ್ಟಲು ಆರಂಭಸಿಲಾಗಿದೆ.



ಪಿಕಿಳಿಹಾಳ ಐತಿಹಾಸಿಕ ಸ್ಥಳದಲ್ಲಿ ಕಲ್ಲಿನಿಂದ ಮನೆಗಳ ಕಟ್ಟಿರುವ ಬುನಾದಿಗಳು ಮತ್ತು ಬಸ್‌ಮೆಟ್ಟಗಳು (ಅಡಿಪಾಯ) ಇವೆ. ಈ ಮನೆಗಳು ಒಂದರ ಪಕ್ಕದಲ್ಲಿ ಒಂದು ಮನೆಯನ್ನು ಕಟ್ಟಲಾಗಿದೆ. ಇಲ್ಲಿಯ ಮನೆಗಳು ಸುಮಾರು ೧೦-೧೫ ಅಡಿ ಅಗಲ ಮತ್ತು ೧೫ ಅಡಿಯು ಅಗಲದವರೆಗೆ ವಿಸ್ತೀರ್ಣತೆಯನ್ನು ಹೊಂದಿವೆ. ಮಾನವರು ಮನೆಯನ್ನು ಕಟ್ಟಲು ಪಿಕಿಳಿಹಾಳ ಗುಡ್ಡದಲ್ಲಿ (ಬೆಟ್ಟಗಳು) ದೊರೆಯುವ ಕಲ್ಲುಗಳನ್ನು ಬಳಸಿ ಕಟ್ಟಲಾಗಿದೆ. ಮನೆಗೆ ಕಟ್ಟಿರುವ ಕಲ್ಲುಗಳು ಹಳೆಯ ಕಾಲದ ಕೋಟೆಗಳಿಗೆ ಕಟ್ಟಿರುವ ದೊಡ್ಡ ಗಾತ್ರದ ಕಲ್ಲುಗಳನ್ನು ಬಳಸಿಲ್ಲ. ಇಲ್ಲಿ ಕಟ್ಟಿರುವ ಮನೆಗಳ ಕಲ್ಲುಗಳು ಚಿಕ್ಕ ಚಿಕ್ಕ ಕಲ್ಲುಗಳು ಆಗಿವೆ. ಹಾಗೆಯೇ ಮನೆಯ ಕಟ್ಟಲು ಹಗಲವಾಗಿರುವ ಮತ್ತು ತೆಳವಾದ ಕಲ್ಲುಗಳನ್ನು ಬಳಸಿರುವುದು ಕಂಡುಬರುತ್ತದೆ.



ಪಿಕಿಳಿಹಾಳ ಐತಿಹಾಸಿಕ ಸ್ಥಳದಲ್ಲಿರುವ ಮನೆಯ ಬುನಾದಿಯನ್ನು

ಅರಿಯಲು ಬಿಸ್‌ಮೆಟನಿಂದ (ಅಡಿಪಾಯ)ಸಾಧ್ಯವಿದೆ. ಮನೆಗಳು ಬುನಾದಿಯಿಂದ ಭೂಮಿಯ ೨-೩ ಅಡಿಯವರೆಗೆ ಗೋಡೆಯನ್ನು ಮಾತ್ರ ಕಾಣುತ್ತೇವೆ. ಎಲ್ಲಾ ಗೋಡೆಗಳು ೨-೩ ಅಡಿಗಳವರೆಗೆ ಕಂಡುಬರುವುದಿಲ್ಲ. ಈ ಮನೆಗಳು ಪ್ರಾಚೀನ ಕಾಲದಲ್ಲಿ ಎಷ್ಟು ಎತ್ತರದ ಗೋಡೆಯನ್ನು ಹೊಂದಿದ್ದವು ಎಂದು ಹೇಳಲು ಸಾಧ್ಯವಾಗುವುದಿಲ್ಲ. ಇಂದಿನ ಅವಲೋಕನೆಯ ಪ್ರಕಾರ ಭೂಮಿಯಿಂದ ಮನೆಯ ಗೋಡೆಗಳು ಎರಡು ಅಡಿಯವರೆಗೆ ಮಾತ್ರ ಉಳಿದುಕೊಂಡಿವೆ. ಭೂಮಿಯ ಮೇಲೆಯಿಂದ ಈ ಮನೆಗಳ ಬುನಾದಿಗಳು ಎಷ್ಟು ಆಳದವರೆಗೆ ಇರಬಹುದು ಎಂದು ಅಂದಾಜಿಸಲು ಸಾಧ್ಯವಾಗಿಲ್ಲ. ಈ ಎಲ್ಲ ಪ್ರಶ್ನೆಗಳಿಗೆ ಮನೆಗಳನ್ನು ಬೇರೆ ಬೇರೆ ನೆಲೆಯಲ್ಲಿ ಸಂಶೋಧನೆಯನ್ನು ಮಾಡಿದಾಗ ಉತ್ತರ ಕಂಡುಕೊಳ್ಳಲು ಅವಕಾಶವಿದೆ.

ಈ ಮನೆಗಳು ಎರಡು ಬೆಟ್ಟಗಳ ಮಧ್ಯದಲ್ಲಿವೆ. ಮನೆಗಳ ಪಕ್ಕದಲ್ಲಿ ಡಮಣಿ ಕಲ್ಲು (ಸಂಗೀತ ಕಲ್ಲು), ಆದಿಮಾನವ ಬಿಡಿಸಿದ ಚಿತ್ರಗಳು, ಪಗಡೆಯ ಮೈದಾನ, ಮಡಿಕೆಯ ಚೂರುಗಳು ಮತ್ತು ಬೆಂಕಿ ಉತ್ಪಾದಿಸುವ ಕಲ್ಲುಗಳು (ಚಕಮುಕ್ಕ ಕಲ್ಲುಗಳು), ಕಂಬಾರ ಕುರುಹುಗಳು ಮನೆಗಳ ಹತ್ತಿರದಲ್ಲಿವೆ. ಈ ಮನೆಗಳ ಆಶ್ರಯದಲ್ಲಿ ಅವನು ಬದುಕುವ  ಕೌಶಲ್ಯಭರಿತವಾದ ಕಲೆಗಳನ್ನು ಸಿದ್ಧಪಡಿಕೊಳ್ಳಲಾಗಿದೆ. ಈ ಮನೆಗಳನ್ನು ಸಂಶೋಧನೆಯನ್ನು ಮಾಡಿದಾಗ ಸಾಕಷ್ಟು ಜ್ಞಾನ ಆಧುನಿಕ ಜಗತ್ತಿಗೆ ಲಭ್ಯವಾಗಬಹುದು ಎಂದು ನನ್ನ ಊಹೆಯಾಗಿದೆ.

**ಉಪಸಂಹಾರ:**

ಪಿಕಳಿಹಾಳ ಆದಿಮಾನವನು ಜೀವಿಸಿರುವ ಸ್ಥಳಗಳಲ್ಲಿ ಪ್ರಮುಖವಾಗಿದೆ. ಆದಿಮಾನವನು ಬಿಡಿಸಿದ ಚಿತ್ರಗಳು, ನುಡಿಸಿದ ಸಂಗೀತ ಕಲ್ಲುಗಳು, ಆಡಿದ ಪಗಡೆಯ ಮನೆ (ಮೈದಾನ), ನೀರು ಕುಡಿದ ಕೊಡೆದ ಮರಡಿ (ಗುಂಡು), ಕೃಷಿ, ಕುಂಬಾರ ಮಾಡಿದ ಮಡಿಕೆಯ ಚೂರುಗಳು, ಕಂಬಾರ ಕಾಯಕ ಮಾಡಿದ ಕಬ್ಬಿಣ ಮತ್ತು ಇದ್ದಿಲು ಚೂರುಗಳು, ಕಟ್ಟಿದ ಮನೆಗಳು, ಬೇಟೆಯಾಡಿದ ಚಿರತೆಯ ಬೋನುಗಳು, ಪೂಜಿಸಿದ ಮೇಗಳ ಹನುಮಂತ ಇತ್ಯಾದಿ ಅಂಶಗಳು ಪಿಕಳಿಹಾಳದಲ್ಲಿ ಸಿಗುತ್ತವೆ. ಆದಿಮಾನವ ಮತ್ತು ಆಧುನಿಕ ಮಾನವರು ಇಬ್ಬರು ಯಾವುದೋ ಕಾಲದಲ್ಲಿ ಯಾವ ಕಾರಣಕ್ಕೆ ಈ ಪ್ರದೇಶವನ್ನು ತೋರದನು ಎಂಬ ಕುರುಹು ಲಭ್ಯವಾಗುವುದಿಲ್ಲ. ಇದನ್ನು ಮುಂದಿನ ಅಧ್ಯಯನಕಾರರ ಅಧ್ಯಯನಗಳಿಂದ ತಿಳಿಯಬಹುದಾಗಿದೆ.

ಪಿಕಳಿಹಾಳ ಎಂಬ ಹಳ್ಳಿಯಲ್ಲಿ ಜನರು ಇಂದಿಗೂ ನೆಲಸಿದ್ದಾರೆ. ಅಂದರೆ ಹಳೆಯ ಪಿಕಳಿಹಾಳ ಊರಿನಿಂದ ಸುಮಾರು ೩-೪ ಕಿ.ಮೀ. ಅಂತರದಲ್ಲಿ ಹೊಸ ಪಿಕಳಿಹಾಳ ಊರು ಇದೆ. ಹಳೆಯ ಪಿಕಳಿಹಾಳದಿಂದ ಹೊಸ ಪಿಕಳಿಹಾಳಗೆ ಜನರು ಯಾವ ಕಾಲದಲ್ಲಿ ಬಂದರು ಎಂಬ ಪ್ರಶ್ನೆಯನ್ನು ಉದ್ಭವಿಸುತ್ತದೆ. ನಮಗೆ ಪಿಕಳಿಹಾಳ ಬಗ್ಗೆ ಮಾಹಿತಿಯನ್ನು ನೀಡಲು ಬಂದಿರುವ ವಕ್ತೃ ಸಣ್ಣ ಮಾಹಿತಿಯನ್ನು ನೀಡುತ್ತಾನೆ. ಈ ಮಾಹಿತಿಯು ಎಲ್ಲ ಪ್ರಶ್ನೆಗೆ ಉತ್ತರ ನೀಡುವುದಿಲ್ಲ. ಅನೇಕ ಊಹೆಯನ್ನು ಸಂಶೋಧಕರಿಗೆ ಒದಗಿಸುತ್ತದೆ. ಹೊಸ ಪಿಕಳಿಹಾಳ ಇರುವ ಜಾಗದಲ್ಲಿ ಸುಲ್ತಾನಪೂರ

ಎಂಬ ಗ್ರಾಮವಿತ್ತು ಎಂದು ಹೇಳಿದನು. ಯಾವ ಕಾಲದಲ್ಲಿ ಸುಲ್ತಾನಪೂರ ಎಂಬ ಗ್ರಾಮವು ಪಿಕಳಿಹಾಳ ಗ್ರಾಮವಾಗಿ ಬದಲಾಗಿದೆ ಎಂಬುವುದನ್ನು ಅಧ್ಯಯನದ ಮೂಲಕ ತಿಳಿಯಬೇಕಾಗಿದೆ. ಪಿಕಳಿಹಾಳ ಗ್ರಾಮದಿಂದ ಸುಮಾರು ೧೦-೧೫ ಕಿ.ಮೀ. ಅಂತರದಲ್ಲಿ ಹಾಳು ರಂಗಪೂರ ಎಂಬ ಗ್ರಾಮ ಇದೆ. ರಂಗಪೂರು ಗ್ರಾಮವನ್ನು ಜನರು ೧೭-೧೮ ನೇ ಶತಮಾನದಲ್ಲಿ ಬಿಟ್ಟು ಹೋಗಿದ್ದಾರೆ ಎಂದು ಸ್ಥಳೀಯರು ಹೇಳುತ್ತಾರೆ. ಹೀಗೆ ಪಿಕಳಿಹಾಳದಿಂದ ಸುಲ್ತಾನಪುರಕ್ಕೆ ಜನರು ವಲಸೆ ಹೋಗಿದ್ದಾರೆ, ಇಲ್ಲವೇ ಸುಲ್ತಾನಪುರದ ಜನರೇ ತಮ್ಮೂರಿಗೆ ಪಿಕಳಿಹಾಳ ಎಂದು ನಾಮಕರಣ ಮಾಡಿಕೊಂಡರೆ ಎಂಬ ಊಹೆ ಮಾಡಲು ಸಾಧ್ಯವಿದೆ. ಈ ಎಲ್ಲ ಪ್ರಶ್ನೆಗಳಿಗೆ ಮತ್ತು ಊಹೆಗಳಿಗೆ ಪುರತತ್ವ, ಚರಿತ್ರೆಯ ಮತ್ತು ಇತರ ವಿಷಯಗಳ ಅಧ್ಯಯನಕಾರರು ಸಂಶೋಧನೆಯ ಮಾಹಿತಿಗಳ ಮೂಲಕ ಉತ್ತರವನ್ನು ಪಡೆಯಬೇಕು. ಪಿಕಳಿಹಾಳ ಐತಿಹಾಸಿಕ ಸ್ಥಳದ ಬಗ್ಗೆ ಬೇರೆ ಬೇರೆ ಹಿನ್ನಲೆಯಲ್ಲಿ ಸಂಶೋಧನೆಗಳು ಬಂದರೆ ಆಧುನಿಕ ಜಗತ್ತಿಗೆ ಅನುಕೂಲವಿದೆ ಎಂದು ನನ್ನ ಅಭಿಮತ್ತ ಮತ್ತು ಆಶೆಯವಾಗಿದೆ.

**ಆಕರ ಗ್ರಂಥಗಳು:**

ಡಾ.ಆರ್.ಗೋಪಾಲ್. (ಸಂ). ೨೦೦೬. ಗದಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಯಗಳ ನಿರ್ದೇಶನಾಲಯ, ಮೈಸೂರು.

ಡಾ.ಆರ್.ಗೋಪಾಲ್. (ಸಂ).೨೦೧೦. ಕೊಪ್ಪಳ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

ಡಾ.ಆರ್.ಗೋಪಾಲ್. (ಸಂ) ೨೦೧೧. ಬಾಗಲಕೋಟೆ ಜಿಲ್ಲೆಯ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

ಲೇಖನಗಳು:

ಡಾ.ಅ.ಲ.ನರಸಿಂಹನ್. ಕೊಪ್ಪಳ ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಗಳು. (ಪು.೩೭-೪೯) ಡಾ.ಆರ್.ಗೋಪಾಲ್. (ಸಂ). ೨೦೧೦. ಕೊಪ್ಪಳ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

ಪ್ರೊ//ಎ.ವಿ.ನರಸಿಂಹಮೂರ್ತಿ. ಲೊಕ್ಕಿಗುಂಡಿ ಟಂಕಶಾಲೆ. (ಪು.೧೫೩-೧೫೭) ಡಾ.ಆರ್.ಗೋಪಾಲ್. (ಸಂ). ೨೦೦೬. ಗದಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಯಗಳ ನಿರ್ದೇಶನಾಲಯ, ಮೈಸೂರು.

ಬಿ.ಸಿ.ಪಾಟೀಲ್. ಕೊಪ್ಪಳದ ನೂತನ ಶಿಲಾಯುಗ ನೆಲೆ ಮತ್ತು ಪ್ರಾಗೈತಿಹಾಸಿಕ ವರ್ಣ ಚಿತ್ರಗಳು. (ಪು.೬೭-೭೨) ಡಾ.ಆರ್.ಗೋಪಾಲ್. (ಸಂ). ೨೦೧೦. ಕೊಪ್ಪಳ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

ಡಾ.ಸಿ.ಎಸ್. ವಾಸದೇವನ್. ಪ್ರಾಗಿತಿಹಾಸ ಕಾಲಘಟದ ಸಮೀಕ್ಷೆ. (ಪು ೯-೨೩). ಡಾ.ಆರ್.ಗೋಪಾಲ್. (ಸಂ) ೨೦೧೧. ಬಾಗಲಕೋಟೆ ಜಿಲ್ಲೆಯ ಮತ್ತು

ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

ಡಾ.ಸಿ.ಎಸ್. ವಾಸದೇವನ್. ಪ್ರಾಗಿಇಹಾಸ ಕಾಲದ ನೆಲೆ. (ಪು ೨೦-೨೨). ಡಾ.ಆರ್.ಗೋಪಾಲ್. (ಸಂ). ೨೦೧೦. ಕೊಪ್ಪಳ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

ಡಾ.ಸಿ.ಎಸ್.ಹಸಬಿ ಮತ್ತು ಇತರ ಲೇಖಕರು. ಚಿಂಚಲಯ ಬಂಡೆಗಳು. (ಪು ೪೦೦-೪೦೨) ಡಾ.ಆರ್.ಗೋಪಾಲ್. (ಸಂ). ೨೦೦೬. ಗದಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಯಗಳ ನಿರ್ದೇಶನಾಲಯ, ಮೈಸೂರು.

ಡಾ.ಎಚ್. ಎಸ್. ಗೋಪಾಲರಾವ್. ಕಪ್ಪೆ ಅರಭಟ್ಟನನ್ನು ಗುರುತಿಸುವ ಒಂದು ಪ್ರಯತ್ನ.(ಪು ೧೫೬-೧೬೩) ಡಾ.ಆರ್.ಗೋಪಾಲ್. (ಸಂ) ೨೦೧೧. ಬಾಗಲಕೋಟೆ ಜಿಲ್ಲೆಯ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

ಎಚ್.ಎಸ್.ಶ್ರೆಯಸ್. ದಿ ನ್ಯೂವ್ ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆ. ದಿನಾಂಕ. ೨೫-೯-೨೦೧೮ ರಂದು ಮುದ್ರಣವಾಗಿದೆ.

ಡಾ.ಲ.ನ.ಸ್ವಾಮಿ. ಆನೆಗೊಂದಿ ಒಂದು ಪರಿಚಯ. (ಪು ೪೪೨-೪೪೬). ಡಾ.ಆರ್.ಗೋಪಾಲ್. (ಸಂ). ೨೦೧೦. ಕೊಪ್ಪಳ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

ಡಾ.ಶರಣಬಸಪ್ಪ ಕೊಲ್ಕಾರ. ಕೊಪ್ಪಳ ಜಿಲ್ಲೆಯ ಪ್ರಾಗಿತಿಹಾಸ ಕಾಲದ ಗವಿವರ್ಣ ಹಾಗೂ ಬಯಲು ಬಂಡೆ ಚಿತ್ರಗಳು. (ಪು ೫೦-೬೬). ಡಾ.ಆರ್.ಗೋಪಾಲ್. (ಸಂ). ೨೦೧೦. ಕೊಪ್ಪಳ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

ವಕ್ತೃಗಳ ಮಾಹಿತಿ:

ಯಂಕಣ್ಣ ಪೂಜಾರಿ (ಯಾದವ). ವಯಸ್ಸು:೫೦. ಸಾ// ಪಿಕಳಿಹಾಳ. ತಾ// ಲಿಂಗಸ್ಗೂರು. ಜಿಲ್ಲಾ// ರಾಯಚೂರು.

# ಯಾದಗಿರಿ ಪರಿಸರದ ಕನ್ನಡದಾಗ 'ಅ'ಕೊನೆ ಪದಗಳು

ಬಸವರಾಜ ಕೋಡಗುಂಟಿ

ಕನ್ನಡದಾಗ ಪದಗಳ ರಚನೆ, ಬಳಕೆ ಮತ್ತು ಬೆಳವಣಿಗೆ ಕುರಿತು ಹೆಚ್ಚು ಅದ್ಯಯನಗಳು ಬಂದಿಲ್ಲ. ಹೊಸಗನ್ನಡದಾಗಸಾಮಾನ್ಯವಾಗಿಪದಗಳು 'ಅ', 'ಇ', 'ಉ'ಮತ್ತು'ಎ'ಸ್ವರದಿಂದಕೊನೆಯಾಗುತ್ತವೆ. ಸ್ವರದಿಂದ ವಿವಿದ ಆಡುಗನ್ನಡಗಳಲ್ಲಿ ಇದೆ ಬಗೆಯ ರಚನೆ ಕಂಡುಬಂದರೂ ಕೆಲವೆಡೆ ಈ ಸ್ವರಕೊನೆ ಪದಗಳ ರಚನೆ ಬಿನ್ನವಾಗಿದೆ. ಇವುಗಳ ಅದ್ಯಯನದಿಂದಕನ್ನಡದದ್ವನ್ಯಾತ್ಮಕ/ದ್ವನಿಮಾತ್ಮಕ ಬೆಳವಣಿಗೆ, ಪದಗಳ ರಚನೆ ಮತ್ತು ಬೆಳವಣಿಗೆಮೊದಲಾದವನ್ನು ತಿಳಿದುಕೊಳ್ಳುವುದಕ್ಕೆ ಅನುಕೂಲವಾಗುತ್ತದೆ. ಇದುಸ್ತೂಲವಾಗಿ ಕನ್ನಡ ಮಾತಿನ ಬೆಳವಣಿಗೆ ಬಗೆಗೆ ತಿಳುವಳಿಕೆಪಡೆದುಕೊಳ್ಳುವುದಕ್ಕೆ ಸಹಾಯ ಮಾಡುತ್ತದೆ. ಈ ಬಗೆಯ ಹಲವು ರಚನೆಗಳನ್ನು ಇದುವರೆಗೆಅದ್ಯಯನ ಮಾಡಿಲ್ಲದಿರುವುದರಿಂದಕನ್ನಡ ಮಾತಿನ ಬೆಳವಣಿಗೆಯನ್ನು ವಿವರಿಸುವಲ್ಲಿ ಈ ಹಲವು ಅಂಶಗಳು ಸೇರಿಕೊಂಡಿಲ್ಲ. ಇದರಿಂದಾಗಿಕನ್ನಡಬಾಶೆಯ ಇತಿಹಾಸದ ವಿವರಣೆಅಪೂರ್ಣವಾಗುತ್ತದೆ, ಅದರಲ್ಲಿಯೂ ಮುಕ್ಯವಾಗಿ ಕನ್ನಡ ಪದಗಳ ಬೆಳವಣಿಗೆಯನ್ನು ವಿವರಿಸುವಲ್ಲಿ ಅವಶ್ಯವಾದ ದ್ವನಿಮಾತ್ಮಕ ಮತ್ತು ಆಕ್ರುತಿಮಾತ್ಮಕ ಬೆಳವಣಿಗೆಗಳನ್ನು ವಿವರಿಸಬೇಕಿದೆ.

ಕನ್ನಡದಒಡೆತವನ್ನು ಬಡು, ತೆಂಕು ಮತ್ತು ಪಡು ಎಂದು ಮೂರು ಗುಂಪುಗಳಲ್ಲಿ ಪ್ರದಾನವಾಗಿ ಅರ್ತ ಮಾಡಿಕೊಳ್ಳಬಹುದು. ತಮಿಳುನಾಡಿನ ಕನ್ನಡಗಳನ್ನು ಪ್ರತ್ಯೇಕವಾಗಿ ನೀಲಗಿರಿ ಕನ್ನಡ ಎಂದು ನೋಡಬೇಕೆಂಬುದನ್ನೂ ಈ ಲೇಕನದ ಮೊದಲ ಲೇಕಕಪ್ರಸ್ತಾಪಿಸುತ್ತಾರೆ. ಸದ್ಯ ಗಮನಿಸುತ್ತಿರುವ ಬಡಗನ್ನಡ ಗುಂಪಿನಾಗ ಉತ್ತರ ಕರ್ನಾಟಕ, ಮಹಾರಾಶ್ಟ್ರ, ಗೋವ ಮತ್ತು ತೆಲಂಗಾಣ ಪ್ರದೇಶಗಳಲ್ಲಿ ಬಳಕೆಯಲ್ಲಿರುವ ಕನ್ನಡಗಳನ್ನು ಗುರುತಿಸುವುದಕ್ಕೆ ಸಾದ್ಯ. ಇದರಲ್ಲಿ ಇದುವರೆಗೆ ಗುರುತಿಸಿರುವ ಮತ್ತು ಅದ್ಯಯನ ಮಾಡಿರುವ ದಾರವಾಡ ಕನ್ನಡ, ಬೆಳಗಾವಿ ಕನ್ನಡ, ವಿಜಾಪುರ ಕನ್ನಡ, ಕಲಬುರಗಿ ಕನ್ನಡ, ಬೀದರ ಕನ್ನಡ, ಮಸ್ಕಿ ಕನ್ನಡ ಮೊದಲಾದವು ಬರುತ್ತವೆ. ಇವುಗಳ ನಡುವೆ ಹಲವು ಅಂಶಗಳು ಪರಸ್ಪರ ಹಂಚಿಕೊಂಡಂತೆ ಕಂಡುಬರುತ್ತವೆ. ಅಂದರೆ ಬಡಗನ್ನಡದ ಎಲ್ಲ ಕನ್ನಡದೊಳಗೂ ಕಂಡುಬರುವ ಮತ್ತು ಇತರ ಕನ್ನಡಗಳಲ್ಲಿ

ಕಂಡುಬರದ ಲಕ್ಶಣಗಳು. ಇನ್ನು ಕೆಲವು ಲಕ್ಶಣಗಳು ಬಡಗನ್ನಡದೊಳಗೆನೆ ಕೆಲಕೆಲ ಗುಂಪುಗಳನ್ನು ಮಾಡಿಕೊಳ್ಳುತ್ತವೆ. ಅಂದರೆ ಬಡಗನ್ನಡದ ಕೆಲವು ಕನ್ನಡಗಳ ಗುಂಪಿನಲ್ಲಿ ಒಂದು ಲಕ್ಶಣ ಕಂಡುಬಂದರೆ ಇನ್ನು ಕೆಲವು ಕನ್ನಡಗಳಲ್ಲಿ ಅವು ಕಂಡುಬರುವುದಿಲ್ಲ. ಇದರೊಂದಿಗೆ ಒಂದೊಂದು ಒಳನುಡಿಗೆನೆ ವಿಶಿಶ್ಟವಾದ ಕೆಲವು ಲಕ್ಶಣಗಳೂ ಇವೆ.

ಈಗಿನ ಪ್ರಬಂದದಾಗ ಕನ್ನಡದ ಪದಕೊನೆ ಸ್ವರಗಳ ಮೇಲೆ ಅದ್ಯಯನ ಮಾಡಲಾಗಿದೆ.ಈ ಮೇಲೆ ಹೇಳಿದಂತೆ ಶಿಶ್ಟಕನ್ನಡದಾಗ ನಾಲ್ಕು ಬಗೆಯ ಸ್ವರಗಳು ಪದಕೊನೆಯಲ್ಲಿ ಕಂಡುಬರುತ್ತವೆ.ಇಲ್ಲಿ ಶಿಶ್ಟಕನ್ನಡದ ವಿವಿದ ಪದಕೊನೆ ರೂಪಗಳಿಗೆ ಕೆಲವು ಉದಾಹರಣೆ ಕೊಟ್ಟಿದೆ.

| | |
|---|---|
| 'ಅ'ಕೊನೆ: | ನೆಲ, ಹಣ, ಪದ, ದನ, ದಾನ, ಮಾನ, ಹುಂಜ, ಕುಂಚ, ಕೆಲಸ, ಗರಗ |
| 'ಇ'ಕೊನೆ: | ಕುಣಿ, ಮಣಿ, ನದಿ, ಜರಿ, ಕೋಳಿ, ಕಂಚಿ, ಸವತಿ, ಸೇವಂತಿ |
| 'ಉ'ಕೊನೆ: | ನಡು, ಮಿದು, ಕರು, ಮೇವು, ಸಾವು, ಚಿಗುರು, ಸೆರಗು |
| 'ಎ'ಕೊನೆ: | ಮನೆ, ಕೊನೆ, ಸೆಲೆ, ಬೆಲೆ, ನಾಳೆ, ಸೂರೆ, ಚಂಡೆ, ಗೊಂಡೆ,ಕುದುರೆ, ಮದಿರೆ |

ಇದಕ್ಕೆದುರಾಗಿ ಶಿಶ್ಟಕನ್ನಡದಾಗ ಇರುವ 'ಎ'ಕೊನೆ ಪದಗಳು ಹೆಚ್ಚಿನ ಕನ್ನಡಗಳಲ್ಲಿ 'ಇ'ಕೊನೆ ಪದಗಳಂತೆ ಬಳಕೆಯಲ್ಲಿವೆ. ಇದನ್ನು ಬಡಗನ್ನಡಗಳ ಲಕ್ಶಣದಂತೆ ಹಲವು ಕಡೆ ವಿವರಿಸಿದ್ದರೂ ತೆಂಗನ್ನಡದಲ್ಲಿಯೂ ಈ ಲಕ್ಶಣ ವ್ಯಾಪಕವಾಗಿ ಕಂಡುಬರುತ್ತದೆ.

| ಉದಾ. | ಬಡಗನ್ನಡ | ಶಿಶ್ಟಗನ್ನಡ |
|---|---|---|
| | ಮನಿ | ಮನೆ |
| | ಎಲಿ | ಎಲೆ |
| | ಕುದುರಿ | ಕುದುರೆ |
| | ಎದಿ | ಎದೆ |
| | ಓಳಿಗೆ | ಹೋಳಿಗೆ |

ಇದರ ಹೊರತಾಗಿ ಬಡಗನ್ನಡದ ಕೆಲವು ಕನ್ನಡಗಳಲ್ಲಿ 'ಉ'ಕೊನೆ ಪದಗಳು ಕಂಡುಬರುವುದಿಲ್ಲ. ಶಿಶ್ಟಕನ್ನಡದಾಗ 'ಉ'ಕೊನೆ ಇರುವ ಪದಗಳು ಈ ಕೆಲವು ಕನ್ನಡಗಳಲ್ಲಿ 'ಅ'ಕೊನೆಯಂತೆ ಬಳಕೆಯಲ್ಲಿವೆ. ಈ ಕನ್ನಡಗಳಲ್ಲಿ ಕಂಡುಬರುವ 'ಅ'ಕೊನೆ ಪದಗಳು ಶಿಶ್ಟಕನ್ನಡದಾಗ 'ಅ'ಕೊನೆ ಮತ್ತು 'ಉ'ಕೊನೆ ನಾಮಪದಗಳಂತೆ ಕಂಡುಬರುತ್ತವೆ. ಈ ಲಕ್ಶಣವನ್ನು ಈಗಿನ ಪ್ರಬಂದದಾಗ ಚರ್ಚಿಸಿದೆ. ಈ ಲಕ್ಶಣ ಯಾದಗಿರಿ, ಕಲಬುರಗಿ, ದಾರವಾಡ ಪರಿಸರಗಳಲ್ಲಿ ಹಂಚಿಕೊಂಡಿರುವಂತೆ ತೋರುತ್ತದೆ. ಅದರ ಸುತ್ತಲಿನ ಇನ್ನು ಕೆಲವು ಪರಿಸರಗಳಲ್ಲಿಯೂ ಇದು ವ್ಯಾಪಿಸಿಕೊಂಡಿದೆ. ಈ

ಬೂಗೋಳವನ್ನು ಸೂಕ್ತವಾಗಿ ಗಮನಿಸಬೇಕಿದೆ. ಈಗಿನ ಪ್ರಬಂದಕ್ಕೆ ಮಾಹಿತಿಯನ್ನು ಯಾದಗಿರಿ ಪರಿಸರದಿಂದ ತೆಗೆದುಕೊಂಡಿದೆ. ಬಡಗನ್ನಡದ ಇನ್ನು ಯಾವ ಯಾವ ಪರಿಸರಗಳಲ್ಲಿ ಈ ಲಕ್ಶಣ ಇದೆ ಎಂಬುದನ್ನು ಇನ್ನೂ ಹುಡುಕಬೇಕಿರುವುದರಿಂದ ಮತ್ತು ಈ ಲೇಕನಕ್ಕೆ ಮಾಹಿತಿಯನ್ನು ಯಾದಗಿರಿ ಪರಿಸರದಿಂದ ತೆಗೆದುಕೊಂಡಿರುವುದರಿಂದ ಈ ಲೇಕನವನ್ನು ಯಾದಗಿರಿ ಪರಿಸರ ಎಂದಶ್ಟೆ ಕರೆಯಲಾಗಿದೆ.

ಇದರ ಹೊರತಾಗಿ ಬಡಗನ್ನಡಗಳಲ್ಲಿ ಅ. (ನವ್ಲ. 'ನವಿಲು'), ಅ್ಯ (ಪೂರ‍್ಯ 'ಪೂರಿ') ಮೊದಲಾದ ಸ್ವರಗಳಿಂದ ಕೊನೆಯಾಗುವ ಪದಗಳು ಕೂಡ ದೊರೆಯುತ್ತವೆ. ಆದರೆ ಇದಕ್ಕೆ ಹೆಚ್ಚು ಮಾಹಿತಿ ಮತ್ತು ಅವುಗಳ ಅದ್ಯಯನಗಳು ಬೇಕು. ಬೇರೊಂದು ಅದ್ಯಯನದಲ್ಲಿ ಪದಕೊನೆ ಸ್ವರಗಳನ್ನು ಕುರಿತು ಬರೆಯುವುದಕ್ಕೆ ಅವಸರ ಮಾಡಿಕೊಳ್ಳಲಾಗುವುದು.

ಈ ಪ್ರಬಂದದಲ್ಲಿಬಡಗನ್ನಡಗಳಾಗ ವಿವಿದ ಸ್ವರಗಳಿಂದ ಕೊನೆಯಾಗುವ ಪದಗಳನ್ನು ಮೊದಲು ಕೊಟ್ಟಿದೆ.ಆನಂತರ ಬಡಗನ್ನಡದ 'ಅ'ಕೊನೆ ಪದಗಳನ್ನು ತೋರಿಸಿದೆ. ಆನಂತರ ಶಿಶ್ಟಕನ್ನಡದ 'ಉ'ಕೊನೆಪದಗಳುಬಡಗನ್ನಡಗಳಾಗ'ಅ'ಕೊನೆಪದಗಳಂತೆಬಳಕೆಯಲ್ಲಿರುವುದನ್ನು ತೋರಿಸಿದೆ.ಅದಕ್ಕೆ ಪೂರಕವಾಗಿ ಉದಾಹರಣೆಗಳನ್ನು ಪಟ್ಟಿ ಮಾಡಿದೆ. ಹೀಗೆ ಉದಾಹರಣೆಗಳನ್ನು ಕೊಡುವಾಗ ವಿವಿದ ನಾಮಪದ, ಕ್ರಿಯಾಪದ, ವಿಶೇಶಣ, ಸರ್ವನಾಮ ಮೊದಲಾದ ಪದವರ್ಗಗಳನ್ನು ಮತ್ತು ಮುಂದುವರೆದು ದೇಹವಾಚಿಗಳು, ಸಂಬಂದವಾಚಿಗಳು, ಸಂಕೆವಾಚಿಗಳನ್ನೂಬೇರೆ ಬಾಶೆಗಳಿಂದ ತೆಗೆದುಕೊಂಡ ಪದಗಳನ್ನೂ ಉದಾಹರಣೆಯಾಗಿ ಕೊಟ್ಟಿದೆ.

ಯಾದಗಿರಿ ಪರಿಸರದ ಕನ್ನಡದಾಗ ಕಂಡುಬರುವ ವಿವಿದ ಸ್ವರಕೊನೆಪದಗಳನ್ನು ಮೊದಲಿಗೆ ಇಲ್ಲಿ ಪಟ್ಟಿ ಮಾಡಿದೆ. ಸಾಮಾನ್ಯವಾಗಿ ಇಲ್ಲಿ 'ಅ'ಕೊನೆ ಮತ್ತು 'ಇ'ಕೊನೆ ಪದಗಳು ವ್ಯಾಪಕವಾಗಿ ಕಂಡುಬರುತ್ತವೆ. ಈ ಮೇಲೆ ಹೇಳಿದಂತೆ 'ಅ್ಯ', 'ಅ.' ಮೊದಲಾದ ಸ್ವರಗಳು ಪದಕೊನೆಯಲ್ಲಿ ಕಂಡುಬರುತ್ತವೆಯಾದರೂ ಅವುಗಳನ್ನು ಇನ್ನೂ ಅದ್ಯಯನ ಮಾಡಿ ಸೂಕ್ತವಾಗಿ ಗುರುತಿಸಬೇಕಿರುವುದರಿಂದ ಇಲ್ಲಿ ಅವುಗಳನ್ನು ಪಟ್ಟಿಸಿಲ್ಲ. ವ್ಯಂಜನಕೊನೆ ಪದಗಳು ಇಲ್ಲ. ಹೀಗೆ ಪದಗಳನ್ನು ಪಟ್ಟಿಸುವಾಗ ಪದವರ್ಗಗಳಾದ ನಾಮಪದ, ಕ್ರಿಯಾಪದ ಮತ್ತು ವಿಶೇಶಣಗಳಿಗೆ ಪದಗಳನ್ನು ಕೊಟ್ಟಿದೆ. ಹೆಚ್ಚಾಗಿ ಎರಡಕ್ಕರದ ಮತ್ತು ಮೂರಕ್ಕರದ ಪದಗಳು ಕಂಡುಬರುತ್ತವೆಯಾದ್ದರಿಂದ ಉದಾಹರಣೆ ಕೊಡುವಾಗ ಇವೆರಡನ್ನೂ ಮತ್ತು ಇವುಗಳ ಜೊತೆಗೆ ಸಾದ್ಯವಿದ್ದಲ್ಲಿ ಒತ್ತಕ್ಕರದ ಪದಗಳನ್ನೂ ಕೊಟ್ಟಿದೆ.

ನಾಮಪದ ಕ್ರಿಯಾಪದ ವಿಶೇಶಣ 'ಅ'ಕೊನೆಪದಗಳು

| | | | | | |
|---|---|---|---|---|---|
| | ಎರಡಕ್ಕರದ | ಕಾಲ | ಕಾಲು | ಓಡ | |
| ಓಡು | | ಡೂಗ | ಡೂಗ | | |
| | | | ಕೀಲ | ಕೀಲು | |
| ಕೂಗ | ಕೂಗು | | ಮೂಕ | ಮೂಕ | |
| | ಮೂರಕ್ಕರದ | ಕಲಸ | ಕಲೆಸು | ಕಿವುಚ | |
| ಕಿವುಚು | | ಕಿವುಡ | ಕಿವುಡು | | |
| | | | ಕೆದರ | ಕೆದರು | |
| ಎಗರ | ಎಗರು | | ಅಗುರ | ಹಗುರ | |
| | ಒತ್ತಕ್ಕರದ | | ಉಸ್ಕ | ಉಸುಕು | |
| ಜಜ್ಜ | ಜಜ್ಜು | | ಡಂಗ | ಡಂಗು | |
| | | | ಅಳ್ಳ | ಹರಳು | |
| ಗುದ್ದ | ಗುದ್ದು | | -- | -- | |
| 'ಇ'ಕೊನೆಪದಗಳು | | | | | |
| | ಎರಡಕ್ಕರದ | ಸಾಲಿ | 'ಶಾಲೆ' | ಒಗಿ | |
| ಹೋಗೆ | | -- | -- | | |
| | | ಎಲಿ | 'ಎಲೆ' | ಎಸಿ | |
| ಎಸೆ | | -- | -- | | |
| | ಮೂರಕ್ಕರದ | ಕುಣಿಕಿ | 'ಕುಣಿಕೆ' | -- | - |
| - | | -- | -- | | |
| | | | ವಣಿಕಿ | 'ಒನಕೆ' | - |
| - | -- | | -- | -- | |
| | ಒತ್ತಕ್ಕರದ | ಕಡ್ಡಿ | 'ಕಡ್ಡಿ' | ಕಡ್ಡಿ | - |
| - | -- | -- | -- | | |
| | | | ಬಡ್ಡಿ | 'ಬಡ್ಡಿ' | |
| -- | -- | | -- | -- | |

ಶಿಷ್ಟಕನ್ನಡದಾಗ 'ಅ'ಕಾರದಿಂದ ಕೊನೆಯಾಗುವ ಕೆಲವು ಪದಗಳು ಯಾದಗಿರಿ ಪರಿಸರದಾಗ 'ಅ'ಕೊನೆಯಾಗಿ ಇದ್ದರೆ ಇನ್ನು ಕೆಲವು 'ಇ'ಕೊನೆಯಾಗಿ ಬಳಕೆಯಾಗುತ್ತವೆ. ಆದ್ದರಿಂದ ಯಾದಗಿರಿ ಪರಿಸರದಕನ್ನಡದಾಗ ಬಳಕೆಯಲ್ಲಿರುವ 'ಅ'ಕೊನೆ ಪದಗಳನ್ನು ಶಿಷ್ಟಕನ್ನಡದೊಂದೊಗೆ ಹೋಲಿಸಿ ಎರಡು ಬಗೆಯಾಗಿ ಗುಂಪಿಸಲು ಸಾದ್ಯ. ೧) ಶಿಷ್ಟಕನ್ನಡ ಮತ್ತು ಯಾದಗಿರಿ ಪರಿಸರದ ಕನ್ನಡ ಎರಡರಲ್ಲೂ 'ಅ'ಕೊನೆಯಾಗಿ ಬಳಕೆಯಲ್ಲಿರುವ ಪದಗಳು, ೨) ಶಿಷ್ಟಕನ್ನಡದಾಗ 'ಉ'ಕೊನೆ ಆಗಿದ್ದು ಯಾದಗಿರಿ ಪರಿಸರದಾಗ'ಅ'ಕೊನೆಯಾಗಿ ಇರುವ ಪದಗಳು. ಈ ಎರಡೂ ಗುಂಪುಗಳಿಗೆ ಉದಾಹರಣೆಗಳನ್ನು ಕೆಳಗೆ ಒದಗಿಸಿದೆ, ಗಮನಿಸಿ.

ಉದಾ.

೧. ಶಿಷ್ಟಕನ್ನಡ ಮತ್ತು ಯಾ.ಕ.ದಾಗ 'ಅ'ದಿಂದ ಮುಗಿಯುವ ಪದಗಳು

| | ಯಾ.ಕ. | ಶಿ.ಕ. |
|---|---|---|
| ನಾಮಪದ | ಗಿಡ | ಗಿಡ |
| | ನೆಲ | ನೆಲ |
| | ಮರ | ಮೊರ |
| | ಮಂಚ | ಮಂಚ |

೨. ಶಿ.ಕ.ದಾಗ 'ಉ'ಕೊನೆ ಇದ್ದು ಯಾ.ಕ.ದಾಗ'ಅ'ಕೊನೆ ಇರುವವು

| | | |
|---|---|---|
| ನಾಮಪದ | ಸಾರ | ಸಾರು |
| | ಕಣ್ಣ | ಕಣ್ಣು |
| | ಉಸುಕ | ಹುಸುಕು |
| | ಅರಕ | ಹರಕು |
| ಕ್ರಿಯಾಪದ | ಸಾಕ | ಸಾಕು |
| | ಕೊಲ್ಲ | ಕೊಲ್ಲು |
| | ಕಾಣ | ಕಾಣು |
| | ಮುಣುಗ | ಮುಳುಗು |
| ನ | ೂಕ | ನೂಕು |
| | ಕಾರ | ಕಾರು |
| | ಬಾಚ | ಬಾಚು |
| ವಿಶೇಶಣ | ಕೆಂಪ | ಕೆಂಪು |
| | ಅಸ್ರ/ಅಸರ | ಹಸಿರು |

ಎರಡನೆಯ ಪಟ್ಟಿ ಈಗಿನ ಪ್ರಬಂದ ಗಮನಿಸುತ್ತಿರುವ ಪದಗಳು.

ಈ ವ್ಯತ್ಯಾಸವನ್ನು ಗಮನದಲ್ಲಿ ಇಟ್ಟುಕೊಂಡು ಒಂದು ಅಂದಾಜು ನಿಯಮವನ್ನು ಹೇಳುವುದಕ್ಕೆ ಸಾದ್ಯವಾಗುತ್ತದೆ. ಈ ಉದಾಹರಣೆಗಳನ್ನು ವ್ಯಾಪಕ ನೆಲೆಯಲ್ಲಿ ಕಲೆಹಾಕಿ ಈ ನಿಯಮವನ್ನು ಸಾಮಾನ್ಯೀಕರಿಸಬೇಕಿದೆ.

ಎರಡಕ್ಕರದ ನಾಮಪದಗಳಲ್ಲಿ ಪದಮೊದಲಲ್ಲಿ ಗಿಡ್ಡಸ್ವರ ಇದ್ದರೆ ಯಾದಗಿರಿ ಪರಿಸರ ಮತ್ತು ಶಿಷ್ಟಕನ್ನಡದಾಗ ಅವು 'ಅ'ಕೊನೆಯಾಗಿ ಬಳಕೆಯಾಗುತ್ತವೆ.

| | | |
|---|---|---|
| ನಾಮಪದ | ಗಿಡ | ಗಿಡ |
| | ನ್ಯಲ | ನೆಲ |
| | ಮರ | ಮೊರ |

| | | |
|---|---|---|
| | ಕುಲ | ಕುಲ |
| | ಬರ | ಬರ |
| | ಮಗ | ಮಗ |

ಇದೆ ರಚನೆಯುನ್ನು ಹೊಂದಿರುವ ಕ್ರಿಯಾಪದಗಳು ಬಿನ್ನವಾಗಿ ಕಂಡುಬರುತ್ತವೆ.ಶಿಷ್ಟಕನ್ನಡದಾಗ 'ಉ'ಕಾರಾಂತವಾಗಿ ಬಳಕೆಯಲ್ಲಿರುವ ಹಲವು ಪದಮೊದಲ ಗಿಡ್ಡಸ್ವರದ ಎರಡಕ್ಕರದ ಪದಗಳು ಯಾದಗಿರಿ ಪರಿಸರದಾಗ 'ಅ'ಕೊನೆಯಾಗಿಯೆ ಬಳಕೆಯಲ್ಲಿವೆ.

| | | |
|---|---|---|
| ಕ್ರಿಯಾಪದ | ಅಳ | ಅಳು |
| | ಇರ | ಇರು |
| | ಇಡ | ಇಡು |
| | ಉಡ | ಉಡು |
| | ನಗ | ನಗು |
| | ಸುಡ | ಸುಡು |

ಪದಮೊದಲಲ್ಲಿ ಉದ್ದಸ್ವರ ಇದ್ದರೆ ಅದು ಶಿಷ್ಟಕನ್ನಡದಾಗ 'ಉ'ಕೊನೆಯಾಗಿದ್ದು ಮತ್ತು ಯಾದಗಿರಿ ಪರಿಸರದ ಕನ್ನಡದಾಗ'ಅ'ಕೊನೆಯಾಗಿ ಇರುತ್ತವೆ.

ಎರಡಕ್ಕರದ ಸ್ವರಮೊದಲ ಪದಗಳು

| | | |
|---|---|---|
| ನಾಮಪದ | ಆಡ | ಆಡು |
| | ಊರ | ಊರು |
| | ಓಳ | ಹೋಳು |
| | ಆಳ | ಆಳು |
| ಕ್ರಿಯಾಪದ | ಆರ | ಆರು |
| | ಏರ | ಏರು |
| | ಆಡ | ಆಡು |
| | ಊರ | ಊರು |
| | ಈಸ | ಈಸು |

ಎರಡಕ್ಕರದ ವ್ಯಂಜನಮೊದಲ ಪದಗಳು

| | | |
|---|---|---|
| ನಾಮಪದ | ಸಾರ | ಸಾರು |
| | ಕೂಸ | ಕೂಸು |
| | ನೀರ | ನೀರು |
| | ನೂಲ | ನೂಲು |
| ಕ್ರಿಯಾಪದ | ಸಾಕ | ಸಾಕು |
| | ಕಾಣ | ಕಾಣು |

| | | |
|---|---|---|
| | ನೂಕ | ನೂಕು |
| | ಕಾರ | ಕಾರು |
| | ಬಾಚ | ಬಾಚು |

ಪದಮೊದಲ ಗಿಡ್ಡಸ್ವರವಿದ್ದು ಪದದ ಎರಡನೆಯ ಅಕ್ಕರದಾಗ ಒತ್ತಕ್ಕರ ಬಂದಿದ್ದರೆ ಅವು ಯಾದಗಿರಿ ಪರಿಸರದ ಕನ್ನಡದಾಗ'ಅ'ಕೊನೆಯಾಗಿ ಬಳಕೆ ಆಗುತ್ತವೆ.

| | | |
|---|---|---|
| ನಾಮಪದ | ಕಣ್ಣ | ಕಣ್ಣು |
| | ಮಣ್ಣ | ಮಣ್ಣು |
| | ವನ್ನ | ಹೊನ್ನು |
| | ಸುಕ್ಕ | ಸುಕ್ಕು |
| | ಮುಕ್ಕ | ಮುಕ್ಕು |
| ಕ್ರಿಯಾಪದ | ಅತ್ತ | ಅತ್ತು |
| | ಒತ್ತ | ಒತ್ತು |
| | ನುಗ್ಗ | ನುಗ್ಗು |
| | ಕೊಲ್ಲ | ಕೊಲ್ಲು |
| | ಉಟ್ಟ | ಹುಟ್ಟು |
| ವಿಶೇಶಣ | ಕೆಂಪ | ಕೆಂಪು |
| | ಕೆಂದ | ಕೆಂದು |
| | ಡೂಗ | ಡೂಗು |

ಮೂರಕ್ಕರದ ಪದಗಳೆಲ್ಲವೂ ಈ ವ್ಯತ್ಯಾಸವನ್ನು ತೋರಿಸುತ್ತವೆ.

| | | |
|---|---|---|
| ನಾಮಪದ | ಅಡಗ | ಹಡಗು |
| | ಉಸುಕ | ಹುಸುಕು |
| | ಅರಕ | ಹರಕು |
| | ಕನಸ | ಕನಸು |
| | ಮಿದುಡ | ಮಿದುಳು |
| ಕ್ರಿಯಾಪದ | ಎಗರ | ಎಗರು |
| | ಮುಣುಗ | ಮುಳುಗು |
| | ನಡುಗ | ನಡುಗು |
| | ಕೆಣಕ | ಕೆಣಕು |
| | ಕಿವುಚ | ಕಿವುಚು |
| ವಿಶೇಶಣ | ಅಸ್ರ/ಅಸರ | ಹಸಿರು |
| | ಕೆಸರ | ಕೆಸರು |

ಯಾದಗಿರಿ ಪರಿಸರದ ಕನ್ನಡ ಇಲ್ಲವೆ ಕೆಲವು ಬಡಗನ್ನಡಗಳು ಮತ್ತು ಶಿಶ್ಟಕನ್ನಡಗಳ ನಡುವೆ ಕಂಡುಬರುವ ಈ ಪದಕೊನೆ ಸ್ವರವ್ಯತ್ಯಾಸ ಬಹು ಆಳದಲ್ಲಿದೆ. ಈ ವ್ಯತ್ಯಾಸ ಬಿನ್ನ ಬಗೆಯ ಪದಗಳಲ್ಲೆಲ್ಲವೂ ಕಂಡುಬರುತ್ತದೆ.ಇದಕ್ಕಾಗಿ ಇಲ್ಲಿ ವಿವಿದ ಬಗೆಯ ವಿಶಿಶ್ಟ ಪದಗಳನ್ನು ಕಲೆ ಹಾಕಿ ಕೊಟ್ಟಿದೆ. ಸರ್ವನಾಮಗಳು, ಸಂಕ್ಯಾವಾಚಿಗಳನ್ನು ಕೊಟ್ಟಿದೆ. ಇವುಗಳ ಜೊತೆಗೆ ದೇಹವಾಚಿ ಮತ್ತು ಸಂಬಂದವಾಚಿಗಳನ್ನೂ ಪಟ್ಟಿ ಮಾಡಿದೆ.

| | | | | | |
|---|---|---|---|---|---|
| ಸರ್ವನಾಮಗಳು: | | ಏಕವಚನ | | ಬಹುವಚನ | |
| ಪ್ರತಮ ಪುರುಶ: | ನಾನ | ನಾನು | | ನಾವ | ನಾವು |
| ಮದ್ಯಮ ಪುರುಶ | ನೀನ | ನೀನು | | ನೀವ | ನೀವು |
| ಉತ್ತಮ ಪುರುಶ | | ಏಕವಚನ | | | ಬಹುವಚನ |
| ಸ್ತ್ರೀಲಿಂಗ | ಅವಳ | ಅವಳು | | ಅವರ | ಅವರು |
| ಪುಲ್ಲಿಂಗ | | ಅವನ | ಅವನು | ಅವರ | ಅವರು |
| ನಪುಂಸಕಲಿಂಗ | | ಅದ | ಅದು | ಅವ | ಅವು |

| | | |
|---|---|---|
| ಸಂಕ್ಯಾವಾಚಿಗಳು: | ಒಂದ | ಒಂದು |
| | ಎರಡ, ಎರ್ಡ | ಎರಡು |
| | ಮೂರ | ಮೂರು |
| | ನಾಕ | ನಾಕು |
| | ಅಯ್ದ | ಅಯ್ದು |
| | ಆರ | ಆರು |
| | ಏಳ | ಏಳು |
| | ಎಂಟ | ಎಂಟು |
| | ಒಂಬತ್ತ | ಒಂಬತ್ತು |
| | ಅತ್ತ | ಹತ್ತು |
| ಪರಿಮಾಣವಾಚಿಗಳು: | ಅಶ್ಟ | ಅಶ್ಟು |
| | ಇಶ್ಟ | ಇಶ್ಟು |
| ಪ್ರಶ್ನವಾಚಕಗಳು: | ಯಾರ | ಯಾರು |
| | ಎಶ್ಟ | ಎಶ್ಟು |
| ದೇಹವಾಚಿಗಳು: | ಕಣ್ಣ | ಕಣ್ಣು |
| | ಕಾಲ | ಕಾಲ |
| | ಕೂದಲ | ಕೂದಲು |
| | ಬೆರಳ | ಬೆರಳು |
| | ಬೆನ್ನ | ಬೆನ್ನು |

| | | |
|---|---|---|
| ಸಂಬಂದವಾಚಿ: | ಮಗಳ | ಮಗಳು |
| | ಮಕ್ಕಳ | ಮಕ್ಕಳು |

ಶಿಶ್ಟಕನ್ನಡದಾಗ 'ಉ'ಕೊನೆಪದಗಳಾಗಿ ಬಳಕೆಯಲ್ಲಿರುವಸ್ವೀಕ್ರುತಪದಗಳು ಕೂಡ ಯಾದಗಿರಿ ಪರಿಸರದ ಕನ್ನಡದಾಗ'ಅ'ಕೊನೆಪದಗಳಂತೆಬಳಕೆಯಲ್ಲಿರುವುದು ಈ ಪ್ರಕ್ರಿಯೆಯವ್ಯಾಪಕತೆಯನ್ನು ತೋರಿಸುತ್ತದೆ.

| | | |
|---|---|---|
| ಸಂಸ್ಕ್ರುತ ಪದಗಳು: | ಅಸ್ರ/ಅಸರ | ಹಸಿರು |
| | ಉಸಿರ | ಉಸಿರು |
| | ದೇವರ | ದೇವರು |
| | ಕರ | ಕರು |
| ಪರ್ಶ್ಯೋ-ಅರ್‍ಯಾಬಿಕ್ ಪದಗಳು: | ಬಜಾರ | ಬಜಾರು |
| | ತಾರೀಕ | ತಾರೀಕು |
| | ಜಮೀನ | ಜಮೀನು |
| | ಇನಾಮ | ಇನಾಮು |
| | ಕುದ್ದ | ಕುದ್ದು |
| | ಮೇಜ | ಮೇಜು |
| ಇಂಗ್ಲೀಶ್ ಪದಗಳು: | ಕಾಲೇಜ | ಕಾಲೇಜು |
| | ರೇಲ | ರಯಿಲು |
| | ಬಾಕ್ಸ | ಬಾಕ್ಸು |
| | ಪ್ಯಾಂಟ | ಪ್ಯಾಂಟು |
| | ನೋಟ | ನೋಟು |
| | ಬುಕ್ಕ | ಬುಕ್ಕು |

ಈ ಬಗೆಯ 'ಅ'ಕೊನೆಪದಗಳು ಲೇಕನದ ಆರಂಬದಲ್ಲಿ ಹೇಳಿದಂತೆ ಯಾದಗಿರಿ, ಕಲಬುರಗಿ, ದಾರವಾಡ ಮೊದಲಾದ ಪರಿಸರಗಳಲ್ಲಿ ಸಹಜವಾಗಿಯೂ ಈ ಪ್ರದೇಶಗಳಿಗೆ ಹೊಂದಿಕೊಂಡ ಇನ್ನು ಕೆಲ ಪರಿಸರಗಳಲ್ಲಿಯೂ ಕಂಡುಬರುತ್ತವೆ. ಈ ಪ್ರದೇಶಗಳನ್ನು ಸರಿಯಾಗಿ ಗುರುತಿಸುವ ಕೆಲಸ ಮಾಡಬೇಕಿದೆ. ಅದರಂತೆಯೆ ಈ ಕೆಲ ಬಡಗನ್ನಡಗಳು ಈ ಪದಕೊನೆ ರಚನೆಯನ್ನು ಯಾವಾಗ ಇತರ ಕನ್ನಡಗಳಿಂದ ಒಡೆದುಕೊಂಡವು ಎಂಬುದನ್ನೂ ತಿಳಿದುಕೊಳ್ಳಬೇಕಿದೆ. ಈ ರೀತಿಯ 'ಅ'ಕೊನೆ ಪದಗಳು ಇನ್ನೂ ಇತರ ಕನ್ನಡಗಳಲ್ಲಿಯೂ ಕೆಲವೊಮ್ಮೆ ಕಂಡುಬರುತ್ತವೆ. ಇವುಗಳನ್ನು ಸೂಕ್ತವಾಗಿ ಅದ್ಯಯನಕ್ಕೆ ಒಳಪಡಿಸಬೇಕಿದೆ. ಮುಂದುವರೆದು ವಿವಿದ ಕನ್ನಡಗಳಲ್ಲಿ ಬಿನ್ನ ಬಗೆಯ ಪದರಚನೆಗಳು ಬಳಕೆಯಲ್ಲಿದ್ದು ಅವುಗಳನ್ನು ವಿಶೇಶವಾದ ಅದ್ಯಯನಕ್ಕೆ ಒಳಪಡಿಸಬೇಕಿದೆ. ಆಗ ಕನ್ನಡದ ಪದಗಳ ರಚನೆಯ ಅರಿವು ನಮಗೆ ದಕ್ಕುತ್ತದೆ. ಈ ನಿಟ್ಟಿನಲ್ಲಿ ಈ ಲೇಕನ ಒಂದು ಆರಂಬಿಕ ಪ್ರಯತ್ನ.

# ನಾಗವರ್ಮನ ಕರ್ಣಾಟಕ ಭಾಷಾಭೂಷಣ

ಡಾ.ಎಚ್.ಎಸ್.ಅನಂತನಾರಾಯಣ

**ಪೀಠಿಕೆ**

ನಮಗೆ ಲಭ್ಯವಾಗಿರುವ ಕನ್ನಡ ಭಾಷೆಯ ಅತಿ ಪ್ರಾಚೀನ ವ್ಯಾಕರಣವೆಂದರೆ, "ಕರ್ಣಾಟಕ ಭಾಷಾಭೂಷಣ" ಎನ್ನಬಹುದು. ಇದರಲ್ಲಿ ವರ್ಣಿಸಿರುವ ಭಾಷೆ ಹಳೆಗನ್ನಡ.ಇದರ ರಚಯಿತ ನಾಗವರ್ಮ.ಇವನನ್ನು ಕೆಲವರು ಮೊದಲನೆಯ ನಾಗವರ್ಮನೆಂದು, ಇನ್ನು ಕೆಲವರು ಎರಡನೆಯ ನಾಗವರ್ಮನೆಂದು ಹೇಳುತ್ತಾರೆ. ಕ್ರಿ.ಶ.೧೦೭೦ ರಿಂದ ೧೧೨೦ ರ ಮಧ್ಯಕಾಲದಲ್ಲಿ ಇದ್ದನೆಂದು ಕೆಲವರು ಹೇಳುತ್ತಾರೆ (ನೋಡಿ: ಕರ್ಣಾಟ ಶಬ್ದಸೂತ್ರಾಣಿ ರಚಿತಾನಿ ... ಕೃತಿನಾ ನಾಗವರ್ಮಣಾ). ಆದರೆ, ನಯಸೇನನನ್ನು ತನ್ನ ಸೂತ್ರವೊಂದರಲ್ಲಿ ಹೆಸರಿಸಿರುವುದರಿಂದ (೩.೩೭ ದೀರ್ಘೋಕ್ತಿರ್ ನಯಸೇನಸ್ಯ), ನಾಗವರ್ಮ ಅವನಿಗಿಂತ ನಂತರದವನೆನ್ನಬಹುದು.ನಯಸೇನ ತನ್ನ ಕೃತಿ ಧರ್ಮಾಮೃತದ ಕಾಲವನ್ನು ಕ್ರಿ.ಶ.೧೧೧೫ ಎಂದಿದ್ದಾನೆ. ಕ್ರಿ.ಶ.೧೧೭೨ ರಲ್ಲಿ ಮರಣಿಸಿದ ಹೇಮಚಂದ್ರನನ್ನು ನಾಗವರ್ಮ ತನ್ನ ಕೋಶರಚನೆಯಲ್ಲಿ ಉಪಯೋಗಿಸಿಕೊಂಡಿಲ್ಲ. ಕ್ರಿ.ಶ. ೧೧೬೫ ರ ಸುಮಾರಿಗಿದ್ದ ಕೇಶಿರಾಜನಿಗಿಂತಲೂ ಇವನು ಮೊದಲಿನವನು. ಹಾಗಾಗಿ, ನಾಗವರ್ಮನು ೧೧ನೆಯ ಶತಮಾನದ ಕಡೆಯ ಭಾಗ ಮತ್ತು ೧೨ನೆಯ ಶತಮಾನದ ಮೊದಲ ಭಾಗದಲ್ಲಿ ಇದ್ದನೆಂದು ನಿಶ್ಚಯವಾಗಿ ಹೇಳಬಹುದು. ಇವನ ವ್ಯಾಕರಣವು ದ್ರಾವಿಡ ಭಾಷಾವಿಜ್ಞಾನಿಗಳಿಗೂ ತಿಳಿದಿಲ್ಲವೆನಿಸುತ್ತದೆ; ಕಾರಣ ಯಾರೂ ಇದನ್ನು ಹೆಸರಿಸಿಲ್ಲ. ಇದು ಸಂಸ್ಕೃತಭಾಷೆಯಲ್ಲಿ ಇರುವ ಕಾರಣ ಕನ್ನಡಲೇಖಕರ ಗಮನಕ್ಕೆ ಬಂದಂತಿಲ್ಲ. ಅದ್ದರಿಂದ ಇದರಬಗ್ಗೆ ತಿಳುವಳಿಕೆಯನ್ನು ನೀಡುವುದೇ ಈ ಲೇಖನದ ಉದ್ದೇಶ. ಇದರಲ್ಲಿ ನಾಗವರ್ಮ ಕನ್ನಡಭಾಷೆಯನ್ನು ಸಂಸ್ಕೃತದ ಸೂತ್ರ ಶೈಲಿಯಲ್ಲಿ ಬರೆದಿರುವುದು ಒಂದು ವಿಶೇಷ.

**ಗ್ರಂಥಕರ್ತೃವಿನ ಬಗ್ಗೆ**

ನಾಗವರ್ಮನು ಕೌಂಡಿನ್ಯ ಗೋತ್ರದ ಬ್ರಾಹ್ಮಣ ಕುಟುಂಬಕ್ಕೆ ಸೇರಿದ್ದು ಇಂದಿನ ಆಂಧ್ರಪ್ರದೇಶದ ಕೃಷ್ಣಾ ಜಿಲ್ಲೆಯೆನಿಸಿದ ವೆಂಗಿ ಎಂಬ ನಗರದಲ್ಲಿ

ವಾಸಿಸುತ್ತಿದ್ದನು.ವೆಣ್ಣಮಯ್ಯ ಮತ್ತು ಪೋಳಿಕಬ್ಬೆ ದಂಪತಿಗಳ ಜ್ಯೇಷ್ಠಪುತ್ರನಾಗಿ ಜನಿಸಿದನು.ಅವನ ಅಜ್ಜ ದಾಮುಮಯ್ಯ ಹಾಗೂ ಅಜ್ಜಿ ಕುಂದಕಬ್ಬೆ.ಜೈನ ಮತವನ್ನವಲಂಬಿಸಿದ ನಂತರ ವೆಂಗಿಯನ್ನು ತ್ಯಜಿಸಿದನು. ಮತಾಂತರಕ್ಕೆ ಕಾರಣವೇನಿತ್ತೋ ತಿಳಿಯದು.ಅವನ ಹೆಸರು ಮೊದಲಿಗೆ ನಾಗವರ್ಮ ಎಂದಿರಲಾರದು, ಕಾರಣ, ಆರೀತಿಯ ಹೆಸರು ಬ್ರಾಹ್ಮಣರಲ್ಲಿ ಕಾಣಬರುವುದಿಲ್ಲ. ಜೈನಮತವನ್ನು ಸೇರಿದಮೇಲೆ ಈಹೆಸರನ್ನು ಪಡೆದಿರಬಹುದು (ನೋ. ಜೈನರಾದ ಗುಣವರ್ಮ, ಶರ್ವವರ್ಮ).ಪಶ್ಚಿಮ ಚಾಲುಕ್ಯರ ಆಳ್ವಿಕೆಗೊಳಪಟ್ಟಿದ್ದ ಕರ್ಣಾಟ ರಾಜ್ಯದ ಭಾಗವೊಂದರಲ್ಲಿ ಇವನು ನೆಲಸಿದನು.ಅದು ಬಳ್ಳಾರಿ ಜಿಲ್ಲೆಯ ಪಶ್ಚಿಮಕ್ಕೆ ತುಂಗಭದ್ರಾನದಿಯ ದಂಡೆಯ 'ಪೊಳಲು' (ಈಗಿನ ಹೊಳಲು) ಎಂದು ಗುರುತಿಸಲ್ಪಟ್ಟಿದೆ (ನೋ.ಸೂತ್ರ ೧೭೫).ಇವನ ವಿದ್ಯಾಭ್ಯಾಸವನ್ನು ಕುರಿತು ಹಾಗೂ ಹೆಂಡತಿ ಮಕ್ಕಳ ಬಗ್ಗೆ ನಮಗೇನೂ ತಿಳಿದುಬಂದಿಲ್ಲ. ಸಂಸ್ಕೃತದಲ್ಲಿ ಸೂತ್ರಶೈಲಿಯನ್ನುಪಯೋಗಿಸಿ ತನ್ನ ವ್ಯಾಕರಣವನ್ನು ರಚಿಸಿರುವುದರಿಂದ ಇವನು ಸಂಸ್ಕೃತವನ್ನು ಚೆನ್ನಾಗಿ ಅಭ್ಯಸಿಸಿದ್ದಿರಬೇಕು.

**ಕೃತಿಗಳು**

ಇವನು ಕಾವ್ಯಾವಲೋಕನ, ಛಂದೋಂಬುಧಿ, ಕರ್ಣಾಟಕ ಭಾಷಾಭೂಷಣ, ವಸ್ತುಕೋಶ, ಕಾದಂಬರಿ ಎಂಬ ಐದು ಗ್ರಂಥಗಳನ್ನು ರಚಿಸಿದ್ದಾನೆ. ಕಾವ್ಯಾವಲೋಕನ ಕನ್ನಡ ಪದ್ಯರಚನೆಯ ಬಗ್ಗೆ ತಿಳುವಳಿಕೆ ನೀಡುತ್ತದೆ. ಇದರಲ್ಲಿ ಶಬ್ದಸ್ಮೃತಿ, ಕಾವ್ಯಮಾಲಾವ್ಯಾವೃತ್ತಿ, ಗುಣವಿವೇಕಂ, ರೀತಿಕ್ರಮ ರಸ ನಿರೂಪಣಂ, ಕವಿಸಮಯಂ ಎಂದು ಐದು ಅಧಿಕರಣಗಳಿದ್ದು ಅವುಗಳನ್ನು ಪ್ರಕರಣಗಳಲ್ಲಿ ವಿಭಾಗಿಸಿದೆ. ಮೊದಲ ಅಧಿಕರಣವೆನಿಸಿದ ಶಬ್ದಸ್ಮೃತಿಯು ಸಂಕ್ಷೇಪವಾಗಿ ಕನ್ನಡ ವ್ಯಾಕರಣವನ್ನು ಹೇಳುತ್ತದೆ. ಅದರಲ್ಲಿ ಸಂಜ್ಞಾ, ಸಂಧಿ, ನಾಮ ಸಮಾಸ, ತದ್ಧಿತ, ಮತ್ತು ಆಖ್ಯಾತ ಎಂಬ ಆರು ಭಾಗಗಳಿವೆ. ಎರಡನೆಯ ಅಧಿಕರಣದಲ್ಲಿ ಪದಪದಾರ್ಥಸಂಧಿದೋಷ ಮತ್ತು ಸಾರವಿಚಾರ ಎಂಬ ಎರಡು ಭಾಗಗಳಿವೆ. ಮೂರನೆಯದರಲ್ಲಿ ಮಾರ್ಗದರ್ಶನಂ, ಶಬ್ದಾಲಂಕಾರನಿರ್ಣಯಂ, ಮತ್ತು ಅರ್ಥಾಲಂಕಾರ ಎಂಬ ಭಾಗಗಳಿವೆ. ಇದರ ಪೂರ್ಣಪ್ರತಿಯೊಂದು ಲಭ್ಯವಿಲ್ಲದ ಕಾರಣ ಇತರ ಎರಡು ಅಧಿಕರಣಗಳ ವಿವರ ತಿಳಿಯದು. ಛಂದೋಂಬುಧಿ ಕನ್ನಡ ಛಂದಸ್ಸುಗಳ ಕೈಪಿಡಿ. ಇದೂ ಸಹ ಪದ್ಯರೂಪದಲ್ಲಿದ್ದು ಐದು ಆಶ್ವಾಸಗಳಿಂದ ಕೂಡಿದೆ. ಮೊದಲಿನೆರಡು ಅಕ್ಷರಗಣಗಳ ಬಗ್ಗೆ ಉಳಿದ ಮೂರು ಮಾತ್ರಾಗಣಗಳ ಬಗ್ಗೆ ವಿವರಣೆ ನೀಡುತ್ತವೆ.

ವಸ್ತುಕೋಶ ಸಂಸ್ಕೃತ-ಕನ್ನಡದ ನಿಘಂಟು.ಪದ್ಯರೂಪದಲ್ಲಿದ್ದು ಕನ್ನಡದಲ್ಲಿ ಉಪಯೋಗದಲ್ಲಿದ್ದ ಸಂಸ್ಕೃತಪದಗಳ ಅರ್ಥವನ್ನು ವಿವರಿಸುತ್ತದೆ.ಇದರ ರಚನೆಯಲ್ಲಿ ನಾಗವರ್ಮನು ವರರುಚಿ, ಹಲಾಯುಧ, ಶಾಶ್ವತ, ಮತ್ತು ಅಮರಸಿಂಹ ಇವರ ಕೃತಿಗಳನ್ನು ಉಪಯೋಗಿಸಿಕೊಂಡಿದ್ದಾನೆ. ಇದು ಏಕಾರ್ಥ, ನಾನಾರ್ಥ, ಮತ್ತು ಸಾಮಾನ್ಯ ಎಂದು ಮೂರು ಕಾಂಡಗಳಿಂದ ಕೂಡಿದೆ.ಕಾದಂಬರಿ ಎನ್ನುವುದು ಅದೇ

ಹೆಸರಿನ ಸಂಸ್ಕೃತದ ಬಾಣಕವಿಯ ಕೃತಿಯ ಅನುವಾದ.ಇದು ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ತರುವ ಅನುವಾದ ಕಲೆಯ ಪ್ರಥಮ ಪ್ರಯತ್ನ ಎನ್ನಬಹುದು.

ಕರ್ಣಾಟಕ ಭಾಷಾಭೂಷಣವು ಸಂಸ್ಕೃತ ಭಾಷೆಯಲ್ಲಿ ಸೂತ್ರಶೈಲಿಯಲ್ಲಿ ಬರೆಯಲ್ಪಟ್ಟಿದೆ. ಇದರಲ್ಲಿ ಸಂಜ್ಞಾ(೧೭ ಸೂತ್ರಗಳು), ಸಂಧಿ (೨೦), ವಿಭಕ್ತಿ (೩೭), ಕಾರಕ (೨೪), ಶಬ್ದರೀತಿ (೩೨), ಸಮಾಸ (೪೨), ತದ್ಧಿತ (೨೬), ಆಖ್ಯಾತ ನಿಯಮ (೫೦), ಅವ್ಯಯ ನಿರೂಪಣ (೧೬), ನಿಪಾತ ನಿರೂಪಣ (೧೬) ಎಂದು ಹತ್ತು ಅಧ್ಯಾಯಗಳು, ಒಟ್ಟು ೨೮೦ ಸೂತ್ರಗಳು ಇವೆ. ಪ್ರಾರಂಭದಲ್ಲಿ ಮಂಗಳಾಚರಣೆ ಒಂದು ಶ್ಲೋಕ, ಕಡೆಯಲ್ಲಿ ಮುಕ್ತಾಯವೆಂದು ನಾಲ್ಕು ಶ್ಲೋಕಗಳಿವೆ. ಸೂತ್ರಗಳ ವಿವರವನ್ನು ಕೊಡುವ ವೃತ್ತಿಯೊಂದನ್ನು ಸಂಸ್ಕೃತದಲ್ಲಿ ನಾಗವರ್ಮನೇ ರಚಿಸಿದ್ದಾನೆ. "ಭಾಷಾಭೂಷಣ" ಎಂಬ ಶೀರ್ಷಿಕೆ ಕೇವಲ ಅವನ ವೃತ್ತಿಗೆ ಅನ್ವಯಿಸುವುದಾದರೂ ವ್ಯಾಕರಣವನ್ನೇ ಈಹೆಸರಿನಿಂದ ಗುರುತಿಸಲಾಗಿದೆ. ಕೃತಿಯನ್ನು ಕರ್ಣಾಟಕ ಸೂತ್ರವೃತ್ತಿ ಅಥವಾ ಕರ್ಣಾಟಕ ವ್ಯಾಕರಣ ಎಂದಿದ್ದಾನೆ (ನೋ.ಇತಿ ಕರ್ಣಾಟಕ ವ್ಯಾಕರಣ ವೃತ್ತೌ ಭಾಷಾಭೂಷಣ ನಾಮನಿ). ಪ್ರತಿ ಸೂತ್ರದ ಕೆಳಗೆ ತನ್ನ ಹಿಂದಿನ ಗ್ರಂಥಕರ್ತರಿಂದಾರಿಸಿದ (ಉದಾ.ಪಂಪ, ನಯಸೇನ, ಹರಿಪಾಲ, ಗುಣವರ್ಮ) ಪ್ರಯೋಗಗಳನ್ನು ನೀಡಿದ್ದಾನೆ.

ಅಂದಿನ ಭರತ ಖಂಡದಲ್ಲಿ ಪ್ರಚಲಿತವಾಗಿದ್ದ ಭಾಷೆಗಳ ವರ್ಗೀಕರಣವನ್ನು ಕುರಿತು ನಾಗವರ್ಮ ತಳೆದಿದ್ದ ಅಭಿಪ್ರಾಯ ಬಹಳ ಕುತೂಹಲಕಾರಿ ಹಾಗೂ ವಿಲಕ್ಷಣವಾಗಿದೆ. "ತಮಿಳು, ತೆಲುಗು, ಕನ್ನಡ ಮತ್ತು ಇತರ ಛಪ್ಪನ್ನ ದೇಶಗಳ ಭಾಷೆಗಳೆಲ್ಲವೂ ಸಂಸ್ಕೃತ, ಪ್ರಾಕೃತ, ಅಪಭ್ರಂಶ, ಮತ್ತು ಪೈಶಾಚೀ ಎಂಬ ಮೂರೂವರೆ ಭಾಷೆಗಳಿಂದ ಉತ್ಪನ್ನವಾದವು" ಎಂದಿದ್ದಾನೆ ನಾಗವರ್ಮ (ಸಂಸ್ಕೃತಮ್ ಪ್ರಾಕೃತಮ್ ಅಪಭ್ರಂಶಮ್ ಪೈಶಾಚಿಕಮ್ ಎಂಬ ಮೂರುವರೆ ಭಾಷೆಗಳೊಳ್ ಪುಟ್ಟುವ ದ್ರವಿಡಾಂಧ್ರ ಕರ್ಣಾಟಕಾದಿ ಷಟ್ಪಂಚಾಶತ್ ಸರ್ವವಿಷಯ ಭಾಷಾಜಾತಿಗಳ್ ಅಕ್ಕುಮ್). ಅಂದರೆ, ದ್ರಾವಿಡ ಭಾಷೆಗಳು ಮತ್ತು ಆಕಾಲದಲ್ಲಿ ಪ್ರಚಲಿತವಾಗಿದ್ದ ಎಲ್ಲಭಾಷೆಗಳ ಮೂಲಭಾಷೆ 'ಇಂಡೋ-ಆರ್ಯನ್' ಎಂದಂತಾಯಿತು. ಈ ಛಪ್ಪನ್ನ ದೇಶಗಳ ಪಟ್ಟಿಯಲ್ಲಿ ಗಿರಿಜನರ ಭಾಷೆಯನ್ನಾಡುತ್ತಿದ್ದ ವನವಾಸ, ಶಬರ, ಕುಕುರ ಎಂಬ ದೇಶಗಳು ಸೇರಿವೆ. ಹಾಗೆಯೇ ಪಾರಶೀಕ, ಹೈಹಯ, ಬರ್ಬರ, ಖುರಸಾಣ, ಹೂಣ ಎಂಬ ಹೆಸರುಗಳಿವೆ. ಆ ಪ್ರದೇಶಗಳಲ್ಲಿ ಆರ್ಯ ಹಾಗೂ ದ್ರಾವಿಡೇತರ ಭಾಷೆಗಳನ್ನು ಆಡುತ್ತಿದ್ದಿರಬೇಕು.ಅಂದರೆ, ಆಭಾಷೆಗಳೂ ಮೇಲೆ ಹೇಳಿದ ಮೂರೂವರೆ ಭಾಷಾಜನ್ಯಗಳು ಎಂದಂತಾಯಿತು.

ನಾಗವರ್ಮನನ್ನು ಶಾಸ್ತ್ರಗಳ ಭಾಷೆಯಾದ ಸಂಸ್ಕೃತವನ್ನುಪಯೋಗಿಸಿ ದ್ರಾವಿಡ ಕುಟುಂಬದ ಕನ್ನಡ ವ್ಯಾಕರಣವನ್ನು ರಚಿಸಿದ ಮೊದಲ ವೈಯಾಕರಣ ಎನ್ನಬಹುದು. ಆರ್ಯೇತರ ಭಾಷೆಯೊಂದನ್ನು ಸಂಸ್ಕೃತ ಸೂತ್ರಶೈಲಿಯಲ್ಲಿ ವಿವರಿಸುವುದು ಸಾಧ್ಯವೆಂದು ತೋರಿಸಿಕೊಟ್ಟ ಇವನು ತೆಲುಗು ವ್ಯಾಕರಣವನ್ನು ಅಷ್ಟಾಧ್ಯಾಯಿಯ ಮಾದರಿಯಲ್ಲಿ ರಚಿಸಿದ ಚಿನ್ನಯಸೂರಿಗಿಂತಲೂ ಕನಿಷ್ಠ ಆರು ಶತಮಾನಗಳು ಮುಂಚಿನವನು.

ಚಿನ್ನಯಸೂರಿಯು ತನ್ನ "ಬಾಲವ್ಯಾಕರಣಮು" ಎಂಬ ಕೃತಿಯನ್ನು ಕ್ರಿ.ಶ.೧೮೫೮ರಲ್ಲಿ ಪ್ರಕಾಶಿಸಿದನು; ಆದರೆ, ನಾಗವರ್ಮನ ಕನ್ನಡ ವ್ಯಾಕರಣವು ೧೨ನೆಯ ಶತಮಾನದ ಮೊದಲಭಾಗಕ್ಕೆ ಸೇರಿದ್ದು.

ಕರ್ಣಾಟಕ ಭಾಷಾಭೂಷಣ

ಈ ವ್ಯಾಕರಣದಲ್ಲಿ ೨೮೦ ಸೂತ್ರಗಳಿದ್ದು ಹತ್ತು ವಿಧಾನಗಳಿಂದ ಕೂಡಿದೆ. ಅವು ಯಾವುವೆಂದರೆ: ಸಂಜ್ಞಾ, ಸಂಧಿ, ವಿಭಕ್ತಿ, ಕಾರಕ, ಶಬ್ದರೀತಿ, ಸಮಾಸ, ತದ್ಧಿತ, ಆಖ್ಯಾತ, ಅವ್ಯಯ, ನಿಪಾತ. ಪ್ರಾರಂಭದಲ್ಲಿ ಮಂಗಳಶ್ಲೋಕ, ಕಡೆಯಲ್ಲಿ ನಾಲ್ಕು ಮುಕ್ತಾಂಯ ಶ್ಲೋಕಗಳಿವೆ (ನೋ.ಕರ್ಣಾಟ ಸೂತ್ರವೃತ್ತೌ ತದ್ಭಾಷಾಭೂಷಣನಾಮನಿ ಸಂಜ್ಞಾ ಸಂಧಿ ಸುವಿಭಕ್ತಿ ಕಾರಕಂ ಶಬ್ದರೀತಯಃ/ ಸಮಾಸತದ್ಧಿತಾಖ್ಯಾತಾ ಅವ್ಯಯಾನಿ ನಿಪಾತತಃ ಕ್ರಮಾದ್ ದಶ ಪರಿಚ್ಛೇದಾಃ ಸ್ಫುಟಾರ್ಥಾಸ್ಸಮುದೀರಿತಾಃ).ಆದರೆ, ಈ ಲೇಖನದಲ್ಲಿ ಮೊದಲಿನ ನಾಲ್ಕು ವಿಧಾನಗಳನ್ನು ಮಾತ್ರ ವಿವರಿಸುವ ಪ್ರಯತ್ನಮಾಡಿದೆ.

ಸೂತ್ರದ ಲಕ್ಷಣವನ್ನು ತಿಳಿಸುವ – ಅಲ್ಪಾಕ್ಷರಂ ಅಸಂದಿಗ್ಧಂ ಸಾರವದ್ ವಿಶ್ವತೋಮುಖಂ / ಅಸ್ತೋಭಂ ಅನವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ ಅಂದರೆ, "ಅತಿ ಕಡಿಮೆ ಶಬ್ದಗಳಲ್ಲಿ ಸಂದೇಹವಿಲ್ಲದಂತೆ, ಸರಳವಾಗಿ ಆದರೆ, ಯಾವುದನ್ನೂ ಬಿಡದೇ ಹೇಳುವ ಪುಟ್ಟವಾಕ್ಯಗಳೇ ಸೂತ್ರಗಳು"– ಈಶ್ಲೋಕವು ಪದ್ಮ ಪುರಾಣದ್ದಾಗಿದ್ದು ಇದನ್ನು ಮಧ್ವಾಚಾರ್ಯರು ಬಾದರಾಯಣರ ಬ್ರಹ್ಮಸೂತ್ರದ ಮೇಲಿನ ತಮ್ಮ ಭಾಷ್ಯದಲ್ಲಿ ಮೊಟ್ಟಮೊದಲಿಗೆ ಪ್ರಸ್ತಾಪಿಸಿರುವುದು ಕಂಡುಬರುತ್ತದೆ. ಸಂಸ್ಕೃತದ ಸೂತ್ರಶೈಲಿಯ ವ್ಯಾಕರಣದಲ್ಲಿ ಕಂಡುಬರುವ ತಂತ್ರಗಳನ್ನೆಲ್ಲಾ ನಾಗವರ್ಮ ಉಪಯೋಗಿಸಿದ್ದಾನೆ : 'ಅಧಿಕಾರ' ಮತ್ತು 'ಅನುವೃತ್ತಿ' (ಉದಾ. ೨.೧ ಸಂಧೌ 'ಸಂಧಿಯಲ್ಲಿ' ಎನ್ನುವುದು ಒಂದು ಅಧಿಕಾರ ಸೂತ್ರ). 'ಸಾಮಾನ್ಯ' (ಉದಾ. ೨.೨ ಸ್ವರೇ ಸ್ವರಸ್ಯ ಲೋಪಃ 'ಸ್ವರಕ್ಕೆ ಸ್ವರ ಪರವಾದಾಗ ಪೂರ್ವಸ್ವರ ಲೋಪಿಸುತ್ತದೆ'), 'ನಿಯಮ' (ಉದಾ. ೨.೩ ಪ್ರಕೃತೇರ್ ಉದೇತೋಃ 'ಮೊದಲ ಸ್ವರ [ಉ] ಅಥವಾ [ಏ] ಆಗಿದ್ದಾಗ ಮಾತ್ರ') ಮತ್ತು 'ಅಪವಾದ' (ಉದಾ. ೨.೪ ನ ನಾಮಭಾಗ ಪ್ರಧ್ವಂಸೇ 'ಅರ್ಥನಾಶ ಇಲ್ಲದಿರುವಾಗ') ಎಂಬ ಎಲ್ಲ ಬಗೆಯ ಸೂತ್ರಗಳನ್ನು ಉಪಯೋಗಿಸಿದ್ದಾನೆ. ಕೇವಲ [ಉ], [ಏ], ಮತ್ತು [ಓ] ಎಂದು ತಿಳಿಸಲು ಉಪಯೋಗಿಸಿರುವ ಉತ್, ಏತ್, ಮತ್ತು ಓತ್ ಎಂಬ ಪ್ರಯೋಗಗಳಲ್ಲಿ 'ಇತ್ ಸಂಜ್ಞೆಯ' ಉಪಯೋಗವನ್ನು ಕಾಣಬಹುದು (ಹೋಲಿಸಿ : ಅಷ್ಟಾ. ೧.೧.೭೦ ತಪರಃ ತತ್ಕಾಲಸ್ಯ). ತಸ್ಮಿನ್ನಿತಿ ನಿರ್ದಿಷ್ಟೇ ಪೂರ್ವಸ್ಯ (ಅಷ್ಟಾ. ೧.೧.೬೬) ಮತ್ತು ತಸ್ಮಾದಿತ್ಯುತ್ತರಸ್ಯ (ಅಷ್ಟಾ. ೧.೧.೬೭) ಎಂಬ 'ಪರಿಭಾಷೆ'ಗಳ ಉಪಯೋಗವನ್ನು ಸಹ ಇಲ್ಲಿ ಕಾಣಬಹುದು. 'ಪ್ರತ್ಯಾಹಾರ'ವೊಂದನ್ನು ಮಾತ್ರ ಉಪಯೋಗಿಸಿಲ್ಲ. ಸಂಜ್ಞೆಗಳನ್ನು ಹಿಂದಿನವರಿಂದ ತೆಗೆದುಕೊಂಡಂತಿದೆ.ಸೂತ್ರಗಳಲ್ಲಿ ಕ್ರಿಯಾಪದದ

ಉಪಯೋಗವಿಲ್ಲ. ಸೂತ್ರದಲ್ಲಿ ಲಕ್ಷಣವನ್ನು ಮೊದಲು ಹೇಳಿ ನಂತರ ಅದರ ಲಕ್ಷ್ಯವನ್ನು ಹೇಳಿದೆ (ಉದಾ.೧.೩ ತೇಷ್ವಾದೌ ಚತುರ್ದಶ ಸ್ವರಾಃ 'ಅವುಗಳಲ್ಲಿ ಮೊದಲಿನ ಹದಿನಾಲ್ಕು ಸ್ವರಗಳು"); ಒಮ್ಮೊಮ್ಮೆ ಅದು ಹಿಂದುಮುಂದಾಗಿರುವುದೂ ಉಂಟು (ಉದಾ. ೧.೮ ಅನುನಾಸಿಕಾಸ್ತೇಷಾಂ ಪಂಚಮಃ 'ಅವುಗಳಲ್ಲಿ ಅನುನಾಸಿಕವು ಐದನೆಯದು').

ವ್ಯಾಕರಣದ ಶೀರ್ಷಿಕೆಯಲ್ಲಿರುವ 'ಕರ್ಣಾಟಕ' ಶಬ್ದವು ಕನ್ನಡಭಾಷೆಯನ್ನು ತಿಳಿಸುತ್ತದೆ, ಇಂದಿನ ಕರ್ನಾಟಕಪ್ರಾಂತವನ್ನಲ್ಲ. ಪ್ರಾಂತ ಎಂಬರ್ಥದಲ್ಲಿ ಕರ್ನಾಟಕ ಶಬ್ದದ ಉಪಯೋಗ ಇತ್ತೀಚಿನದು. ಕುಮಾರವ್ಯಾಸನೂ ತನ್ನ ಕೃತಿಯಾದ 'ಕರ್ಣಾಟ ಭಾರತ ಕಥಾಮಂಜರಿ'ಯಲ್ಲಿ ಕರ್ಣಾಟ ಎಂಬ ಪದವನ್ನು ಕನ್ನಡವೆಂಬರ್ಥದಲ್ಲೇ ಉಪಯೋಗಿಸಿದ್ದಾನೆ. ದುರ್ಗಸಿಂಹನ 'ಕರ್ಣಾಟಕ ಪಂಚತಂತ್ರ' ದಲ್ಲೂ ಕನ್ನಡ ಎಂಬರ್ಥದಲ್ಲೇ ಕರ್ಣಾಟಕ ಎಂಬ ಶಬ್ದವನ್ನು ಉಪಯೋಗಿಸಿದೆ. ವಿಶ್ವಗುಣಾದರ್ಶದ ಕರ್ತೃ ಕರ್ಣಾಟಕ ಶಬ್ದದ ನಿರ್ವಚನವನ್ನು ಕರ್ಣ + ಅಟಕ 'ಎಲ್ಲ ಜನರ ಕಿವಿಗೆ ಬೀಳುವುದು' ಎಂದು ಪ್ರಾಂತದ ಹೆಸರಾಗಿ ತೋರಿಸಿದ್ದಾನೆ. ಈ ಪದವು ಸಾಕಷ್ಟು ಪ್ರಾಚೀನವಾಗಿದ್ದು, ಐದನೆಯ ಶತಮಾನದ ಆದಿಯಲ್ಲಿದ್ದ ವರಾಹಮಿಹಿರನ ಕೃತಿಯಲ್ಲಿ ಲಭ್ಯವಿದೆ.ಒಂದೇ ಪದದಲ್ಲಿ [ರ] ನಂತರ ಬರುವ ನ-ಕಾರ ಣ-ಕಾರವಾಗುತ್ತದೆ ಎನ್ನುವುದು (ಅಷ್ಟಾ. ೮.೪.೧ ರಷಾಭ್ಯಾಂ ನೋ ಣಃ ಸಮಾನಪದೇ) ಕನ್ನಡದ ಸಂಧಿ ನಿಯಮವಲ್ಲ; ಅದು ಸಂಸ್ಕೃತದ ಒಂದು ಸಂಧಿ ನಿಯಮ.ಇದರ ಕಡೆಗೆ 'ಕರ್ನಾಟಕ ಎಂಬ ರೂಪ ಅಸಾಧುವೇ'?ಎಂಬ ಲೇಖನದಲ್ಲಿ ಪ್ರೊ.ತೀ. ನಂ.ಶ್ರೀಕಂಠಯ್ಯನವರು ಗಮನ ಸೆಳೆದಿದ್ದಾರೆ (ನೋ.ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ ೨೩.೩, ೧೯೩೮). ಹಾಗಾಗಿ, ಮೂರ್ಧನ್ಯೀಕರಣವಿಲ್ಲದೇ 'ಕರ್ನಾಟಕ' ಎಂದು ಹಾಗೂ 'ಕನ್ನಡ ಮಾತನಾಡುವ ದೇಶ' ಎಂಬರ್ಥದಲ್ಲಿ ಎಲ್ಲರೂ ಈಗ ಬಳಸುತ್ತಿದ್ದಾರೆ.

ಭಾರತೀಯ ಸಂಪ್ರದಾಯದಂತೆ, ಪ್ರಾರಂಭಿಸಿದ ಗ್ರಂಥ ನಿರ್ವಿಘ್ನವಾಗಿ ಸಮಾಪ್ತಿಯಾಗಲೆಂದು ಪ್ರಾರಂಭದಲ್ಲಿ ನಾಗವರ್ಮನು 'ಮಂಗಲಾಚರಣೆ' ಮಾಡಿದ್ದಾನೆ (ಮಾಂಗಲ್ಯಾದೀನಿ ಶಾಸ್ತ್ರಾಣಿ ಪ್ರದಂತೇ). ಅದು ಈ ರೀತಿ ಇದೆ: ಸರ್ವಜ್ಞಂ ತದಹಂ ವಂದೇ ಪರಂಜ್ಯೋತಿಸ್ತಮೋಪಹಂ / ಪ್ರವೃತ್ತಾ ಯನ್ಮುಖಾದ್ ದೇವೀ ಸರ್ವಭಾಷಾ ಸರಸ್ವತೀ "ಯಾರ ಮುಖದಿಂದ ಎಲ್ಲ ಭಾಷಾಪ್ರವಾಹಗಳೂ ಹೊರಬಂದವೋ ಅಂತಹ ಸಕಲವನ್ನೂ ತಿಳಿದ, ಅಜ್ಞಾನವೆಂಬ ಕತ್ತಲೆಯನ್ನು ತೊಲಗಿಸುವ ಪರಮ ಪ್ರಕಾಶವನ್ನು ನಮಸ್ಕರಿಸುತ್ತೇನೆ". ಆ ಕಾಲಕ್ಕೆ ಇದೊಂದು ಬಹಳ ಧೈರ್ಯದ ಮಾತು: ಕಾರಣ, ಸಂಸ್ಕೃತವೊಂದೇ ದೈವಭಾಷೆಯೆಂದೂ, ಜನರಾಡುವ ಅತಿ ಪ್ರಾಚೀನ ಭಾಷೆಯೆಂದೂ ಜನಸಾಮಾನ್ಯರ ತಿಳುವಳಿಕೆಯಾಗಿತ್ತು. ಹುಟ್ಟಿನಿಂದ ಬ್ರಾಹ್ಮಣನಾಗಿದ್ದು, ಈ ಸಂಪ್ರದಾಯವನ್ನು ಅರಿತಿದ್ದರೂ ನಾಗವರ್ಮನು ತನ್ನ ಆಡುಭಾಷೆಯಾದ ಕನ್ನಡಕ್ಕೂ ಸಂಸ್ಕೃತದ ಸ್ಥಾನಮಾನಗಳನ್ನು ನೀಡುವ ಸಾಹಸ ಮಾಡಿದ್ದಾನೆ. ಸಂಸ್ಕೃತ ದೇವಭಾಷೆಯಾದಂತೆಯೇ ಎಲ್ಲ ಭಾಷೆಗಳೂ ದೇವಭಾಷೆಗಳೇ ಎಂದಿದ್ದಾನೆ.

ಯಾವುದೊಂದು ಭಾಷೆ ಪವಿತ್ರ ಇತರ ಭಾಷೆಗಳು ಅಪವಿತ್ರ ಎನ್ನಲಾಗುವುದಿಲ್ಲ. ಎಲ್ಲ ಭಾಷೆಗಳ ಉದ್ದೇಶವೂ ಅದನ್ನಾಡುವ ಜನರು ಪರಸ್ಪರರ ಮನೋಗತವನ್ನು ಹಂಚಿಕೊಳ್ಳುವುದೇ ಆಗಿದೆ.

**೧. ಸಂಜ್ಞಾ**

ಹದಿನೇಳು ಸೂತ್ರಗಳುಳ್ಳ ಈ ವಿಧಾನದಲ್ಲಿ ನಾಗವರ್ಮನು ತನ್ನ ಕಾಲದ ಕನ್ನಡಭಾಷೆಯ, ಅಂದರೆ, ಹಳೆಗನ್ನಡದ ವರ್ಣಸಮಾಮ್ನಾಯವನ್ನು ವಿವರಿಸಿದ್ದಾನೆ. ಈ ಅಕ್ಷರಮಾಲೆಯಲ್ಲಿ ಅ–ಕಾರದಿಂದ ಪ್ರಾರಂಭಿಸಿ ಹ–ಕಾರದಿಂದ ಕೊನೆಗೊಳ್ಳುವ ವರ್ಣಗಳಿವೆ (ಸೂ.೨ರ ವೃತ್ತಿ: ಅಕಾರಾದಯೋ ವರ್ಣಾಃ ಹಕಾರ ಪರ್ಯವಸಾನಾಃ). ಈ ಅಕ್ಷರಮಾಲೆಯು ತನಗೆ ಹಿಂದಿನವರಿಂದ ಲಭ್ಯವಾಯಿತೆಂದೂ ಆ ಕಾರಣದಿಂದ ಅದನ್ನು ತಾನು ಪುನಃ 'ಉಪದೇಶ' ಮಾಡುವ ಅವಶ್ಯಕತೆ ಇಲ್ಲವೆಂದೂ ಹೇಳಿದ್ದಾನೆ (೧.೨ ಅಕಾರಾದಯಃ ಪ್ರಸಿದ್ಧಾ ವರ್ಣಾಃ; ವೃತ್ತಿ: ತೇಷಾಂ ಅನಾದಿಕಾಲ ಪ್ರಸಿದ್ಧತ್ವಾತ್ ಅನ್ಯಥಾ ನೋಪದೇಷ್ಟವ್ಯಾಃ). ಪಾಣಿನಿಯ ಅಷ್ಟಾಧ್ಯಾಯೀ ಮತ್ತು ಪ್ರಾತಿಶಾಖ್ಯಗಳಲ್ಲಿ ಆವೇಳೆಗೇ ಅಕ್ಷರಮಾಲೆಯೊಂದಿತ್ತು.ವೈದಿಕ ಸಾಹಿತ್ಯದ ಕೊನೆಯ ಹಂತದ ಸಮಯಕ್ಕೇ (ಅಂದರೆ, ಸುಮಾರು ಕ್ರಿ. ಪೂ. ೭೦೦) ಒಂದು ಕ್ರಮದಲ್ಲಿ ಜೋಡಿಸಿದ ಅಕ್ಷರಮಾಲೆ ಸಿದ್ಧವಾಯಿತೆಂದು ಊಹಿಸಲಾಗಿದೆ.

ಈ ಅಕ್ಷರಮಾಲೆಯನ್ನು ಸ್ವೀಕರಿಸಿ ನಾಗವರ್ಮನು ಅದರಲ್ಲಿ ಕಂಡುಬಂದ 'ಸ್ವರಗಳ' ಹಾಗೂ 'ವ್ಯಂಜನಗಳ' ವಿಭಜನೆಯನ್ನು ಮಾತ್ರ ನೀಡಿದ್ದಾನೆ. ಅದರಂತೆ, ಆ ಮಾಲೆಯ ಮೊದಲಿನ ೧೪ ವರ್ಣಗಳನ್ನು 'ಸ್ವರಗಳು' ಎಂದಿದ್ದಾನೆ (೧.೩ ತೇಷ್ವಾದೌ ಚತುರ್ದಶ ಸ್ವರಾಃ; ಹೋಲಿಸಿ, ಕಾತಂತ್ರ ೧.೨ ತತ್ರ ಚತುರ್ದಶ ಆದೌ ಸ್ವರಾಃ). ಅವು ಯಾವುವೆಂದರೆ, ಅ ಆ, ಇ ಈ, ಉ ಊ, ಋ ೠ, ಌ ೡ, ಏ ಐ, ಓ ಔ. ಅವುಗಳ ಉಚ್ಚಾರಣೆಯ ಕಾಲಕ್ಕನುಗುಣವಾಗಿ (ಅಂದರೆ, ಒಂದು, ಎರಡು, ಮೂರು ಮಾತ್ರಾಕಾಲ), ಸ್ವರಗಳನ್ನು 'ಹ್ರಸ್ವ', 'ದೀರ್ಘ', 'ಪ್ಲುತ' ಎಂದು ಕರೆದಿದ್ದಾನೆ (೧.೪ ಏಕ ದ್ವಿ ತ್ರಿ ಮಾತ್ರಾಸ್ತೇ ಹ್ರಸ್ವ ದೀರ್ಘ ಪ್ಲುತಾಃ), ಆದರೆ, ಕನ್ನಡಭಾಷೆಯಲ್ಲಿ ಹ್ರಸ್ವ ಹಾಗೂ ದೀರ್ಘ [ಋ] ಮತ್ತು [ಌ] ಕಂಡುಬರುವುದಿಲ್ಲ ಎಂದಿದ್ದಾನೆ (೧.೧೩ ಋಕಾರಾದಯಶ್ಚತ್ವಾರಃ ಸ್ವರಾಶ್ಚ; ೧೧ ನಾತ್ರ ಪ್ರಾಯೇಣ ...). [ಏ] ಮತ್ತು [ಓ] ಸಂಸ್ಕೃತ ಭಾಷೆಯಲ್ಲಿ ಕೇವಲ ದೀರ್ಘವಾದರೆ, ಕನ್ನಡದಲ್ಲಿ ಅವು ಕೆಲವೊಮ್ಮೆ ಆಡುಭಾಷೆಯಲ್ಲಿ ಹ್ರಸ್ವರೂಪದಲ್ಲೂ ಕಂಡುಬರುತ್ತವೆ ಎನ್ನುತ್ತಾನೆ (೧.೫ ಏದೋತೌ ಹ್ರಸ್ವೌ ಚ), ಉದಾ. ಎಲೆ : ಏಲಕ್ಕಿ; ಒಲೆ : ಓಲೆ. ಅಂದರೆ, ಪ್ರಯೋಗದಲ್ಲಿ ಹ್ರಸ್ವರೂಪಗಳು ದೊರಕುವುದಿಲ್ಲ ಎಂದರ್ಥ.

ವರ್ಣಸಮಾಮ್ನಾಯದ ಉಳಿದ, ಕ–ಕಾರದಿಂದ ಪ್ರಾರಂಭಿಸಿ ಹ–ಕಾರದ ವರೆಗಿನ, ೩೩ ವರ್ಣಗಳು ವ್ಯಂಜನಗಳು (೧.೬ ಕಾದಯಃ ತ್ರಯಸ್ತ್ರಿಂಷತ್ ವ್ಯಂಜನಾನಿ; ಹೋ.ಕಾ.೧.೯ ಕಾದೀನಿ ವ್ಯಂಜನಾನಿ).ಅವು ಐದ್ಯೆದರಂತೆ ಐದು ವರ್ಗಗಳಲ್ಲಿ ವಿಭಜಿಸಲ್ಪಟ್ಟಿವೆ (೧.೭ ವರ್ಗಾಸ್ತೇ ಮಾಂತಾಃ ಪಂಚ ಪಂಚ ಪಂಚ; ಹೋ.ಕಾ.೧.೧೦

ತೇ ವರ್ಗಾಃ ಪಂಚ ಪಂಚ ಪಂಚ).ಪ್ರತಿವರ್ಗದ ಕಡೆಯ ವರ್ಣವನ್ನು 'ಅನುನಾಸಿಕ' ಎಂದಿದ್ದಾನೆ (೧.೮ ಅನುನಾಸಿಕಾಸ್ತೇಷಾಂ ಪಂಚಮಃ). [ಯ, ವ, ಲ] ಗಳು ಐಚ್ಛಿಕವಾಗಿ ಅನುನಾಸಿಕಗಳು (೧.೯ ವಿಭಾಷಯಾ ಯವಲಾಃ; ೮ ಅನುನಾಸಿಕಾಃ). 'ಸ್ವರ' ಮತ್ತು 'ವ್ಯಂಜನ' ಸಂಜ್ಞೆಗಳನ್ನು ಉಪಯೋಗಿಸಿಕೊಂಡನಾದರೂ, [ಯ ರ ಲ ವ] ಗಳನ್ನು 'ಅಂತಸ್ಥ' ಎಂದು ಹೆಸರಿಸಿಲ್ಲ. ಹಾಗೆಯೇ, [ಶ ಷ ಸ ಹ] ಗಳಿಗೆ 'ಊಷ್ಮ' ಎಂಬ ಸಂಜ್ಞೆಯನ್ನೂ ಉಪಯೋಗಿಸಿಲ್ಲ. ಸಾಮಾನ್ಯವಾಗಿ, ವರ್ಗದ ಎರಡನೆಯ ಮತ್ತು ನಾಲ್ಕನೆಯ ವರ್ಣಗಳು, ಅಂದರೆ, ಮಹಾಪ್ರಾಣ ವ್ಯಂಜನಗಳು ಕನ್ನಡಭಾಷೆಯಲ್ಲಿ ಕಂಡುಬರುವುದಿಲ್ಲ ಎಂದಿದ್ದಾನೆ (೧.೧೧ ನಾತ್ರ ಪ್ರಾಯೇಣ ವರ್ಗಾಣಾಂ ದ್ವಿತೀಯ ಚತುರ್ಥಾಃ). ಆದರೆ, ಸಂಖ್ಯಾವಾಚಿ ಶಬ್ದಗಳಲ್ಲಿ ಹಾಗೂ ಅನುಕರಣ ಶಬ್ದಗಳಲ್ಲಿ ಮಹಾಪ್ರಾಣಗಳು ಕಂಡುಬರುತ್ತವೆ, ಉದಾ.ಇರ್ಛಾಸಿರಂ, ಎಣ್ಭಾಸಿರಂ, ಫಣನೆ, ಧುಮ್ಮನೆ, ಭೋಂಕೆನೆ, ಠಕ್ಕು. ಹಾಗೆಯೇ, ಕನ್ನಡದಲ್ಲಿ [ಶ] ಮತ್ತು [ಷ] ಎಂಬ ಊಷ್ಮವರ್ಣಗಳಿಲ್ಲ (೧.೧೨ ಶಷೌ ಚ). ಆದ್ದರಿಂದ, ಸಂಸ್ಕೃತದ ಶಶಿ ಮತ್ತು ವೇಷಂ ಕನ್ನಡದಲ್ಲಿ ಕ್ರಮವಾಗಿ ಸಸಿ ಮತ್ತು ವೇಸಂ ಎಂದಾಗಿದೆ.ಆದರೆ, ಅವನ ಸೂತ್ರಗಳಲ್ಲಿ ಉದಹರಿಸಿರುವ ಪದಗಳಲ್ಲಿ ಶ-ಕಾರ ಕಂಡುಬಂದಿದೆ (ಸೂ. ೪.೧೮ - ಆದರೆ, ಕೇವಲ ಸಂಸ್ಕೃತ ತತ್ಸಮ ಶಬ್ದಗಳಲ್ಲಿ).'ಅನುಸ್ವಾರ' ಮತ್ತು 'ವಿಸರ್ಗ' ಸ್ವರವೊಂದನ್ನು ಅವಲಂಬಿಸಿರುವುದು ಕಾಣಬರುತ್ತದೆ.ಅಂದರೆ, ಅವನ್ನು ಸ್ವತಂತ್ರವಾಗಿ ಉಪಯೋಗಿಸಲು ಸಾಧ್ಯವಿಲ್ಲ. ಅನುಸ್ವಾರವು ಮುತ್ತನ್ನು ಹೋಲುವ ಒಂದು ಬಿಂದುವಿನಿಂದ, ವಿಸರ್ಗವು ಎರಡು ಬಿಂದುಗಳಿಂದ (ಉಪರ್ಯಧಶ್ಚ 'ಮೇಲೊಂದು ಕೆಳಗೊಂದು') ಸೂಚಿಸಲ್ಪಡುತ್ತವೆ, ಉದಾ. [ಅಂ], [ಅಃ]. [ಲ, ರ, ಡ] ಗಳು ದೇಶೀಯ ಪದಗಳಲ್ಲಿ [ಳ], [ರ*], [ಳ*] ಗಳಾಗಿವೆ, ಉದಾ. ಮೊಲೆ : ಮೊಳೆ; ಮೊರೆ : ಮೊರೆ*; ಕಡಲ್ : ಕಳ*ಲ್. ಇವುಗಳಲ್ಲಿ, [ಳ*] ಎಂಬುದು ೧೩ನೆಯ ಶತಮಾನದ ವೇಳೆಗೇ ನಷ್ಟವಾಯಿತು. [ರ*] ಎಂಬುದು ೧೮ನೆಯ ಶತಮಾನದ ವೇಳೆಗೆ ಲುಪ್ತವಾಯಿತು.ಆದರೆ, [ಳ] ಮಾತ್ರ ಭಾಷೆಯಲ್ಲಿ ಇಂದಿಗೂ ಉಳಿದುಬಂದಿದೆ.

ಕಡೆಯಲ್ಲಿ, ನಾಗವರ್ಮ ಎರಡು ಸಂಜ್ಞೆಗಳನ್ನು ವಿವರಿಸಿದ್ದಾನೆ. ಅವುಗಳ ಉಪಯೋಗ ಈವಿಭಾಗದಲ್ಲಿ ಇಲ್ಲವಾದರೂ, ಮುಂದಿನ ವಿಭಾಗಗಳಲ್ಲಿ ಅವು ಪ್ರಯೋಜನ ಪಡೆಯುತ್ತವೆ. ಅವುಗಳಲ್ಲಿ ವಿಭಕ್ತಿ (ನಾಮ ಅಥವಾ ಆಖ್ಯಾತ) ಪ್ರತ್ಯಯದಿಂದ ಕೊನೆಗೊಳ್ಳುವ ಶಬ್ದರೂಪವನ್ನು 'ಪದ' ಎಂದೂ (೧.೧೬ ವಿಭಕ್ತ್ಯಂತಮ್ ಪದಂ; ಹೋ.ಅಷ್ಟಾ.೧.೪.೧೪ ಸುಪ್ ತಿಙ್ ಅಂತಂ ಪದಂ). ವರ್ಣಗಳು ಪರಸ್ಪರ ಸನ್ನಿಹಿತವಾಗಿರುವುದನ್ನು 'ಸಂಹಿತಾ' ಎಂದೂ ಕರೆದಿದ್ದಾನೆ (೧.೧೭ ಪರಸ್ಪರ ಸನ್ನಿಕರ್ಷಃ ಸಂಹಿತಾ; ಹೋ.ಅಷ್ಟಾ.೧.೪.೧೦೯ ಪರಃ ಸನ್ನಿಕರ್ಷಃ ಸಂಹಿತಾ).

ಒಟ್ಟಿನಲ್ಲಿ, ನಾಗವರ್ಮ ವಿವರಿಸಿರುವ ಕನ್ನಡದಲ್ಲಿ, ಸ್ವರಗಳು ಉಚ್ಚಾರಣೆಗೆ

ಬೇಕಾಗುವ ಕಾಲಪ್ರಮಾಣದಿಂದ ಮಾತ್ರ ಭಿನ್ನತೆ ಹೊಂದಿರುವುದನ್ನು ಕಾಣುತ್ತೇವೆ, ಉದಾ. [ಅ, ಆ, ಆ೩]. ಹಾಗೆಯೇ, ವ್ಯಂಜನಗಳಲ್ಲಿ ಆಸ್ಯ–ನಾಸಿಕ್ಯ ಎಂಬ ಭೇದವನ್ನು ಮಾತ್ರ ಹೇಳಿದ್ದಾನೆ, ಉದಾ. ಕ : ಙ. ಕರ್ಕಶ : ಮೃದು ಎಂಬ ಭೇದ ಸಹ (ಕ : ಗ) ಕಂಡುಬರುವುದಾದರೂ ನಾಗವರ್ಮ ಅದನ್ನು ಗುರುತಿಸಿಲ್ಲ. ಕಾರಣವೇನೋ ತಿಳಿಯದು. ಹಾಗಾಗಿ, ಹಳೆಗನ್ನಡದ ವರ್ಣಸಮಾಮ್ನಾಯದಲ್ಲಿ ಒಟ್ಟು ೩೫ ಧ್ವನಿಗಳಿವೆ. ಅವುಗಳಲ್ಲಿ ಸ್ವರಗಳು ೧೨, ವ್ಯಂಜನಗಳು ೨೧, ಅನುಸ್ವಾರ ಮತ್ತು ವಿಸರ್ಗ. ಹಾಗಾಗಿ, ಇದು ಕೇವಲ ಮೂರು ಮೂಲಸ್ವರಗಳಿದ್ದ ಪ್ರಾಚೀನ ತಮಿಳಿನ ವ್ಯವಸ್ಥೆಯನ್ನು ಹೋಲುತ್ತದೆ. ವ್ಯಾಕರಣದ ಮುಖ್ಯಭಾಗವಲ್ಲದ ಶಿಕ್ಷಾಸಂಬಂಧಿ ವಿವರಗಳು ಇಲ್ಲಿಲ್ಲ (ಕಾರಣ, ವ್ಯಾಕರಣಂ ನಾಮ ಉತ್ತರಾ ವಿದ್ಯಾ).ನಾಗವರ್ಮನಿಗೆ ಶಿಕ್ಷಾಶಾಸ್ತ್ರವೊಂದು ತಿಳಿದಿರಲೇ ಬೇಕು ಮತ್ತು ಅದನ್ನು ಕನ್ನಡಕ್ಕೆ ಆಧಾರವಾಗಿ ಇಟ್ಟುಕೊಂಡಿರಬೇಕು.ಆದರೆ, ಆ ಶಿಕ್ಷಾ ಗ್ರಂಥ ಯಾವುದೆಂದು ನಮಗೆ ತಿಳಿಯದು.

ಅನುಸ್ವಾರ ಮತ್ತು ವಿಸರ್ಗಗಳ ಬಗ್ಗೆ ನೀಡಿರುವ ವಿವರಣೆ ಬರವಣಿಗೆಗೆ ಸಂಬಂಧಿಸಿದ ವಿಷಯ; ಧ್ವನಿಗೆ ಸಂಬಂಧಿಸಿದ್ದಲ್ಲ ಹಾಗೆಯೇ, ಕಡೆಯಲ್ಲಿ ಹೇಳಿರುವ ಎರಡು ಸಂಜ್ಞೆಗಳನ್ನು ಇಲ್ಲಿ ಹೇಳದಿರಬಹುದಾಗಿತ್ತು.ಅವುಗಳಲ್ಲಿ, ಸಂಹಿತಾ ಎಂಬುವುದನ್ನು ಸಂಧಿ ವಿಧಾನದಲ್ಲಿ ಮತ್ತು ಪದಂ ಎಂಬುದನ್ನು ವಿಭಕ್ತಿ ವಿಧಾನದಲ್ಲಿ ಹೇಳಬಹುದಿತ್ತು.

**೨. ಸಂಧಿ**

ಕನ್ನಡಭಾಷೆಯಲ್ಲಿ ಕೇವಲ ಮೂರು ಬಗೆಯ ಸಂಧಿಕಾರ್ಯಗಳನ್ನು ನಾಗವರ್ಮ ಗುರುತಿಸಿದ್ದಾನೆ. ಅವು ಲೋಪ, ಆಗಮ ಮತ್ತು ಆದೇಶ.

ಲೋಪ: ಸ್ವರವೊಂದರ ನಂತರ ಇನ್ನೊಂದು ಸ್ವರ ಪ್ರಾಪ್ತವಾದರೆ ಮೊದಲಿನ ಸ್ವರ ಲೋಪಿಸುತ್ತದೆ (೨.೨ ಸ್ವರೇ ಸ್ವರಸ್ಯ ಲೋಪಃ). ಲೋಪವೆಂದರೆ ಇಲ್ಲವಾಗುವುದು.ಕನ್ನಡದಲ್ಲಿ ಕಂಡುಬರುವುದು ಪೂರ್ವಸ್ವರಲೋಪವೇ ಹೊರತು ಪರಸ್ವರ ಲೋಪಿಸುವ ಸಂಧಿಕಾರ್ಯವಿಲ್ಲ, ಉದಾ. ಎನ್ನ + ಅರಸನ್ = ಎನ್ನರಸನ್; ಮುನ್ನು + ಇರವಂ = ಮುನ್ನಿರವಂ. ಆದರೆ, ಈಪೂರ್ವಸ್ವರ ಲೋಪವು ಮೊದಲ ಪದದ ಅಂತ್ಯಸ್ವರ [ಉ] ಅಥವಾ [ಎ] ಆಗಿದ್ದಾಗ ಮಾತ್ರ ಸಾಧ್ಯ (೨.೩ ಪ್ರಕೃತೇರ್ ಉದೇತೋಃ), ಉದಾ. ಮಾತು + ಎಲ್ಲಂ = ಮಾತೆಲ್ಲಂ; ನಾಲಿಗೆ ಉಳ್ವನೇ ಬಾಳ್ಗುಂ = ನಾಲಿಗುಳ್ವನೇ ಬಾಳ್ಗುಂ. ಹೀಗೆ ಪೂರ್ವಸ್ವರಲೋಪಿಸುವುದರಿಂದ ಅರ್ಥಕ್ಕೆ ಚ್ಯುತಿ ಉಂಟಾಗುವುದಾದರೆ, ಆಗ ಸಂಧಿಕಾರ್ಯ ಆಗುವುದಿಲ್ಲ (೨.೪ ನ ನಾಮಭಾಗ ವಿಧ್ವಂಸೇ).

ಆಗಮ: ಸ್ವರಗಳೆರಡರಲ್ಲಿ ಮೊದಲಿನದು [ಆ], [ಈ], [ಏ], [ಐ] ಗಳ ಪೈಕಿ ಒಂದಾದರೆ, ಆಗ ಆಸ್ವರಗಳ ಮಧ್ಯೆ [ಯ] ಎಂಬ ವರ್ಣವು ಆಗಮವಾಗಿ ಬರುತ್ತದೆ. ಮೊದಲಿಗಿಲ್ಲದ, ಹೊಸದಾಗಿಬಂದ ವರ್ಣ 'ಆಗಮ' ಎನಿಸುತ್ತದೆ (೨.೫ ಆ ಈ ವರ್ಣೈರ್ಕಾರೈಕಾರೇಭ್ಯೋ ಯಃ), ಉದಾ. ಆ + ಎಡೆ = ಆಯೆಡೆ; ಕವಿ +

ಅರ್ = ಕವಿಯರ್; ನಡೇ + ಎಂದು = ನಡೆಯೆಂದು. ಆಗಮಕ್ಕೆ ನಾಗವರ್ಮ 'ವ್ಯವಧಾಯಕ' ಎಂಬ ಸಂಜ್ಞೆಯನ್ನು ಉಪಯೋಗಿಸಿದ್ದಾನೆ. [ಸ್ವರವೊಂದರೊಡನೆ 'ವರ್ಣ' ಎಂಬುದನ್ನು ಸೇರಿಸಿ ಉಪಯೋಗಿಸಿದಾಗ (ಉದಾ.ಈ–ವರ್ಣ), ಅದು ಅದಕ್ಕೆ ಸವರ್ಣವಾದ ಹ್ರಸ್ವಕ್ಕೂ ಅನ್ವಯಿಸುತ್ತದೆ.ಆದರೆ 'ಕಾರ' ಎಂದು ಸೇರಿಸಿ ಉಪಯೋಗಿಸಿದಾಗ (ಉದಾ.ಏ–ಕಾರ), ಅದು ಕೇವಲ ಆಸ್ವರವನ್ನು ಹೆಸರಿಸುತ್ತದೆ]. ಹ್ರಸ್ವ ಅ–ಕಾರಾಂತ ಪದಕ್ಕೆ ಅವಧಾರಣಾರ್ಥಕ [ಏ] ಪರವಾದರೆ, ಆ ಎರಡು ಸ್ವರಗಳ ನಡುವೆ [ಯ] ಸೇರಿಸಲ್ಪಡುತ್ತದೆ (೨.೬ ಅಕಾರಾಂತಾಚ್ಚಾವಧಾರಣಾರ್ಥ ಏ), ಉದಾ. ಆತನ + ಏ = ಆತನಯೇ. ಆದರೆ, ಮೊದಲ ಸ್ವರವು [ಓ, ಔ, ಉ, ಅಥವಾ ಋ] ಗಳಲ್ಲೊಂದಾಗಿದ್ದರೆ, ಆಗ ಸ್ವರಗಳೆರಡರ ಮಧ್ಯೆ [ವ] ಎಂಬ ಆಗಮ ಬರುತ್ತದೆ.(೨.೭ ವೋ ವೃವರ್ಣೇಭ್ಯಃ), ಉದಾ. ಗೋ + ಇನ = ಗೋವಿನ, ಮನು + ಇನ = ಮನುವಿನ, ಹೋತೃ + ಏ = ಹೋತೃವೇ.

[ಏ] ಅತವಾ [ಓ] ಇಂದ ಕೊನೆಗೊಳ್ಳುವ ನಿಪಾತದ ಮುಂದೆ ಸ್ವರ ಬಂದರೆ ಆಎರಡುಸ್ವರಗಳ ನಡುವೆ ಸಂಧಿಕಾರ್ಯ ಆಗುವುದಿಲ್ಲ (೨.೮ ಏದೋದಂತ ನಿಪಾತಾಃ ಸ್ವರೇ ಪ್ರಕೃತ್ಯಾ), ಉದಾ. ಎಲೇ ಇದಾವುದು; ಅಯ್ಯೋ ಅಕಟ. ಹಾಗೆಯೇ, 'ಸಂದೇಹ' ಅಥವಾ 'ನಿಶ್ಚಯ' ಸೂಚಿಸುವ ಪದ ಪರವಾದಾಗ ಸಂಧಿಯಾಗುವುದಿಲ್ಲ (೨.೯ ವಿಶಂಕಾವಧಾರಣಯೋಃ), ಉದಾ. ಆನೆಯೋ ಅದ್ರಿಯೋ; ಪೊರವನೇ ಆಳ್ವಂ.ಅದೇ ರೀತಿ ಪ್ಲುತಸ್ವರಗಳಿಗೆ ಸ್ವರವೊಂದು ಪರವಾದರೆ ಸಂಧಿಯಾಗುವುದಿಲ್ಲ (೨.೧೦ ಪ್ಲುತಾಶ್ಚ), ಉದಾ.ಎಲೇ ಅಣ್ಣಾ೩ ಇತ್ತ ಬಾ೩; ಕುಕ್ಕೂಕೂ೩ ಎಂದು ಕೋಳಿ ಕೂಗಿತ್ತಾಗಳ್.

ಆದೇಶ: ಸಮಾಸಪದದಲ್ಲಿ ಉತ್ತರಪದಾದಿಯಲ್ಲಿನ ಕರ್ಕಶ ವ್ಯಂಜನಕ್ಕೆ ಮೃದು ವ್ಯಂಜನ ಆದೇಶವಾಗುತ್ತದೆ (೨.೧೧ ವರ್ಗಪ್ರಥಮಾನಾಂ ತೃತೀಯಾ ಸಮಾಸೋತ್ತರಪದಾದೌ), ಉದಾ. ಕೆನ್ + ತಳಿರ್ = ಕೆನ್ದಳಿರ್; ಹಳೆ + ಕನ್ನಡ = ಹಳೆಗನ್ನಡ. ಆದರೆ, ಪೂರ್ವಪದಾಂತ್ಯದಲ್ಲಿ ಆದೇಶದಿಂದಾಗಿ ರೇಫವಾಗಿರುವ [ರ] ಇದ್ದಾಗ, ಉತ್ತರ ಪದಾದಿಯ ಕರ್ಕಶ ವ್ಯಂಜನಕ್ಕೆ ಮೃದು ವ್ಯಂಜನ ಆದೇಶವಾಗುವುದಿಲ್ಲ (೨.೧೨ ನಾದಿಷ್ಟ ರೇಫಾತ್), ಉದಾ. ಮಾರ್ + ತಲೆ = ಮಾರ್ತಲೆ; ಮಾರ್ + ಪಡೆ = ಮಾರ್ಪಡೆ. ಸಮಾಸದಲ್ಲಿ ಉತ್ತರ ಪದದ ಆದಿ ಚ–ವರ್ಗದ ಅಥವಾ ಟ–ವರ್ಗದ ವ್ಯಂಜನ ಆಗಿದ್ದರೆ, ಅದಕ್ಕೆ ಅವುಗಳ ಮೃದುವರ್ಣ ಆದೇಶವಾಗುವುದಿಲ್ಲ (೨.೧೩ ಚ ಟ ವರ್ಗಯೋಶ್ಚ), ಉದಾ. ಕಡು+ಚೆನ್ನಂ = ಕಡುಚೆನ್ನಂ; ಪೊಸ+ಟೊಪ್ಪಿಗೆ = ಪೊಸಟೊಪ್ಪಿಗೆ. ಸಮಾಸದ ಪೂರ್ವಪದಾಂತ್ಯ ಸ್ವರ ಅಥವಾ ಅಂತಸ್ಥವಾಗಿದ್ದು (ಯ ರ ಲ), ಉತ್ತರಪದಾದಿಯಲ್ಲಿ ಪ–ವರ್ಗದ ವ್ಯಂಜನ ಪರವಾದರೆ, ಅದಕ್ಕೆ ಐಚ್ಛಿಕವಾಗಿ [ವ] ಆದೇಶವಾಗುತ್ತದೆ (೨.೧೪ ಸ್ವರ ಯರಲೇಭ್ಯೋ ಬಹುಲಂ ವಃ ಪವರ್ಗಸ್ಯ), ಉದಾ. ಪೊಸ+ಪೆಸರ್ = ಪೊಸವೆಸರ್; ಎಳೆ+ಬಿದಿರ್ = ಎಳೆವಿದಿರ್; ನೀರ್+ಪಾವು = ನೀರ್ವಾವು; ಕಲ್+ಬಾಳೆ = ಕಲ್ವಾಳೆ. ಆದೇಶವಾಗದಿರುವ ಕೆಲವು

ಉದಾಹರಣೆಗಳು : ನಡುಬೇನು, ಪಾಲ್ಪೊಸರ್, ಕೆಮ್ಮುಗಿಲ್. ಪೂರ್ವಪದಾಂತ್ಯ [ಲ] ಅಥವಾ [ಯ] ಹೊರತಾದ ವ್ಯಂಜನವಾಗಿದ್ದರೆ ಉತ್ತರ ಪದಾದಿಯ [ಸ] ಐಚ್ಛಿಕವಾಗಿ [ಚ] ಆಗುತ್ತದೆ (೨.೧೫ ವ್ಯಂಜನಾದ್ ಅಲಯಾತ್ ಸಸ್ಯ ಚಃ), ಉದಾ. ನುಣ್+ಸರಂ = ನುಣ್ಚರಂ; ಇನ್+ಸರಂ = ಇನ್ಚರಂ. ಕೆಲವೊಮ್ಮೆ ಅಂತಹ ಸ-ಕಾರಕ್ಕೆ [ಚ] ಆದೇಶವಾಗದೇ [ಜ] ಆದೇಶವಾಗುವುದು ಕಂಡುಬರುತ್ತದೆ (೨.೧೬ ಕ್ವಚಿಜ್ಜತ್ವಂ), ಉದಾ. ಮುನ್+ಸುಲಿಗೆ = ಮುಂಜುಲಿಗೆ; ಕಣ್+ಸೊಡರ್ = ಕಣ್ಜೊಡರ್. ಅದೇ ಪರಿಸರದಲ್ಲಿ ಸಂಖ್ಯಾಪದದಲ್ಲಿನ ಸ-ಕಾರಕ್ಕೆ [ಛ] ಆದೇಶವಾಗುತ್ತದೆ (೨.೧೭ ಸಂಖ್ಯಾಯಾಂ ಛತ್ವಂ), ಉದಾ. ಮೂವತ್ತಿರ್+ಸಾಸಿರಂ = ಮೂವತ್ತಿರ್ಛಾಸಿರಂ; ಎಣ್+ಸಾಸಿರಂ = ಎಣ್ಛಾಸಿರಂ. ಹ್ರಸ್ವಪೂರ್ವದಲ್ಲಿರುವ [ನ, ಣ, ಲ, ಯ, ಳ] ಗಳು ಸ್ವರವೊಂದು ಪರವಾದರೆ ದ್ವಿತ್ವವಾಗುತ್ತವೆ (೨.೧೮ ನಣಲಯಳಾ ದ್ವಿಃ ಸ್ವರೇ ಹ್ರಸ್ವಪೂರ್ವಃ; ಹೋ. ಅಷ್ಟಾ.೮.೩.೩೨ ಙಮೋ ಹ್ರಸ್ವಾದ್ ಅಚಿ ಙಮುಣ್ ನಿತ್ಯಂ), ಉದಾ. ಪೊನ್+ಅಲ್ಲಿ = ಪೊನ್ನಲ್ಲಿ; ಮಣ್+ಎಲ್ಲಂ = ಮಣ್ಣೆಲ್ಲಂ; ಕಯ್+ಅಲ್ಲಿ = ಕಯ್ಯಲ್ಲಿ. ಆದರೆ, ಮೊದಲಪದ ದ್ವ್ಯಕ್ಷರ ಅಥವಾ ಅನೇಕಾಕ್ಷರದ್ದಾದರೆ ಅಂತ್ಯವ್ಯಂಜನ ದ್ವಿತ್ವವಾಗುವುದಿಲ್ಲ (೨.೧೯ ನಾನೇಕಾಕ್ಷರ ಪದೇ), ಉದಾ. ಪವನ್+ಉಂಟು = ಪವನುಂಟು; ಕೊನರ್+ಎಲ್ಲಂ = ಕೊನರೆಲ್ಲಂ. ಹಾಗೆಯೇ, ಅವ್ಯಯದಲ್ಲಿರುವ ಈವ್ಯಂಜನಗಳು ದ್ವಿತ್ವವನ್ನು ಪಡೆಯುವುದಿಲ್ಲ (೨.೨೦ ಅವ್ಯಯೇಷು), ಉದಾ. ಸ್ಮರನವೋಲೀತಂ.

ಒಟ್ಟಿನಲ್ಲಿ, ಕನ್ನಡದಲ್ಲಿನ ಮೂರು ಸಂಧಿಕಾರ್ಯಗಳಲ್ಲಿ ಲೋಪ ನಿಶ್ಚಯವಾಗಿ ದ್ರಾವಿಡಭಾಷೆಯ ಸಂಧಿನಿಯಮ.ಅದು ಪ್ರಾಕೃತಭಾಷೆಯಲ್ಲೂ ಪ್ರಾಯಶಃ ದ್ರಾವಿಡ ಭಾಷೆಗಳ ಸಂಪರ್ಕದಿಂದಾಗಿ ಕಂಡುಬರುತ್ತದೆ. ಆಗಮ ಮತ್ತು ಆದೇಶಗಳು ಇತರ ಭಾಷೆಗಳಲ್ಲೂ ಕಾಣಸಿಗುತ್ತವೆ. ಲೋಪ ಮತ್ತು ಆಗಮ ಸ್ವರಗಳಿಗೆ ಸಂಬಂಧಿಸಿದ ಸಂಧಿಕಾರ್ಯಗಳು; ಆದೇಶ ಕೇವಲ ವ್ಯಂಜನಕ್ಕೆ ಸಂಬಂಧಿಸಿದುದು. ಪ್ರಕೃತಿಭಾವ (ಅಂದರೆ, ಸಂಧಿಯಾಗದಿರುವಿಕೆ) ಮತ್ತು ದ್ವಿರ್ಭಾವ (ಅಂದರೆ, ದ್ವಿತ್ವವಾಗುವಿಕೆ) ದ್ರಾವಿಡ ಹಾಗೂ ಆರ್ಯಭಾಷೆಗಳಲ್ಲಿ ಕಂಡುಬರುತ್ತವೆ. ಲೋಪವು ಕೇವಲ ಪೂರ್ವಸ್ವರಕ್ಕೇ.ಆಗಮದಲ್ಲಿ ಕೇವಲ [ಯ] ಅಥವಾ [ವ] ಸೇರುತ್ತದೆ.ಆದೇಶದಲ್ಲಿ ಕರ್ಕಶ ವ್ಯಂಜನ ಮೃದು ಆಗುತ್ತದೆ.ಕಂಠ್ಯ ಮತ್ತು ದಂತ್ಯ ವ್ಯಂಜನಗಳು ನಿತ್ಯವಾಗಿ ಮೃದುವಾಗುತ್ತವೆ. ತಾಲವ್ಯ ಮತ್ತು ಮೂರ್ಧನ್ಯ ವ್ಯಂಜನಗಳಲ್ಲಿ ಇದು ಕಂಡುಬರುವುದಿಲ್ಲ; ಓಷ್ಠ್ಯದಲ್ಲಿ ಐಚ್ಛಿಕ.ಇಲ್ಲಿನ ಸಂಧಿಕಾರ್ಯಗಳೆಲ್ಲಾ ಪರಿಸರ ಸಾಪೇಕ್ಷವಾದದ್ದು. "ಅಂತಹ ಸಂಧಿಕಾರ್ಯಗಳಿರುವ ವ್ಯಾಕರಣ ಪರಿಸರಾಪೇಕ್ಷೆಯಿಲ್ಲದ ಸಂಧಿಕಾರ್ಯಗಳಿರುವ ವ್ಯಾಕರಣಗಳಿಗಿಂತ ಉತ್ತಮವಾದದ್ದು", ಎಂದು ಅಮೇರಿಕದ ಪ್ರಸಿದ್ಧ ಭಾಷಾವಿಜ್ಞಾನಿ ನೋಮ್ ಛೋಮ್ಸ್ಕಿ ಅಭಿಪ್ರಾಯಪಟ್ಟಿದ್ದಾರೆ.

**೩. ವಿಭಕ್ತಿ**

ಈವಿಧಾನದ ೩೭ ಸೂತ್ರಗಳಲ್ಲಿ ವಿಭಕ್ತಿ ಪ್ರತ್ಯಯಗಳನ್ನು ನಾಗವರ್ಮ

ವಿವೇಚಿಸಿದ್ದಾನೆ. ವಿಭಕ್ತಿ ಪ್ರತ್ಯಯದಿಂದ ಕೊನೆಗೊಳ್ಳುವ ಶಬ್ದರೂಪವನ್ನು 'ಪದ' ಎಂದಿದ್ದಾನೆ (೧.೧೬ ವಿಭಕ್ತ್ಯಂತಂ ಪದಂ).ಸೂತ್ರದ ವೃತ್ತಿಯಲ್ಲಿ ನಾಮ ಮತ್ತು ಆಖ್ಯಾತ ಎರಡಕ್ಕೂ ಸೇರುವ ಪ್ರತ್ಯಯವನ್ನು ವಿಭಕ್ತಿ ಎಂದಿದ್ದಾನೆ. ವಿಭಕ್ತಿ ಸೇರುವ ಭಾಗಕ್ಕೆ ಇಲ್ಲಿ 'ಲಿಂಗ' ಎಂಬ ಸಂಜ್ಞೆಯಿದೆ (೩.೧ ಅರ್ಥವದ್ ಅಕ್ರಿಯಾವಾಚಿ ಕೃದಂತಂ ಚ ಲಿಂಗಂ; ಹೋ.ಕಾ.೨.೧ ಧಾತುವಿಭಕ್ತಿವರ್ಜಂ ಅರ್ಥವದ್ ಲಿಂಗಂ).ಇದನ್ನು ಪಾಣಿನಿ 'ಪ್ರಾತಿಪದಿಕ' ಎಂದಿದ್ದಾನೆ. "ಅರ್ಥದಿಂದಕೂಡಿದ್ದು ಕ್ರಿಯಾಶಬ್ದವಲ್ಲದ ಕೃತ್ ಪ್ರತ್ಯಯಾಂತ ಶಬ್ದರೂಪವನ್ನು 'ಲಿಂಗಂ' ಎಂದಿದ್ದಾನೆ" ನಾಗವರ್ಮ.ಪ್ರಾತಿಪದಿಕದಲ್ಲಿ ಪಾಣಿನಿ ತದ್ಧಿತಾಂತರೂಪ ಹಾಗು ಸಮಾಸಪದವನ್ನೂ ಸೇರಿಸಿರುವನಾದರೆ, ನಾಗವರ್ಮ ಅವುಗಳನ್ನು ಲೆಕ್ಕಿಸಿಲ್ಲ. ಲಿಂಗಕ್ಕೆ ವಿಭಕ್ತಿ ಸೇರಿಸಲಾಗುತ್ತದೆ (೩.೨ ತತೋ ವಿಭಕ್ತಯಃ; ಹೋ.ಕಾ.೨.೨ ತಸ್ಮಾತ್ ಪರಾಃ ವಿಭಕ್ತಯಃ. ನಾಮಪದವೆಂದರೆ, ಲಿಂಗ + ನಾಮವಿಭಕ್ತಿ ಎಂದು ಪದಾಂಶಗಳ ಕ್ರಮವನ್ನು ಹೇಳಿದಂತಾಯಿತು. ವಿಭಕ್ತಿಗಳು ಏಳು (ಸೂತ್ರ ೩.೩ ರ ವೃತ್ತಿ : ಸಪ್ತ ವಿಭಕ್ತಯಃ). ಅವು ಕ್ರಮವಾಗಿ [ಮ್], [ಅಮ್], [ಇಮ್], [ಕಯ್], [ಅರ್], [ಅದ್] ಮತ್ತು [ಓಳ್] (೩.೩ ಮಮಿಮ್ ಕಯರದೋಳ್).

ದ್ವಿವಚನ ಮತ್ತು ಬಹುವಚನ ಸೂಚಿಸಲು [ಗಳ್] ಎಂಬ ಪ್ರತ್ಯಯ ವಿಭಕ್ತಿಪ್ರತ್ಯಯಕ್ಕಿಂತ ಮೊದಲು ಲಿಂಗಕ್ಕೆ ಸೇರಿಸಲ್ಪಡುತ್ತದೆ (೩.೪ ದ್ವಿತ್ವ ಬಹುತ್ವಯೋರ್ ಗಳ್ ಆದೌ), ಉದಾ. ಕಣ್ಗಳ್. ಸರ್ವನಾಮ ಹಾಗೂ ನಾಮವಿಶೇಷಣಕ್ಕೆ [ಗಳ್] ಬದಲು [ಅವು] ಸೇರುತ್ತದೆ (೩.೫ ಸರ್ವನಾಮ ಗುಣವಚನಾನಾಂ ಅವು ತದಂತೇ), ಉದಾ.ಎಲ್ಲವು, ಇನಿಯವು. (ಸರ್ವನಾಮಗಳು : ಅದು, ಇದು, ಉದು, ಆವುದು, ಎಲ್ಲದು, ಪೆರತು, ಪೆರದು, ಏನ್, ಏತೆ; ಗುಣವಾಚಕಗಳು : ಒಳ್ಳಿತು, ಮೆಲ್ಲಿತು, ಬೆಟ್ಟಿತು, ಇತ್ಯಾದಿ). ಕೆಲವೊಮ್ಮೆ, ವಿಭಕ್ತಿ ಪ್ರತ್ಯಯಕ್ಕೂ ಮೊದಲು ಸ್ತ್ರೀ ಮತ್ತು ಪುರುಷ ಎಂಬುದನ್ನು ಸೂಚಿಸಲು [ಇರ್, ಅರ್, ದಿರ್, ವಿರ್] ಎಂಬ ಪ್ರತ್ಯಯಗಳು ಸೇರುತ್ತವೆ (೩.೬ ಸ್ತ್ರೀಪುರುಷವಾಚಿಷು ಇರ್ ಅರ್ ದಿರ್ ವಿರ್ ಕ್ವಚಿತ್), ಉದಾ.ಪೆಣ್ಡಿರ್, ತಮ್ಮಂದಿರ್, ತಂದೆವಿರ್. [ಕಳ್] ಪ್ರತ್ಯಯವೂ ಅದೇ ಅರ್ಥದಲ್ಲಿ ಮತ್ತೆ ಸೇರಿಸಲ್ಪಡುತ್ತದೆ (೩.೭ ಸ್ವಾರ್ಥೇತಃ ಕಳ್), ಉದಾ.ಪಂಡಿತರ್ಕಳ್.ಕೆಲವೊಮ್ಮೆ, ಕೇವಲ [ಕಳ್] ಸೇರುತ್ತದೆ, ಉದಾ. ಮಕ್ಕಳ್. ಸಂಖ್ಯಾವಾಚಿ ಶಬ್ದವಾದರೆ ವಿಭಕ್ತಿ ಪ್ರತ್ಯಯಕ್ಕೆ ಮೊದಲು [ವ] ಆಗಮ ಬರುತ್ತದೆ (೩.೮ ಸಂಖ್ಯಾಯಾಂ ವಃ), ಉದಾ.ಓರ್ವರ್ಳ್, ಮೂವರ್.

ಪ್ರಥಮಾವಿಭಕ್ತಿ ಏಕವಚನಪ್ರತ್ಯಯವು ಅ-ಕಾರಾಂತ ಲಿಂಗಕ್ಕೆ ಸೇರಿದಾಗ ಅದು ಅನುಸ್ವಾರ ಆಗುತ್ತದೆ (೩.೯ ಅತೋ'ನುಸ್ವಾರಃ ಪ್ರಥಮೈಕವಚನಸ್ಯ), ಉದಾ.ಮರಂ: ಇತರೆಡೆಗಳಲ್ಲಿ ಅದು ಲೋಪಿಸುತ್ತದೆ (೩.೧೦ ಅನ್ಯಸ್ಮಾಲ್ಲೋಪಃ), ಉದಾ. ಹರಿ, ವಧು, ಕೆರೆ. [ಅವು] ಪ್ರತ್ಯಯವನ್ನು ಅಪೇಕ್ಷಿಸುವ ನಾಮವಿಶೇಷಣವು ಅಂತ್ಯಾಕ್ಷರವನ್ನು ಕಳೆದುಕೊಳ್ಳುತ್ತದೆ (೩.೧೧ ಗುಣೋಕ್ತೇರ್ ಅವಾವ್ ಉಪಾಂತ್ಯಾವಧೇಃ), ಉದಾ.ಕರಿಯವು, ದೊಡ್ಡಿಯವು. ಸರ್ವನಾಮದಲ್ಲೂ ಅದೇ ರೀತಿ ಅಂತ್ಯಾಕ್ಷರವಲ್ಲದೇ

ಪ್ರತ್ಯಯಾದಿ ಅ-ಕಾರವೂ ಸಹ ಲೋಪಿಸುತ್ತದೆ ಉದಾ. ಅವು, ಎಲ್ಲವು.ಅ-ಕಾರಾಂತ ಲಿಂಗಕ್ಕೆ ಬಹುವಚನವಾಚಿ [ಕಳ್] ಸೇರಿಸುವ ಮುಂಚೆ ಐಚ್ಛಿಕವಾಗಿ [ನ] ಸೇರಬಹುದು (೩.೧೩ ಅದಂತಾ ನಾಗಮಃ ಪೂರ್ವಸ್ಮಿನ್ ಗಳಃ), ಉದಾ.ಜನಂಗಳ್, ಮರಂಗಳ್/ ಮರಗಳ್. ಪುರುಷವಾಚಿ ಲಿಂಗಕ್ಕೆ ಸ್ವರಾದಿ ವಿಭಕ್ತಿಪ್ರತ್ಯಯದ ಮುಂಚೆ [ನ] ಸೇರುತ್ತದೆ (೩.೧೪ ಸ್ವರಾದೌ ನಾಗಮಃ ಪುಂಸಿ), ಉದಾ. ಅರಸನಂ ಕಂಡರ್, ಕೆಳೆಯನ ಬಲದೋಳ್. ಅದೇ ಪರಿಸರದಲ್ಲಿ ಲಿಂಗಕ್ಕೆ ನಪುಂಸಕವಾಚಿ ಆದಾಗ [ದ] ಎಂಬ ಆಗಮ ಬರುತ್ತದೆ (೩.೧೫ ನಪುಂಸಕಲಿಂಗೇ ದಃ), ಉದಾ. ಮನದಿಂ ಬೇಗಂ.ಪ್ರಥಮಾವಿಭಕ್ತಿ ಪ್ರತ್ಯಯವೇ ಸಂಬೋಧನೆಯಲ್ಲೂ ಸೇರಿ, ನಂತರ ಲೋಪಿಸುತ್ತದೆ (೩.೩೪ ಆಮಂತ್ರಣೇ ಪ್ರಥಮೈಕವಚನಸ್ಯ ಲೋಪಃ), ಉದಾ.ಎಲೇ ಅಣ್ಣಾ; ಅಥವಾ ಅದಕ್ಕೆ [ಏ] ಆದೇಶವಾಗುತ್ತದೆ (೩.೩೫ ಏತ್ವಂ ವಾ ತದಂತಸ್ಯ), ಉದಾ.ಮಾಲೆ ಮಲ್ಲಿಗೆಯೇ.ಇದರ ದ್ವಿವಚನ ಮತ್ತು ಬಹುವಚನದಲ್ಲಿ [ಗಳ್] ಸ್ಥಾನದಲ್ಲಿ [ಇರ್] ಬರುತ್ತದೆ (೩.೩೬ ಇರಾಶ್ಲೇಷೋ ಗಳಃ), ಉದಾ.ಮರಂಗಳಿರ, ನೆಂಟರ್ಗಳಿರ.ನಯಸೇನನ ಪ್ರಕಾರ ಸಂಬೋಧನೆಯ ರೂಪಗಳೆಲ್ಲಾ ದೀರ್ಘಾಂತ್ಯ ಆಗುತ್ತವೆ (೩.೩೭ ದೀರ್ಘೋಕ್ತಿರ್ ನಯಸೇನಸ್ಯ), ಉದಾ. ವಿಧೂ, ಕಾಂತೇ.

ದ್ವಿತೀಯಾ ಏಕವಚನ ಪ್ರತ್ಯಯವು ನಪುಂಸಕದಲ್ಲಿ ಐಚ್ಛಿಕವಾಗಿ [ಮ] ಅಥವಾ [ನ] ಆಗಿರುತ್ತದೆ (೩.೧೬ ವಿಭಾಷಾಯಾಂ ಅಮೋ ಮನೌ), ಉದಾ.ಕುಲಮಂ, ನೆಲಮಂ.ಸಂಸ್ಕೃತ ಶಬ್ದಗಳಲ್ಲಿ ಕೇವಲ [ಮ] ಪ್ರತ್ಯಯ ಕಂಡುಬರುತ್ತದೆ.ಪದಾಂತ್ಯದ ಅನುಸ್ವಾರವು ಸ್ವರ ಪರವಾದರೆ [ಮ], ಅಥವಾ [ನ], ಕೆಲವೊಮ್ಮೆ, [ವ] ಕೂಡ ಆಗುತ್ತದೆ (೩.೧೭ ಅನುಸ್ವಾರಸ್ಯ ಚ), ಉದಾ.ಇವಂ ಅಧಿಕಬಲಂ/ ಇವನಧಿಕಬಲಮ್.ದ್ವಿತೀಯಾ ವಿಭಕ್ತಿಯ ಅಂತ್ಯ ಸ್ವರವು ಇನ್ನೊಂದು ಸ್ವರ ಪರವಾದರೆ ಐಚ್ಛಿಕವಾಗಿ ದೀರ್ಘವಾಗುತ್ತದೆ (೩.೩೨ ದ್ವಿತೀಯಾಂತಸ್ಯ ವಾ ಸ್ವರೇ), ಉದಾ.ಕಲ್ಲಾನೇರಿದಂ, ಬಿಲ್ಲಾನೇರಿಸಿದಂ.

ಉ-ಕಾರಾಂತ ಶಬ್ದಗಳಿಗೆ ತೃತೀಯಾ ವಿಭಕ್ತಿ ಪ್ರತ್ಯಯ ಸೇರುವಾಗ ಅದರ ಹಿಂದೆ [ಇನ್] ಎಂಬ ಆಗಮ ಬರುತ್ತದೆ (೩೧೮ ಉಕಾರಾಂತಾತ್ ತೃತೀಯಾದಿಷು ಇನಾಗಮೋ ಭವತಿ), ಉದಾ.ಗುರುವಿನಿಂ ನೀತಿಜ್ಞಂ, ಮನುವಿನಿಮ್ ಮಿಗಿಲ್, ಗುರುವ ಮತಂ.ತೃತೀಯಾ ವಿಭಕ್ತಿ ಪ್ರತ್ಯಯ ಸೇರಿದಾಗ ಸಂಖ್ಯಾವಾಚಿ ಶಬ್ದಗಳ, ಸರ್ವನಾಮಗಳ ಮತ್ತು ನಾಮವಿಶೇಷಣಗಳ ಅಂತ್ಯ [ಉ] ಸ್ಥಾನದಲ್ಲಿ [ಅರ್] ಆದೇಶವಾಗುತ್ತದೆ (೩.೧೯ ಅರುಕಾರಸ್ಯ ಸಂಖ್ಯಾ ಸರ್ವನಾಮ ಗುಣವಚನೇಷು), ಉದಾ. ಒಂದರಿಮ್, ಅದರಿಂ, ಒಳ್ಳಿದರಿಮ್. ದಿಗ್ವಾಚಿ ಶಬ್ದಗಳಿಗೆ, ಅದೇ ಪರಿಸರದಲ್ಲಿ [ಅಣ್] ಆದೇಶವಾಗುತ್ತದೆ (೩.೨೦ ದಿಗ್ವಾಚಿಭ್ಯೋ'ಣ್), ಉದಾ.ಮೂಡಣಿಂ, ತೆಂಕಣ ದೆಸೆಯಿಂ.ಅ-ಕಾರಾಂತ ದಿಗ್ವಾಚಿ ಶಬ್ದಗಳಿಗೆ ಪ್ರಥಮಾ ಮತ್ತು ತೃತೀಯಾವಿಭಕ್ತಿಯಲ್ಲಿ ಐಚ್ಛಿಕವಾಗಿ [ಅಲ್] ಸೇರುತ್ತದೆ (೩.೨೧ ವಾಲತಃ ಪ್ರಥಮಾದ್ವಿತೀಯಯೋಃ), ಉದಾ.ಮೂಡಲ್, ಮೂಡ.ಆದರೆ, ಸಪ್ತಮೀ ವಿಭಕ್ತಿ ಪ್ರತ್ಯಯ ಬಂದಾಗ, ದಿಗ್ವಾಚಿ

ಶಬ್ದಗಳಿಗೆ ಐಚ್ಛಿಕವಾಗಿ [ಅಲ್] ಸೇರುತ್ತದೆ (೩.೨೨ ಸಪ್ತಮ್ಯಾಂ ಚ), ಉದಾ.ತೆಂಕಲಿರ್ದ್ದಂ. ದಿಗ್ವಾಚಿಶಬ್ದಗಳ [ಉ] ಸಪ್ತಮೀ ವಿಭಕ್ತಿಯಲ್ಲಿ [ಎ] ಆಗುತ್ತದೆ (೩.೨೩ ಉತ ಏತ್), ಉದಾ. ಮೇಗಿರ್ದ್ದುದು, ಕೆಳಗೆ ಪೋದಂ, ಪೊರಗೆ ಕತ್ತಲೆ. ತೃತೀಯಾ ವಿಭಕ್ತ್ಯಂತ ಪದಗಳಲ್ಲಿ ಪ್ರತ್ಯಯಕ್ಕೆ [ದಮ್] ಆದೇಶವಾಗುತ್ತದೆ (೩.೨೪ ದಮ್ ತೃತೀಯಾಯಾಃ), ಉದಾ.ದಾನದಿಂದಂ; [ಎ] ಕೂಡ ಆಗಬಹುದು (೩.೨೫ ಎದಂತತಾ ಚ), ಉದಾ. ಇದರಿಂದೆ.

ಅ–ಕಾರಾಂತ ಶಬ್ದಗಳಲ್ಲಿ ಚತುರ್ಥೀ ವಿಭಕ್ತಿ ಪ್ರತ್ಯಯ ಪುಲ್ಲಿಂಗದಲ್ಲಿ ಅನುಸ್ವಾರದಿಂದ ಕೂಡಿದ ಮೃದುವರ್ಣ ಅಗುತ್ತದೆ (೩.೨೬ ಅಕಾರಾಂತಾಚ್ಚತುರ್ಥ್ಯಾಃ ತೃತೀಯೋ'ನುಸ್ವಾರಪೂರ್ವಃ ಪುಂಸಿ), ಉದಾ.ಮಗಂಗೆ; ನಪುಂಸಕದಲ್ಲಿ ಅದು ಐಚ್ಛಿಕವಾಗಿ ದ್ವಿತ್ವವಾಗುತ್ತದೆ (೩.೨೭ ವಾ ನಪುಂಸಕಾದ್ ದ್ವಿತ್ವಂ), ಉದಾ.ಕುಲಕ್ಕೆ/ ಕುಲಕೆ. [ಅ] ಹೊರತು ಇತರ ಸ್ವರಾಂತ ಶಬ್ದಗಳಿಗೆ ಚತುರ್ಥೀ ವಿಭಕ್ತಿಗೆ ಬದಲು ತೃತೀಯಾ ವಿಭಕ್ತಿ ಸೇರುತ್ತದೆ (೩.೨೮ ಶೇಷಾತ್ ತೃತೀಯತ್ವಂ), ಉದಾ. ಊರ್ಗೆ.ಸರ್ವನಾಮಗಳ ಚತುರ್ಥೀ ವಿಭಕ್ತಿ ಪ್ರತ್ಯಯ ಐಚ್ಛಿಕವಾಗಿ ದ್ವಿತ್ವವಾಗುತ್ತದೆ (೩.೨೯ ಸರ್ವನಾಮ್ನೋ'ಲಿಂಗಾತ್ ಕೋ ವಾ), ಉದಾ.ಅದಕ್ಕೆ/ಅದಕೆ.

ಪಂಚಮೀ ವಿಭಕ್ತಿ ಪ್ರತ್ಯಯ [ಅತ್ತಣಿಮ್] (೩.೩೦ ಅತ್ತಣಿಂ ತ್ವನುಸಂಧೇಯಃ ಪಂಚಮ್ಯಾಃ), ಉದಾ.ಊರತ್ತಣಿಮ್ ಬಂದಂ, ಅವನತ್ತಣಿಂ ಭಯಂ.ಆರನೆಯ ವಿಭಕ್ತಿ ಪ್ರತ್ಯಯ ಇಷ್ಟಬಂದಂತೆ ದೀರ್ಘವಾಗುತ್ತದೆ (೩.೩೧ ದೀರ್ಘಾದೇಶಃ ಷಷ್ಠ್ಯಾ ಯಥೇಷ್ಟಂ), ಉದಾ.ನರೇಂದ್ರನ ಪರಿಜನಂ.ಏಳನೆಯ ವಿಭಕ್ತಿ ಪ್ರತ್ಯಯವು ಐಚ್ಛಿಕವಾಗಿ [ಅಲ್ಲಿ] (೩.೩೩ ಸಪ್ತಮ್ಯಾಂ ಅಲ್ಲಿ ವಾ), ಉದಾ.ಮನದಲ್ಲಿ/ಮನದೋಳ್.ಇಲ್ಲಿ ಒಂದು ಆಶ್ಚರ್ಯಕರ ವಿಷಯವೆಂದರೆ ನಂತರದ ವ್ಯಾಕರಣಗಳೆಲ್ಲಾ ಏಳು ವಿಭಕ್ತಿಯನ್ನು ಲೆಕ್ಕಿಸುತ್ತವೆ. ಆದರೆ, ಮೈತ್ರಾಯಣೀ ಸಂಹಿತೆಯಲ್ಲಿ ವಿಭಕ್ತಿ ಪ್ರತ್ಯಯಗಳು ಆರು ಎಂದಿದೆ (೧.೭.೩ ತಸ್ಮಾದ್ ಷಡ್ ವಿಭಕ್ತಯಃ).ಆರನೆಯ ವಿಭಕ್ತಿ ಪ್ರತ್ಯಯ ಯಾವುದೇ ಕಾರಕವನ್ನು ಸೂಚಿಸುವುದಿಲ್ಲವಾಗಿ ಅದನ್ನು ಅಲ್ಲಿ ಲೆಕ್ಕಿಸಲಿಲ್ಲ ಎನಿಸುತ್ತದೆ.

**೪. ಕಾರಕ**

ವಿಭಕ್ತಿ ಪ್ರತ್ಯಯಗಳನ್ನು ಹೇಳಿದಮೇಲೆ ನಾಗವರ್ಮನು ಕಾರಕಗಳನ್ನು, ಅಂದರೆ, ವಾಕ್ಯಗಳಲ್ಲಿ ನಾಮಪದಗಳು ಕ್ರಿಯೆಯೊಡನೆ ಹೊಂದಿರುವ ಅರ್ಥಸೂಚಕ ಸಂಬಂಧಗಳನ್ನು ವಿವರಿಸಿದ್ದಾನೆ. ಅವನು ಅಂತಹ ಏಳು ಕಾರಕ ಸಂಬಂಧಗಳನ್ನು ಗುರುತಿಸಿದಂತೆ ಕಾಣುತ್ತದೆ (ಸೂತ್ರ ೪.೧೨ರ ಮೇಲಿನ ವೃತ್ತಿ : ಕರ್ತೃ ಕರ್ಮ ಕರಣ ಸಂಪ್ರದಾನ ಅಪಾದಾನ ಸ್ವಾಮ್ಯಧಿಕರಣಾಖ್ಯಂ ಕಾರಕಂ ಯಥಾಕ್ರಮಮ್ ನಿರೂಪ್ಯತೇ). ಅವು : ಕರ್ತೃ, ಕರ್ಮ, ಕರಣ, ಸಂಪ್ರದಾನ, ಅಪಾದಾನ, ಸ್ವಾಮಿ ಮತ್ತು ಅಧಿಕರಣ. 'ಹೇತು' ಪ್ರತ್ಯೇಕವಾದೊಂದು ಕಾರಕವಲ್ಲ; ಅದೊಂದು ಕರ್ತೃವಿನ ಬಗೆಯಷ್ಟೇ. ಪಾಣಿನಿ ಸಂಸ್ಕೃತಕ್ಕೆ ಕೇವಲ ಆರು ಕಾರಕಗಳನ್ನು ಗ್ರಹಿಸಿದ್ದಾನೆ (ಕರ್ತೃ ಕರ್ಮ ಚ ಕರಣಂ ಸಂಪ್ರದಾನಂ ತಥೈವ ಚ / ಅಪಾದಾನಾಧಿಕರಣೇ ಕಾರಕಾಣಿ ಷಡೀರಿತಾಃ

). ಕನ್ನಡಕ್ಕೂ ಅವೇ ಆರು ಕಾರಕಗಳು ಸಾಕು.ಕಾರಣ, ಷಷ್ಠೀ ವಿಭಕ್ತಿ ಪ್ರತ್ಯಯವು ವಾಕ್ಯದಲ್ಲಿ ನಾಮಪದಗಳೆರಡರ ಸಂಬಂಧವನ್ನು ಸೂಚಿಸುತ್ತದೆ, ಇತರ ಕಾರಕಗಳಂತೆ ನಾಮಪದ ಮತ್ತು ಕ್ರಿಯೆಯ ಮಧ್ಯದ ಸಂಬಂಧವನ್ನಲ್ಲ. ಈಕಾರಕಗಳು ವಿಭಕ್ತಿ ಪ್ರತ್ಯಯಗಳಿಂದ ಸೂಚಿಸಲ್ಪಡುತ್ತವೆ.

ಪ್ರಥಮಾ ವಿಭಕ್ತಿ ಪ್ರತ್ಯಯವು ಲಿಂಗ, ಗುಣ, ಹಾಗೂ ಸಂಖ್ಯೆಯನ್ನು ಮಾತ್ರ ಸೂಚಿಸುತ್ತದೆ (೪.೨ ಲಿಂಗಾರ್ಥ ವಚನ ಮಾತ್ರೇ ಪ್ರಥಮಾ; ಹೋ. ಕಾ.೪.೧೭ ಪ್ರಥಮಾವಿಭಕ್ತಿಃ ಲಿಂಗಾರ್ಥವಚನೇ), ಉದಾ.ನೃಪಂ, ಜಲಂ, ಉದ್ದಂ, ಒಂದನುಂ.ಅದು ಸಂಬೋಧನೆಯನ್ನೂ ಸೂಚಿಸುತ್ತದೆ (೪.೩ ಸಂಬೋಧನೇ ಚ), ಆದರೆ, ಆಗ ಪ್ರತ್ಯಯವು ಸೇರಿ, ನಂತರ ಲೋಪಿಸುತ್ತದೆ (೩.೩೪ ಆಮಂತ್ರಣೇ ಪ್ರಥಮೈಕವಚನಸ್ಯ ಲೋಪಃ), ಉದಾ.ನೃಪೇಂದ್ರ, ಕೆಲವೊಮ್ಮೆ, ಪ್ರಥಮಾವಿಭಕ್ತಿಯ ಸ್ಥಾನದಲ್ಲಿ ಷಷ್ಠೀ ಬರುತ್ತದೆ (೪.೨೦ ಪ್ರಥಮಾರ್ಥೇ ಷಷ್ಠೀ), ಉದಾ. ನೀಂ ಬರೆ ಮುರಮಥನ.

ಕ್ರಿಯೆಯು ಯಾವುದನ್ನು ಸಾಧಿಸುತ್ತದೆಯೋ ಅದನ್ನು 'ಕರ್ಮ' ಎನ್ನುತ್ತಾರೆ (ವೃತ್ತಿ: ಯತ್ ಕ್ರಿಯತೇ ತತ್ ಕರ್ಮ). ಅದು ಐದು ಬಗೆಯಾಗಿದೆ : ನಿವರ್ತ್ಯಂ, ಕಾರ್ಯಂ, ಪ್ರಾಪ್ಯಂ, ವೈಶೇಷಿಕಂ, ಮತ್ತು ವಿಷಯಭೂತಂ. ಕರ್ಮ ಕಾರಕವು ದ್ವಿತೀಯಾ ವಿಭಕ್ತಿಯಿಂದ ಸೂಚಿಸಲ್ಪಡುತ್ತದೆ (೪.೪ ದ್ವಿತೀಯಾ ಕರ್ಮಣಿ; ಹೋ.ಅಷ್ಟಾ.೨.೩.೨ ಕರ್ಮಣಿ ದ್ವಿತೀಯಾ), ಉದಾ. ಕ್ರಮವಾಗಿ, (ನಿವರ್ತ್ಯಂ: ಮನೆಯಂ ಮಾಡಿದಂ, ಕಾರ್ಯಂ: ಪಳುಪಂ ಕಡಿದಂ, ಪ್ರಾಪ್ಯಂ: ಊರನ್ ಐದಿದಂ, ವೈಶೇಷಿಕಂ: ಪಟ್ಟಣಂ ಐದಿದಂ, ವಿಷಯಭೂತಂ: ನೇಸರಂ ನೋಡಿದಂ. ಕರ್ಮವು ಮತ್ತೆ ಈಪ್ಸಿತ 'ಕರ್ತೃವಿಗೆ ಇಷ್ಟವಾದದ್ದು' ಮತ್ತು ಅನೀಪ್ಸಿತ 'ಕರ್ತೃವಿಗೆ ಬೇಡವಾದದ್ದು' ಎಂದು ಎರಡು ಬಗೆಯಲ್ಲಿ ಪರಿಗಣಿಸಲ್ಪಟ್ಟಿದೆ, ಉದಾ.ಕೂಳಂ ಅಟ್ಟಂ, ಕೊರಡನ್ ಎಡಪಿದಂ.ಇಲ್ಲಿ ಹೇಳಿರುವುದರಲ್ಲಿ ಎರಡು ಬಗೆಗಳನ್ನು ಬಿಟ್ಟರೆ, ಉಳಿದವನ್ನು ನಾಗವರ್ಮನು ಪಾಣಿನಿಯಿಂದ ಪಡೆದಂತಿದೆ.ವೈಶೇಷಿಕಂ ಮತ್ತು ವಿಷಯಭೂತಂ ಎಂಬೆರಡನ್ನು ನಾಗವರ್ಮನು ಕನ್ನಡಕ್ಕೆ ಹೆಚ್ಚಾಗಿ ಸೇರಿಸಿದ್ದಾನೆ. ಅವನು ನೀಡಿರುವ ಉದಾಹರಣೆಗಳಿಂದ ವೈಶೇಷಿಕಕ್ಕೂ ಪ್ರಾಪ್ಯಕ್ಕೂ ವ್ಯತ್ಯಾಸ ಏನೆಂಬುದು ತಿಳಿಯುವುದಿಲ್ಲ.ಕ್ರಿಯೆನಡೆದ ಕಾಲ ಮತ್ತು ದೂರದಲ್ಲಿ ಮಧ್ಯೆ ವಿಚ್ಛೇದವಿಲ್ಲದಿದ್ದರೆ, ಅಂದರೆ, ಕ್ರಿಯೆ ನಿರಂತರವಾಗಿ ನಡೆದಿದ್ದರೆ, ಅದರೊಡನೆ ಕರ್ಮವೊಂದಿರುವ ಅವಶ್ಯಕತೆ ಇರುತ್ತದೆ (೪.೫ ಕಾಲಾಧ್ವನೋರ್ ಅವಿಚ್ಛೇದೇ; ಹೋ.ಅಷ್ಟಾ.೨.೩.೫ ಕಾಲಾಧ್ವನೋರ್ ಅತ್ಯಂತಸಂಯೋಗೇ), ಉದಾ.ಒಂದು ವರುಷನ್ ಇರ್ದ್ದಂ, ಗಾವುದಂ ಪರಿದಂ.ದ್ವಿತೀಯಾ ವಿಭಕ್ತಿಯ ಬದಲು ಕೆಲವೊಮ್ಮೆ ಚತುರ್ಥೀ ಬರಬಹುದು (೪.೧೯ ದ್ವಿತೀಯಾರ್ಥೇ ಚತುರ್ಥೀ), ಉದಾ.ಭೂತಾಪಕ್ಕೆ ಬಿಗುರ್ತು ವಿಷ್ಣು ಪಡೆದಂ ಮತ್ಸ್ಯಾವತಾರಾಂಕಮಂ.

ತೃತೀಯಾ ವಿಭಕ್ತಿ ಪ್ರತ್ಯಯವು ಕರ್ತೃ ಹಾಗೂ ಕರಣ ಕಾರಕಗಳನ್ನು ಸೂಚಿಸುತ್ತದೆ

(೪.೬ ಕರ್ತೃಕರಣಯೋಸ್ ತೃತೀಯಾ; ನೋ. ಅಷ್ಟಾ.೨.೩.೧೮ ಕರ್ತೃಕರಣಯೋಸ್ ತೃತೀಯಾ). ಕಾರ್ಯದಲ್ಲಿ ಪ್ರವೃತ್ತನಾಗುವವನು 'ಕರ್ತೃ' (ವೃತ್ತಿ: ಯಃ ಕ್ರಿಯಾಂ ಕರೋತಿ ಸ ಕರ್ತಾ; ಹೋ. ಕಾ.೪.೧೪ ಯಃ ಕರೋತಿ ಸ ಕರ್ತಾ). ಕಾರ್ಯಪೂರ್ತಿ ಆಗುವಲ್ಲಿ ಅತ್ಯುತ್ತಮ ಸಾಧನವನ್ನು 'ಕರಣ' ಎನ್ನುತ್ತಾರೆ (ವೃತ್ತಿ: ಸಾಧಕತಮಂ ಕರಣಂ; ಹೋ. ಅಷ್ಟಾ.೧.೪.೪೨ ಸಾಧಕತಮಂ ಕರಣಮ್), ಉದಾ.ದೇವದತ್ತಣಿಂ ಮಾಡಲ್ಪಟ್ಟಿತು, ಕುಡುಗೋಲಿಂ ಕುಯ್ದಂ. ಹೇತುವೂ ತೃತೀಯಾ ವಿಭಕ್ತಿಯಿಂದ ತಿಳಿಸಲ್ಪಡುತ್ತದೆ (೪.೭ ಹೇತಾವ್ ಅಪಿ; ಹೋ. ಕಾ.೪.೩೦ ಹೇತ್ವರ್ಥೇ), ಉದಾ.ಆಜ್ಞೆಯಿಂದೆ ಬಂದಂ.'ಹೇತುವನ್ನು' ನಾಗವರ್ಮ ನಿಮಿತ್ತ ಎಂದಿದ್ದಾನೆ. ತೃತೀಯಾರ್ಥದಲ್ಲಿ ಸಪ್ತಮೀ ವಿಭಕ್ತಿ ಬರಬಹುದು (೪.೨೧ ತೃತೀಯಾರ್ಥೇ ಸಪ್ತಮೀ), ಉದಾ.ಕೊಡಲಿಯಿಂ ಕಡಿದಂ/ಕೊಡಲಿಯೊಳ್ ಕಡಿದಂ.

ಸಂಪ್ರದಾನವು ಚತುರ್ಥೀ ವಿಭಕ್ತಿಯಿಂದ ಸೂಚಿಸಲ್ಪಡುತ್ತದೆ (೪.೮ ಸಂಪ್ರದಾನೇ ಚತುರ್ಥೀ; ಹೋ.ಅಷ್ಟಾ.೨.೩.೧೩ ಚತುರ್ಥೀ ಸಂಪ್ರದಾನೇ), ಉದಾ.ಬ್ರಾಹ್ಮಣಂಗೆ ಗೋವನ್ ಇತ್ತಂ. ವಾಕ್ಯದಲ್ಲಿ ರುಚಿ, ಹಿತ, ಈರ್ಷ್ಯಾ, ಭಯ ಮೊದಲಾದ ಅರ್ಥದ ಕ್ರಿಯೆಯ ಉಪಯೋಗವಾದಾಗ ಸಂಪ್ರದಾನ ಕಾರಕ ಇರಲೇ ಬೇಕು (೪.೯ ರುಚಿಹಿತೇರ್ಷ್ಯಾ ಭಯೇಷು ಚ), ಉದಾ. ದೇವದತ್ತಂಗೆ ಮೋದಕಂ ರುಚಿಯು; ಪಶುವಿಂಗೆ ಹಿತಂ ತೃಣಂ; ಪುಲಿಗಂಜುಗಂ ಜನಂ.'ತಿಳಿಯುವಿಕೆ' ಮತ್ತು 'ಅನಾದರ' ಸೂಚಿಸುವ ಕ್ರಿಯೆಯ ಕರ್ಮವು ಚತುರ್ಥೀ ವಿಭಕ್ತಿಯಲ್ಲಿರುತ್ತದೆ (೪.೧೦ ಮನ್ಯಕರ್ಮಣ್ಯನಾದರೇಚ; ಹೋ.ಕಾ.೪.೨೫ ಮನ್ಯಕರ್ಮಣಿ ಚ ಅನಾದರೇ ಅಪ್ರಾಣಿನಿ), ಉದಾ.ಆತನ ಮಾತನ್ ಒಂದಡಿಕೆಗೆ ಕೊಳ್ವಂ.'ನಮಸ್ಕಾರ', 'ಸ್ವಸ್ತಿ' ಇತ್ಯಾದಿ ಅರ್ಥದ ಕ್ರಿಯೆಯೊಡನೆ ಚತುರ್ಥೀ ವಿಭಕ್ತಿಯ ನಾಮಪದವೊಂದರ ಅವಶ್ಯಕತೆ ಇರುತ್ತದೆ (೪.೧೧ ನಮಸ್ಕ್ರಿಯಾ ಸ್ವಸ್ತ್ಯಾದಿಷು ಚ).ಸೂತ್ರದಲ್ಲಿನ ಆದಿ ಶಬ್ದದಲ್ಲಿ ಸ್ವಾಹಾ, ಸ್ವಧಾ, ಅಲಂ, ವಷಟ್, ಇತ್ಯಾದಿ ಶಬ್ದಗಳೂ ಸೇರುತ್ತವೆ ಎಂದು ವೃತ್ತಿ ತಿಳಿಸುತ್ತದೆ (ಹೋ.ಕಾ.೪.೨೭ ನಮಃ ಸ್ವಸ್ತಿ ಸ್ವಾಹಾ ಸ್ವಧಾ ಅಲಂ ವಷಟ್ ಯೋಗೇ ಚತುರ್ಥೀ), ಉದಾ.ಅರಸಂಗೆರಗಿದಂ; ಪ್ರಜೆಗೆಲ್ಲಂ ಸ್ವಸ್ತಿಯಕ್ಕು.

ಪಂಚಮೀ ವಿಭಕ್ತಿಯು ಅಪಾದಾನ ಕಾರಕವನ್ನು ಸೂಚಿಸುತ್ತದೆ (೪.೧೨ ಅಪಾದಾನೇ ಪಂಚಮೀ; ಹೋ.ಅಷ್ಟಾ.೨.೩.೨೮ ಅಪಾದಾನೇ ಪಂಚಮೀ).ವೃತ್ತಿಯಲ್ಲಿ ಅಪಾದಾನವೆಂದರೆ ಅಪನಯ 'ದೂರಮಾಡುವುದು' ಎಂದು ವಿವರಿಸಿದ್ದಾನೆ. ಉದಾ.ಊರತ್ತಣಿಂ ಬಂದಂ; ಪುಲಿಯತ್ತಣಿಂ ಭಯಂ.ಕೆಲವೊಮ್ಮೆ ಪಂಚಮೀ ಸ್ಥಾನದಲ್ಲಿ ತೃತೀಯಾ ವಿಭಕ್ತಿ ಬರಬಹುದು (೪.೧೭ ಪಂಚಮ್ಯರ್ಥೇ ತೃತೀಯಾ), ಉದಾ.ಮನೆಯತ್ತಣಿಂ/ಮನೆಯಿಂ ಪೊರಮಟ್ಟಂ.

ಸಪ್ತಮೀ ವಿಭಕ್ತಿಯಲ್ಲಿನ ನಾಮಪದವು ಅಧಿಕರಣ ಕಾರಕವನ್ನು ಸೂಚಿಸುತ್ತದೆ (೪.೧೪ ಅಧಿಕರಣೇ ಸಪ್ತಮೀ; ಹೋ.ಅಷ್ಟಾ.೨.೩.೨೮ ಸಪ್ತಮ್ಯಧಿಕರಣೇ ಚ), ಉದಾ.ನರರೊಳ್ ಉತ್ತಮಂ; ಪುವ್ವಿನೊಳ್ ಕಂಪು.ಒಂದೇ ಬಗೆಯ ಅನೇಕ

ವಸ್ತುಗಳಮಧ್ಯೆ ಕ್ರಿಯೆಯಿಂದಾಗಲೀ, ಗುಣದಿಂದಾಗಲೀ ಒಂದನ್ನು ಉಳಿದವುಗಳಿಂದ ಪ್ರತ್ಯೇಕಿಸಲು ವಾಕ್ಯದಲ್ಲಿ ಸಪ್ತಮೀ ವಿಭಕ್ತಿಯ ನಾಮಪದವೊಂದು ಇರಬೇಕು (೪.೧೫ ನಿರ್ಧಾರಣೇ ಚ ಕ್ರಿಯಯಾ ಗುಣೇನ ವಾ), ಉದಾ.ಪುರುಷರೋಳ್ ಕ್ಷತ್ರಿಯಂ ಶೂರಂ; ಕವಿಗಳೋಳ್ ಉತ್ತಮಂ ಸಿದ್ಧಸೇನಂ.ಕರ್ಮ ಕಾರಕದ ಎಲ್ಲ ಬಗೆಗಳನ್ನೂ ನಾಗವರ್ಮ ಪಾಣಿನಿಯಿಂದ ತೆಗೆದುಕೊಂಡಿದ್ದರೂ, ಅಧಿಕರಣದಲ್ಲಿ ಪಾಣಿನಿ ಹೇಳಿರುವ ಮೂರು ಬಗೆಗಳನ್ನು (ಔಪಶ್ಲೇಷಿಕ, ವೈಷಯಿಕ, ಅಭಿವ್ಯಾಪಕ) ಕನ್ನಡಕ್ಕೆ ಸ್ವೀಕರಿಸಿಲ್ಲ.

ಜಾತಿವಾಚಕ ಶಬ್ದಗಳು ಐಚ್ಛಿಕವಾಗಿ ಏಕವಚನದಲ್ಲಿರುತ್ತವೆ (೪.೨೨ ಜಾತಿರೇಕವದ್ ಬಹ್ವಾಖ್ಯಾಯಾಂ), ಉದಾ.ಕರಿಯವು / ಕರಿಗಳವು; ಹಾಗೆಯೇ, ಸಂಖ್ಯಾವಾಚಿ ಶಬ್ದಗಳೂ ಭಾವನಾಮಗಳೂ ಐಚ್ಛಿಕವಾಗಿ ಏಕವಚನದಲ್ಲಿರುತ್ತವೆ (೪.೨೩ ಸಂಖ್ಯೇಯೇ ಸಂಖ್ಯಾಸು ಚ), ಉದಾ.ಮೂರು ನಾಲ್ಕು / ಮೂರುಗಳು ನಾಲ್ಕು; (೪.೨೪ ಭಾವವಚನೇಪಿ ಚ) ಉದಾ. ಕಪ್ಪು ಬಿಳ್ಪು /ಕಪ್ಪು ಬಿಳ್ಪುಗಳ್

ಸ್ವಾಮಿ ಸಂಬಂಧವನ್ನು ತಿಳಿಸಲು ಆರನೆಯ ವಿಭಕ್ತಿಯ ಉಪಯೋಗವಾಗುತ್ತದೆ (೪.೧೩ ಸ್ವ ಸ್ವಾಮಿ ಸಂಬಂಧೇ ಷಷ್ಠೀ), ಉದಾ.ಮರದ ಕೊಂಬು; ಪೊನ್ನಗೆಜ್ಜೆ.ಕೆಲವೊಮ್ಮೆ, ಷಷ್ಠೀ ಸ್ಥಾನದಲ್ಲಿ ಚತುರ್ಥೀ ವಿಭಕ್ತಿಯು ಬರಬಹುದು (ಷಷ್ಠ್ಯರ್ಥೇ ಚತುರ್ಥೀ), ಉದಾ.ಶ್ರಿಯಧೀಶ್ವರಂ / ಶ್ರೀಗಧೀಶ್ವರಂ.

ಕೆಲವು ಭಾಷೆಗಳಲ್ಲಿ (ಉದಾ. ಸಂಸ್ಕೃತ) ಎರಡು ಬಗೆಯ ಕರ್ತೃಪದವನ್ನು ಗುರುತಿಸಿದ್ದಾರೆ. ಕನ್ನಡದಲ್ಲೂ ಹಾಗೆಯೇ ಇರುವುದು ಕಾಣಬರುತ್ತದೆ."ಅವಂ ಮರಮಂ ಕಡಿದಂ" ಮತ್ತು "ಅದು ಅವನಿಂ ಮಾಡಲ್ಪಟ್ಟುದು" ಎಂಬ ಎರಡು ವಾಕ್ಯಗಳನ್ನು ಪರಿಶೀಲಿಸೋಣ. ಮೊದಲವಾಕ್ಯದಲ್ಲಿ ಅವಂ (ಕರ್ತೃ), ಕಡಿದಂ (ಕ್ರಿಯೆ) ಇವುಗಳ ನಡುವೆ ವಚನ ಹಾಗೂ ಲಿಂಗದಲ್ಲಿ ಹೊಂದಾಣಿಕೆ ಇದೆ. ಆದ್ದರಿಂದ ಕರ್ತೃವನ್ನು ಹೇಳದಿದ್ದರೂ ಕ್ರಿಯೆಯಿಂದ ಅದು ಸೂಚಿಸಲ್ಪಡುತ್ತದೆ.ಅಂದರೆ, ಕ್ರಿಯೆ ಪ್ರಥಮಪುರುಷ ಪುಲ್ಲಿಂಗ ಏಕವಚನದಲ್ಲಿದ್ದರೆ, ಕರ್ತೃ ಸಹ ಅದೇ ವಚನ ಮತ್ತು ಲಿಂಗವನ್ನು ಹೊಂದಿರಬೇಕು.ಇದೊಂದು ಕರ್ತರಿ ಪ್ರಯೋಗದ ವಾಕ್ಯ.ಎರಡನೆಯ ವಾಕ್ಯದಲ್ಲಿ ಹೊಂದಾಣಿಕೆಯು 'ಅದು' ಮತ್ತು 'ಮಾಡಲ್ಪಟ್ಟುದು' ಎಂಬ ಎರಡು ಪದಗಳ ನಡುವೆ ಕಂಡುಬರುತ್ತದೆ.ಎರಡು ಪದಗಳೂ ಪ್ರಥಮಪುರುಷ ಏಕವಚನದಲ್ಲಿವೆ. ಆದರೆ, ಇಲ್ಲಿ ಪ್ರಥಮಾ ವಿಭಕ್ತಿ ಏಕವಚನದಲ್ಲಿರುವ 'ಅದು' ಕ್ರಿಯೆಯೊಡನೆ ಕರ್ಮ ಸಂಬಂಧವನ್ನು ಹೊಂದಿದೆ.ಕರ್ತೃಕಾರಕದಲ್ಲಿರುವ 'ಅವನಿಂ' ತೃತೀಯಾ ವಿಭಕ್ತಿಯಲ್ಲಿದೆ.ಇದೊಂದು ಕರ್ಮಣಿ ಪ್ರಯೋಗದ ವಾಕ್ಯ. ಹೀಗೆ ಕರ್ತರಿ ಮತ್ತು ಕರ್ಮಣಿ ಪ್ರಯೋಗಗಳಲ್ಲಿನ ಎರಡುಬಗೆಯ ಕರ್ತೃಗಳನ್ನು ಗಣನೆ ಮಾಡುವುದು ಉಚಿತ. ಆಂಗ್ಲಭಾಷೆಯಲ್ಲಿ ಮೊದಲಿನ ವಾಕ್ಯದ ಕರ್ತೃವನ್ನು (ಅವಂ) ಗ್ರಮಾಟಿಕಲ್ ಸಬ್ಜೆಕ್ಟ್ ಎಂದೂ, ಎರಡನೆಯ ವಾಕ್ಯದ ಕರ್ತೃಕಾರಕದಲ್ಲಿರುವ ಪದವನ್ನು (ಅವನಿಂ) ಲಾಜಿಕಲ್ ಸಬ್ಜೆಕ್ಟ್ ಎಂದೂ ಹೇಳುತ್ತಾರೆ.

**ಉಪಸಂಹಾರ**

ನಾಗವರ್ಮನಿಗೆ ವಿಭಕ್ತಿ ಮತ್ತು ಕಾರಕಗಳ ನಡುವಣ ಭೇದ ನಿಶ್ಚಿತವಾಗಿ ತಿಳಿದಿತ್ತು ಎನ್ನಬಹುದು.ಅವನು ಕಾರಕಗಳನ್ನು ವ್ಯಾಖ್ಯಾನಿಸದಿದ್ದರೂ ಹಿಂದಿನವರು ಹೇಳಿರುವುದನ್ನು ಅನುಮೋದಿಸಿದ್ದಾನೆ. ಕೆಲವೊಮ್ಮೆ, ಸೂತ್ರದಲ್ಲಿ ಹೇಳದಿದ್ದರೂ, ವೃತ್ತಿಯಲ್ಲಿ ಕಾರಕವನ್ನು ವ್ಯಾಖ್ಯಾನಿಸಿದ್ದಾನೆ. ಈ ವ್ಯಾಖ್ಯೆಗಳು ಕಾತಂತ್ರ ಅಥವಾ ಅಷ್ಟಾಧ್ಯಾಯಿಯಲ್ಲಿನ ಸೂತ್ರಗಳನ್ನು ಹೋಲುತ್ತವೆ (ಉದಾ.ಅಷ್ಟಾ.೧.೪.೪೨ ಸಾಧಕತಮಂ ಕರಣಂ).ಪಾಣಿನಿ ತನ್ನ ಕಾರಕಗಳನ್ನು ಅವುಗಳ ಪ್ರಾಬಲ್ಯ-ದೌರ್ಬಲ್ಯದ ಆಧಾರದಮೇಲೆ ಒಂದು ನಿಶ್ಚಿತ ಅನುಕ್ರಮದಲ್ಲಿ ನೀಡಿದ್ದಾನೆ. ಅಂದರೆ, ಪಟ್ಟಿಯಲ್ಲಿನ ಕಾರಕಗಳಲ್ಲಿ ಮೊದಲು ಕೊಟ್ಟಿರುವುದಕ್ಕಿಂತ ನಂತರ ಕೊಟ್ಟಿರುವ ಕಾರಕ ಹೆಚ್ಚು ಪ್ರಬಲ. ಹಾಗಾಗಿ, ಸಂದರ್ಭವೊಂದರಲ್ಲಿ ಎರಡು ಕಾರಕಗಳು ಪ್ರಾಪ್ತವಾಗುವಾಗುವಂತಿದ್ದರೆ, ವಿಪ್ರತಿಷೇಧೇ ಪರಂ ಕಾರ್ಯಂ (೧.೪.೨) ಎಂಬ ಸೂತ್ರದಂತೆ ಎರಡನೆಯ ಕಾರಕ ಪ್ರಬಲಿಸುತ್ತದೆ (ಅಪಾದಾನ ಸಂಪ್ರದಾನ ಕರಣಾಧಾರಕರ್ಮಣಾಂ/ ಕರ್ತುಶ್ಚೋಭಯಸಂಪ್ರಾಪ್ತೌ ಪರಮೇವ ಪ್ರವರ್ತತೆ). ಹಾಗೆಯೇ, ಕಾತಂತ್ರ ವ್ಯಾಕರಣದಲ್ಲೂ ಒಂದು ನಿಶ್ಚಿತ ಅನುಕ್ರಮ ಇದೆ. ಅಲ್ಲಿ ಹೇಳಿರುವ ಕ್ರಮ ಹೀಗಿದೆ: ಅಪಾದಾನಂ ಸಂಪ್ರದಾನಂ ತತೋ'ಧಿಕರಣಂ ಸ್ಮೃತಂ/ ಕರಣಂ ಕರ್ಮ ಕರ್ತಾ ಚ ವಿಧಿರೇಷಾಂ ಪರೋ ಬಲಃ. ಆದರೆ, ಈ ಅನುಕ್ರಮವನ್ನು ನಾಗವರ್ಮ ಉಪಯೋಗಿಸಿಕೊಂಡಿಲ್ಲ.

ನಾಗವರ್ಮನ ಕನ್ನಡ ವ್ಯಾಕರಣದ ನಾಲ್ಕು ವಿಧಾನಗಳನ್ನು ಕುರಿತಾದ ಮೇಲಿನ ವರ್ಣನೆಯಿಂದ ಅವನು ಜೈನ ಮತವನ್ನು ಅಂಗೀಕರಿಸುವ ಮುಂಚೆಯೇ ಸಂಸ್ಕೃತ ವ್ಯಾಕರಣಗಳನ್ನು ಚನ್ನಾಗಿ ಅಭ್ಯಸಿಸಿದ್ದನೆಂದೂ ನಂತರ ಕಾತಂತ್ರ ವ್ಯಾಕರಣವನ್ನೂ ಕಲಿತಿರಬೇಕೆಂದು ಎನಿಸುತ್ತದೆ.ಅವನ ಸೂತ್ರಗಳು ಅಷ್ಟಾಧ್ಯಾಯೀ ಹಾಗೂ ಕಾತಂತ್ರ ಎರಡೂ ವ್ಯಾಕರಣಗಳ ಸೂತ್ರಗಳನ್ನು ನೆನಪಿಸುತ್ತವೆ. ಅದಕ್ಕಾಗಿಯೇ, ನಾಗವರ್ಮನ ಸೂತ್ರಗಳಿಗೆ ಹೋಲಿಕೆ ಇರುವ ಸೂತ್ರಗಳನ್ನು ಅಷ್ಟಾಧ್ಯಾಯೀ ಮತ್ತು ಕಾತಂತ್ರದಿಂದ ಕೊಟ್ಟಿದೆ.ಇಲ್ಲಿ ಪ್ರಾತಿಪದಿಕಕ್ಕೆ 'ಲಿಂಗಂ' ಎಂದಿರುವುದು ಕಾತಂತ್ರದ ಕಡೆಗೆ ಅವನ ಒಲವನ್ನು ಸೂಚಿಸುತ್ತದೆ.ಕಾತಂತ್ರ ವ್ಯಾಕರಣದ ರಚಯಿತನೂ ಜೈನ ಮತಾವಲಂಬಿಯೇ. ಹಾಗೂ, ನಾಗವರ್ಮನ ವ್ಯಾಕರಣದ ವಿಧಾನಗಳು ಕಾತಂತ್ರ ವ್ಯಾಕರಣದಲ್ಲಿ ಕಂಡುಬರುವ ಕ್ರಮದಲ್ಲೇ (ಅಂದರೆ, ಸಂಜ್ಞಾ, ಸಂಧಿ, ವಿಭಕ್ತಿ, ಕಾರಕ) ಇರುವುದು ವಿಶೇಷ. ಈಕ್ರಮ ಪಾಣಿನಿಯ ವ್ಯಾಕರಣದಲ್ಲಿಲ್ಲ. ಆದ್ದರಿಂದ, ನಾಗವರ್ಮ ಕಾತಂತ್ರದಿಂದಲೇ ಹೆಚ್ಚು ಪ್ರಭಾವಿತನಾಗಿದ್ದಾನೆ ಎನ್ನಬಹುದು. ಕಡೆಯದಾಗಿ, ಆಕಾಲದಲ್ಲಿ ಶಾಸ್ತ್ರಗ್ರಂಥ ರಚನೆಗೆ ಉಪಯೋಗಿಸುತ್ತಿದ್ದ ಸಂಸ್ಕೃತ ಸೂತ್ರಶೈಲಿಯಲ್ಲಿ ಕನ್ನಡವನ್ನು ವಿವರಿಸಿ, ಎರಡೂ ವ್ಯಾಕರಣಗಳಿಂದ ತನಗೆ ಅವಶ್ಯವಿದ್ದದ್ದನ್ನು ತೆಗೆದುಕೊಂಡಿದ್ದಾನೆ.ದ್ರಾವಿಡ ಭಾಷೆಗಳನ್ನೂ ಸಹ ಸಂಸ್ಕೃತದ ಸೂತ್ರಶೈಲಿಯಲ್ಲಿ ನಿರೂಪಿಸಬಹುದೆಂದು ಪ್ರಥಮಬಾರಿಗೆ ತೋರಿಸಿಕೊಟ್ಟ ಶ್ರೇಯಸ್ಸು ನಾಗವರ್ಮನಿಗೆ ಲಭಿಸುತ್ತದೆ.

**ಆಕರಸೂಚಿ**

೧. ನಾಗವರ್ಮನ ಕರ್ಣಾಟಕ ಭಾಷಾಭೂಷಣ, ಎಲ್. ರೈಸ್ (ಸಂ). ಮೈಸೂರು ಸರ್ಕಾರದ ಮುದ್ರಣಾಲಯ. ಬೆಂಗಳೂರು. ೧೮೮೪.

೨. ಶರ್ವವರ್ಮನ ಕಾತಂತ್ರ ಸೂತ್ರಪಾಠ

೩. ಕಾಶಿಕಾ, ವಾಮನ ಮತ್ತು ಜಯಾದಿತ್ಯ (ಸಂ). ಚವ್ಖಂಬಾ ಸಂಸ್ಕೃತ ಸೀರೀಸ್. ಬನಾರಸ್ ಸಿಟಿ. ೧೦೮೭.

**ಟಿಪ್ಪಣಿ**

೧. ಕನ್ನಡಭಾಷೆಯ ಚರಿತ್ರೆಯಲ್ಲಿ ರೈಸ್ ವಿದ್ವಾಂಸನು ಮೂರು ಹಂತಗಳನ್ನು ಗುರುತಿಸಿದ್ದಾನೆ: ೧) ಪೂರ್ವದ ಹಳೆಗನ್ನಡ, ೨) ಹಳೆಗನ್ನಡ, ಮತ್ತು ೩) ಹೊಸಗನ್ನಡ. ಏಳನೆಯ ಶತಮಾನದ ಕಡೆಯವರೆಗೂ ಕಂಡುಬರುವುದು ಮೊದಲಹಂತ, ಎರಡನೆಯದು ಎಂಟರಿಂದ ೧೪ನೆಯ ಶತಮಾನದವರೆಗೆ, ಅಲ್ಲಿಂದ ಮುಂದಿನದು ಮೂರನೆಯಹಂತ.೧೩ನೆಯ ಶತಮಾನದ ವರೆಗೂ ಜೈನ ಕವಿಗಳು ಕನ್ನಡವನ್ನು ಪೋಷಿಸಿದರು, ಮುಂದಿನ ಎರಡು ಶತಮಾನಗಳಲ್ಲಿ ಲಿಂಗಾಯತ ಹಾಗೂ ಶೈವರ ಕೃತಿಗಳೂ ನಂತರ ೧೫ನೆಯ ಶತಮಾನದಿಂದ ಬ್ರಾಹ್ಮಣ ಮತ್ತು ವೈಷ್ಣವ ಗ್ರಂಥಗಳು ಕಂಡುಬಂದಿವೆ.

೨. ಭಾರತದ ಛಪ್ಪನ್ನ ರಾಜ್ಯಗಳು (ಶಬ್ದರತ್ನಾಕರ ಗ್ರಂಥದಿಂದ)

ಅಂಗ, ವಂಗ, ಕಳಿಂಗ, ಕರ್ಣಾಟ, ಕೇರಳ, ಕಾಮರೂಪ, ಗೌಡ, ವನವಾಸ, ಕುಂತಳ, ಕೊಂಕಣ, ಮಾಗಧ, ಸುರಾಷ್ಟ್ರ, ಕುಕುರ, ಕುರು, ಅವಂತಿ, ಪಾಂಡ್ಯ, ಮದ್ರ, ಸಿಂಹಳ, ಘೂರ್ಜರ, ಪಾರಶೀಕ, ಮಿಥಿಲಾ, ಪಾಂಚಾಲ, ಶೂರಸೇನಿ, ಗಾಂಧಾರ, ಬಾಹ್ಲೀಕ, ಹೈಹಯ, ತೌಳವ, ಸಾಳ್ವ, ಪುಂಡ್ರಕ, ಪ್ರಾಗ್ಜ್ಯೋತಿಷ, ಮತ್ಸ್ಯ, ಚೇದಿ, ಬರ್ಬರ, ನೇಪಾಳ, ಗೌಳ, ಕಾಶ್ಮೀರ, ಕನ್ಯಾಕುಬ್ಜ, ವಿದರ್ಭ, ಖುರಸಾಣ, ಮಹರಾಷ್ಟ್ರ, ಕೋಸಲ, ಕೇಕಯ, ಅಹಿಚ್ಛತ್ರ, ತ್ರಿಲಿಂಗ, ಪ್ರಯಾಗ, ಕರಹಾಟಕ, ಕಾಂಭೋಜ, ಭೋಜ, ಚೋಳ, ಹೂಣ, ಕಾಶಿ

೩. ಹಳೆಗನ್ನಡದ ಮೂರು ಳ-ಕಾರಗಳು

ಕುಳ : ಕನ್ನಡದ ಸಾಮಾನ್ಯ ವರ್ಣ

ರಳ : ಪೂರ್ವದ ಕನ್ನಡದ ಪದ್ಯಕೃತಿಗಳಲ್ಲಿ ಕಂಡುಬರುವ [ಠ]

ಕ್ಷಳ : ಸಂಸ್ಕೃತಪದಗಳ [ಲ] ಸ್ಥಾನದಲ್ಲಿ ಉಪಯೋಗವಾಗುತ್ತಿದ್ದ ವರ್ಣ

# ಕಣವಿಯವರ ಕಾವ್ಯಮೀಮಾಂಸೆ

– ಡಾ. ಜಿ.ಎಂ. ಹೆಗಡೆ

ಹೊಸಗನ್ನಡದ ಹಿರಿಯ ಕವಿಗಳಾದ ಚೆನ್ನವೀರ ಕಣವಿ ಅವರು ಕನ್ನಡ ಕಾವ್ಯ ಪರಂಪರೆಗೆ ಶ್ರೇಷ್ಠವಾದ ಕವಿತೆಗಳನ್ನು ನೀಡಿದಂತೆ ಕಾವ್ಯ ಮೀಮಾಂಸೆಯ ಚಿಂತನಧಾರೆಯನ್ನು ಪ್ರಕಟಿಸುತ್ತ ಬಂದಿದ್ದಾರೆ. ಬೇಂದ್ರೆ, ಕುವೆಂಪು, ಪುತಿನ ಮೊದಲಾದವರ ಕವಿತೆ ಮತ್ತು ಗದ್ಯದಲ್ಲಿ ಕಾವ್ಯಮೀಮಾಂಸೆಯ ವಿಚಾರಪಥವನ್ನು ನಿರ್ಮಿಸಿದಂತೆ ಕಣವಿಯವರೂ ನಿರಂತರವಾಗಿ ಕಾವ್ಯಾರ್ಥ ಚಿಂತನ ನಡೆಸಿರುವದು ಅವರ ಕವಿತೆ ಮತ್ತು ಗದ್ಯ ಬರಹಗಳಲ್ಲಿ ಕಂಡು ಬರುತ್ತದೆ. ಕಾವ್ಯಾನುಸಂಧಾನವನ್ನು ಕಳೆದ ಅರ್ಧ ಶತಮಾನದಿಂದಲೂ ಮಾಡುತ್ತ ಬಂದ ಕಣವಿಯವರು 'ಕಾವ್ಯ ಸೃಷ್ಟಿ' (ಕಾವ್ಯಾನುಸಂಧಾನ) ವಿಧಾನದ ಕುರಿತು ವ್ಯಕ್ತಪಡಿಸಿದ ವಿಚಾರಗಳು ಅತ್ಯಂತ ಮೌಲಿಕವಾಗಿವೆ.

'ಪ್ರಾಚೀನ ಕಾಲದಿಂದಲೂ ಮಾನವನ ಮನೋಭೂಮಿಕೆಯಲ್ಲಿ ನಡೆಯುತ್ತ ಬಂದಿರುವ ಸೌಂದರ್ಯಾನುಭೂತಿಯ ಚಟುವಟಿಕೆಗಳಲ್ಲಿ ಕಾವ್ಯವೂ ಒಂದು. ಅಂದರೆ ಲಯಾತ್ಮಕವಾಗಿ ಛಂದೋರೂಪದಲ್ಲಿ ಇರುವದು ಕಂಡುಬರುತ್ತದೆ. ಒಂದು ಪ್ರಭವೀರೂಪ ಎನ್ನಬಹುದು. ಕಾವ್ಯ ಎಂದರೇನು ಎಂಬುದರ ಜಿಜ್ಞಾಸೆಯನ್ನು ಹಿರಿಯ ಕಾವ್ಯಮೀಮಾಂಸಕರು ಅದರ ಲಕ್ಷಣ ಮೀಮಾಂಸೆಯನ್ನು ಕೊಟ್ಟು ಚರ್ಚಿಸುತ್ತ ಬಂದಿದ್ದಾರೆ. ಕಣವಿಯವರು ಕಾವ್ಯದ ಲಕ್ಷಣವನ್ನು ಆಧುನಿಕ ಸಂದರ್ಭದಲ್ಲಿ ವಿವೇಚಿಸುತ್ತಾರೆ. ಆಯಾ ಕಾಲದ ಜನತೆಯ ಜೀವನದ ಮೌಲ್ಯಗಳು, ವಾತಾವರಣದ ಪ್ರಭಾವ, ಭಾವನೆಯ ಒತ್ತಡಗಳ ಮೂಲಕ ಪ್ರಕಟವಾಗುತ್ತದೆ. ಕಾವ್ಯವು ಮುಖ್ಯವಾಗಿ ಭಾಷೆಯಲ್ಲಿ ರೂಪುಯಗೊಂಡ ಕವಿಯ ಭಾವ ನಿರೂಪಣೆ, ಸಮಾಜದ ಪರಿಸರದಲ್ಲಿ ಅಳವಡಿಸಿಕೊಂಡು ಭಾಷೆ ಬೆಳಯುತ್ತದೆ. ಸಮಾಜ ಜೀವಿಯಾದ ಕವಿಯು ತನ್ನ ಕಾವ್ಯಕ್ಕೆ ಅದನ್ನು ಒಗ್ಗಿಸಿಕೊಂಡು, ಅನುಭವವನ್ನು ಹಿಗ್ಗಿಸಿಕೊಂಡು ನುಡಿಗೊಡುತ್ತ ಬಂದುದೇ ಕಾವ್ಯವಾಗಿದೆ.'

ಭಾರತೀಯ ಕಾವ್ಯಮೀಮಾಂಸೆ 'ನಾನೃಷಿಃ ಕುರುತೇ ಕಾವ್ಯಂ' ಅಂದರೆ ಋಷಿಯಲ್ಲದವ ಕಾವ್ಯ ಸೃಷ್ಟಿಸಲಾರ ಎಂದು ಹೇಳಿದೆ. 'ಅಪಾರ ಕಾವ್ಯ ಸಂಸಾರ

ಕವಿರೇವ ಪ್ರಜಾಪತಿ' ಎಂಧು ಪ್ರತಿಪಾದಿಸಿದೆ. ಕವಿಯ ಬಗೆಗೆ ನಾನಾ ವಿಧವಾದ ಕಲ್ಪನೆಗಳಿವೆ. ಆದರೆ ಕಣವಿಯವರು 'ಕವಿಯೂ ಎಲ್ಲರಂತೆ ಒಬ್ಬ ಮನುಷ್ಯ. ಆದರೆ ಉಳಿದವರಲ್ಲಿ ಅಷ್ಟಾಗಿ ಕಂಡುಬರದ ಕೆಲವೇ ವಿಶಿಷ್ಟ ಗುಣಗಳು ಅವನನ್ನು ಆಶ್ರಯಿಸಿರುತ್ತವೆ. ಅವನ ಮನಸ್ಸು ಹುಟ್ಟಿನಿಂದಲೇ ಹೆಚ್ಚು ಸಂವೇದನಾಶೀಲವಾದದ್ದು,ಅಂತಃಕರಣ ಹೆಚ್ಚು ಸ್ನಿಗ್ಧವಾದದ್ದು. ಕಣ್ಣು ಸೂಕ್ಷ್ಮ ನಿರೀಕ್ಷಣೆಯಲ್ಲಿ, ಕಿವಿ ಸೂಕ್ಷ್ಮ ನಾದಗ್ರಹಣದಲ್ಲಿ ತತ್ಪರತೆಯನ್ನು ಪಡೆದಂತಹವು. ವಾಸ್ತವ ಲೋಕದಲ್ಲಿ ಪ್ರತ್ಯಕ್ಷವಾಗಿ ಪಡೆದ ಅನುಭವಗಳು ಅವನ ಭಾವಸ್ತರಗಳಲ್ಲಿ ಹಾಯ್ದು ಶಬ್ದಗಳಲ್ಲಿ ಪುನರ್ನಿರ್ಮಾಣಗೊಂಡು ಛಂದೋಲಹರಿಯಲ್ಲಿ ರೂಪುಗೊಳ್ಳುವದೇ ಕವಿತೆ ಎಂದು ಹೇಳಿದ್ದಾರೆ.

ಕವಿಯಾಗುವವನಿಗೆ ಪ್ರತಿಭೆ ಇರಲೇಬೇಕು. ಇವನ್ನೇ ಪಾಶ್ಚಾತ್ಯರು ಜೀನಿಯಸ್ ಎಂದು ಹೇಳಿದ್ದಾರೆ. 'ಪ್ರಜ್ಞಾನವನವೋನ್ಮೇಷ ಶಾಲಿನಿ ಪ್ರತಿಭಾ ಮತಾಂ' ಎಂದು ಕಾವ್ಯಮೀಮಾಂಸಕರು ಹೇಳಿದ್ದಾರೆ. ಕಣವಿಯವರು ಕಾವ್ಯ ನಿರ್ಮಿತಿಯಲ್ಲಿ ಪ್ರತಿಭೆ ಹೇಗೆ ಕಾರ್ಯ ಮಾಡುತ್ತದೆ ಎಂಬುದನ್ನು ಬನಹಳ ಚೆನ್ನಾಗಿ ವಿಶ್ಲೇಷಿಸಿದ್ದಾರೆ. 'ಕವಿಯ ಪ್ರತಿಭೆ ಆ ವಸ್ತುವಿನ ವಿಶೇಷತೆಯನ್ನು ಅವನಿಗೆ ಹೊಳೆಯಿಸುತ್ತದೆ. ಆ ಕ್ಷಣದಲ್ಲಿ ಅವನಿಗೆ ಸ್ಫೂರ್ತಿ ಒದಗಿತು ಎನ್ನುತ್ತೇವೆ. ಮಳೆಗಾಲದಲ್ಲಿ ಮೋಡ ಮುಸುಕಿ ಮಬ್ಬು ಆವರಿಸಿದಾಗ ಮೋಡದ ಒಂದು ಅಂಚಿನಿಂದ ಸೂರ್ಯನ ಬೆಳಕು ಚಿಮ್ಮಿದರೆ ನೆಲದ ಮೇಲಿನ ಅಷ್ಟೂ ಹಸಿರು ಜಗ್ಗನೆ ಕಂಗೊಳಿಸುತ್ತದೆ. ಹಾಗೆ ಪ್ರತಿಭೆಯು ಕಾವ್ಯ ವಸ್ತುವಿನ ಮೇಲೆ ಬೆಳಕು ಹರಿಸಿ ಅಂತರಂಗವನ್ನು ಅರಿಯುವಂತೆ ಮಾಡುತ್ತದೆ. ಈ ಅರಿವಿನಲ್ಲಿ ಒಂದು ಬಗೆಯ ಆನಮದವಿದೆ. ಅದನ್ನು ಕಾವ್ಯ ಪ್ರತಿಮೆಯಾಗಿ ರೂಪಿಸುವ ಆ ಕ್ಷಣದ ಏಕಾಗ್ರತೆ ಸುಖ ದುಃಖಾತೀತವಾದ ಮೈಮರೆವನ್ನು ಕವಿಗೆ ಉಂಟು ಮಾಡುತ್ತದೆ. ಆ ಮುಂದಿನ ಕೆಲಸವೆಲ್ಲ ಕಲೆಯ ಭಾಗಕ್ಕೆ ಸೇರಿದ್ದು.' ಎಂದು ಕವಿಯ ಪ್ರತಿಭೆಯ ಸ್ವರೂಪವನ್ನು ವಿವೇಚಿಸಿದ್ದಾರೆ.

ಭಾರತೀಯ ಮತ್ತು ಪಾಶ್ಚಾತ್ಯ ಕಾವ್ಯ ಮೀಮಾಂಸಕರು ಆನಂದವೇ (....)ಕಾವ್ಯದ ಪರಮ ಪ್ರಯೋಜನ ಎಂದು ಹೇಳಿದ್ದಾರೆ. ಕಣವಿಯವರೂ ಆನಂದವೇ ಕಾವ್ಯದ ಗುರಿಯಾಗಿರುವುದನ್ನು ಸಮರ್ಥಿಸಿದ್ದಾರೆ. ವೀಣೆಯನ್ನು ನುಡಿಸಿದಾಗ ಸಂಗೀತದ ಸವಿ ಹತ್ತುವಂತೆ ಕವಿತೆಯನ್ನು ಮನಸ್ಸುಕೊಟ್ಟು ಓದಿದಾಗ ಸಹೃದಯರಲ್ಲಿ ಅದಕ್ಕೆ ಪ್ರತಿಕ್ರಿಯೆ ದೊರೆಯುತ್ತದೆ. ಕಾವ್ಯ ಮನಸ್ಸಿಗೆ ಹಿಡಿಯುವುದೇ ಆದರೆ ಅದು ಆನಂದದ ಮೂಲಕವೇ ಎಂಬುದು ನಿಜ. ಆದರೆ ಅದು ಸುಮ್ಮನೆ ಎಂಥದ್ದೋ ಒಂದು ಆನಂದವಲ್ಲ. ಬರೀ ಭಾವನೆಯ ಬೆರಗಿನಿಂದ ಇಲ್ಲವೇ ಕಲ್ಪನೆಯ ಚಮತ್ಕಾರದಿಂದ ಉಂಟಾಗುವಂಥದ್ದಲ್ಲ. ಸಂವೇದನಾ ಶಕ್ತಿಯಿಂದ ಶ್ರೀಮಂತವಾದ, ನೈಜವಾಗಿ ಅನುಭವಿಸುವಂಥ ಮನಸ್ಸಿಗೆ ಉಚಿತವಾದ ಆನಂದ. ಅದಕ್ಕೆ ಕವಿಯ ಅನುಭವ ತೀವ್ರತೆಯನ್ನು, ಗಾಢತೆಯನ್ನು ಪಡೆದು ಕಲಾಭಿಜ್ಞತೆಯಲ್ಲಿ ಸ್ಫುಟಗೊಂಡಿರಬೇಕಾಗಿರುತ್ತದೆ.'

ಕಾವ್ಯ ಬ್ರಹ್ಮಾನಂದದ ಸಹೋದರ ಎಂದು ಕಾವ್ಯಮೀಮಾಂಸಕರು ಹೇಳಿದಂತೆ ಅದರ ಅನುಭೂತಿಯ ವಿಶ್ಲೇಷಣೆಯನ್ನು ಕಣವಿಯವರು ಇಲ್ಲಿ ಮಾಡಿದ್ದಾರೆ. ಕವಿಯಾಗುವವನಿಗೆ ಪ್ರತಿಭೆ, ಅಭ್ಯಾಸ, ವ್ಯುತ್ಪತ್ತಿ, ಜ್ಞಾನ ಅವಶ್ಯಕವಾದುದು. ಅದನ್ನು ಕಣವಿಯವರು ಸಮರ್ಥಿಸಿ ಹೀಗೆ ಹೇಳಿದ್ದಾರೆ. 'ಅಭ್ಯಾಸವಶದಿಂದ ಅನೇಕ ವಿಚಾರಗಳು, ವಿದ್ಯಮಾನಗಳು, ಕಾವ್ಯದ ತಂತ್ರ ನೈಪುಣ್ಯ, ಭಾಷೆಯ ಹದ ಅವನ ಕೈವಶವಾಗಿರುತ್ತದೆ. ಇದೆಲ್ಲವೂ ಸಮರಸಗೊಂಡು ಅಂತಹ ಸ್ಫುರಣೆಯಿಂದ ಕವಿತೆ ರೂಪುಗೊಳ್ಳುತ್ತದೆ.'

ಕವಿತೆ ಹೇಗೆ ಆವಿಷ್ಕಾರ ಪಡೆಯುತ್ತದೆ ಎಂಬುದರ ಜಿಜ್ಞಾಸೆಯನ್ನು ಕಣವಿಯವರು ಆಲೋಚಿಸಿದ್ದಾರೆ. 'ಕವಿಯ ಹೃದಯದಿಂದ ಭಾವಗೀತ ಯಾವುದೇ ಉದ್ದೇಶವನ್ನಿಟ್ಟುಕೊಂಡು ಹೊರಡುವುದಿಲ್ಲ. ವಿಶಾಲವಾದ ಬಯಲಿನಲ್ಲಿ ಎಲ್ಲಿಯೂ ಒಂದು ಕಡೆ ಗಾಳಿ ಸುಳಿಸುಳಿಯಾಗಿ ಸುತ್ತಿಕೊಂಡು ಮೇಲೆದ್ದಂತೆ ಕವಿಯ ಮನಸ್ಸಿನಲ್ಲಿ ಒಂದು ಭಾವ ಮೂಡುತ್ತದೆ. ಹುಟ್ಟಿದ ಕೂಸು ತಾನು ಕಣ್ಬಿಟ್ಟು ನೋಡುವಂತೆ ಜೀವ ಸ್ಪಂದನಗೊಳ್ಳುತ್ತದೆ. ಎದೆಯ ಬಾಗಿಲನ್ನು ಮೆಲ್ಲನೆ ತೆರೆದು ಆಕಾಶವನ್ನು ಮುಟ್ಟಿ ನಿಲ್ಲುತ್ತದೆ. ಅದರ ದೃಷ್ಟಿಯಿಂದ ವಸ್ತುವಿಗೆ ಬಣ್ಣ ಬಂದು ಪುಷ್ಟಿಗೊಳ್ಳುತ್ತದೆ. ಉಸಿರು ಅದನ್ನು ತನಗೆ ತಕ್ಕಂತೆ ಆಡಿಸಿ ಮಾತಿಗೆ ಲಯವನ್ನು, ಗತಿಯನ್ನು ಒದಗಿಸುತ್ತದೆ.' ಹೀಗೆ ಭಾವಗೀತೆಯ ಸೃಷ್ಟಿ ವಿಧಾನವನ್ನು ಹೇಳುತ್ತಾ ಕಣವಿಯವರು ಬೇಂದ್ರೆ, ಕುವೆಂಪು ಭಾವಗೀತೆಗಳನ್ನು ವಿಶ್ಲೇಷಿಸಿ ಸಮಕಾಲೀನತೆ ಮತ್ತು ಸಾರ್ವಕಾಲಿಕತೆಯನ್ನು ಕವಿತೆ ಸಾಧಿಸುವುದನ್ನು ವಿಧಿತಪಡಿಸಿದ್ದಾರೆ.

ಕಾವ್ಯ ಸೃಷ್ಟಿಯಲ್ಲಿ ಛಂದಸ್ಸಿನ ಸ್ಥಾನದ ಕುರಿತು ಚಿಂತನೆಯನ್ನು ಕಣವಿ ನಡೆಸಿರುವುದು ಕಂಡುಬರುತ್ತದೆ. ಪುತಿನ ತನ್ನ 'ಕಾವ್ಯ ಕುತೂಹಲ'ದಲ್ಲಿ ಹೇಳಿದಂತೆ 'ಕಾವ್ಯದಲ್ಲಿ ವಾಗರ್ಥಗಳು ಅದರ ಲೌಕಿಕಾಂಶ, ಛಂದಸ್ಸು, ಅಲೌಕಿಕಾಂಶ' ಎಂಬುದನ್ನು ಸಮರ್ಥಿಸುತ್ತಾ ಹಿಂದಿನ ಕಾವ್ಯದಲ್ಲಿ ವೃತ್ತ, ರಗಳೆ, ಷಟ್ಪದಿಗಳು ಕವಿಗಳ ಕೈಯಲ್ಲಿ ಸಾರ್ಥಕತೆ ಪಡೆದಿದ್ದನ್ನು ನಮ್ಮ ಗಮನಕ್ಕೆ ತಂದಿದ್ದಾರೆ. ಸೌಂದರ್ಯಾನುಭೂತಿಯ ಜತೆಗೆ ಸಹಜತೆಗೆ ಒಲಿದಾಗ ಅರ್ಥ ವ್ಯಕ್ತಿಯ ಗುಣದೊಂದಿಗೆ ಛಂದದಲ್ಲಿ ಸ್ವಾಚ್ಛಂದ್ಯದ ಸೊಗಸು ನಿರ್ಮಿತವಾಗುವುದಕ್ಕೆ ಪಂಪನ ಶರತ್‌ಕಾಲದ ಆಗಮನದ ಚಿತ್ರದ ವೃತ್ತವನ್ನು ಕೊಟ್ಟು ಸಮರ್ಥಿಸಿದ್ದಾರೆ.

ಕನ್ನಡ ನವೋದಯ ಕವಿಗಳು ನಡೆಸಿದ ಪ್ರಯೋಗ ವೈವಿಧ್ಯ ಮತ್ತು ಕುಸುರಿ ಕೆಲಸ ಬಂಧವಿರದ ಬಂಧುರ ಸ್ವಚ್ಛಂದ ಸುಂದರ ಮೂಲಕ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ. 'ಸಮಕಾಲೀನ ಜೀವನದ ಗೊಂದಲ, ಗಡಿಬಿಡಿ, ವಿಷಾದ, ಜಿಗುಪ್ಸೆ, ಜಟಿಲತೆಗಳು ನವ್ಯಕವಿತೆಯ ಛಂದೋರೂಪವನ್ನು ಪಲ್ಲಟಗೊಳಿಸಿದೆ. ಆಡುಮಾತಿನ ಲಯ, ನಾಗರೀಕ ಪ್ರಜ್ಞೆಯ ನವ್ಯ ಸಂವೇದನೆಗಳಿಗೆ ಪ್ರತಿಮೆ, ಸಂಕೇತಗಳಲ್ಲಿ ಮೂರ್ತ ಸ್ವರೂಪ' ಹೊಂದುತ್ತಿರುವುದಕ್ಕೆ ಅಡಿಗರ 'ಭೂತ' ಕವಿತೆಯನ್ನು ನಿದರ್ಶನವಾಗಿ ನೀಡಿದ್ದಾರೆ. ಕಾವ್ಯ ಲಕ್ಷಣ, ಉದ್ದೇಶಗಳು ಕಾಲಕಾಲಕ್ಕೆ ತಕ್ಕಂತೆ ಪರಿವರ್ತನಾಶೀಲವಾಗುತ್ತವೆ ಎಂಬ ವಿಚಾರವನ್ನು ಕಣವಿಯವರು ವ್ಯಕ್ತಪಡಿಸಿದ್ದಾರೆ.

ಕಾವ್ಯದ ವಸ್ತು ಮತ್ತು ರೂಪ : (ಸಮಾಹಿತ) ಜಿಜ್ಞಾಸೆ ಅರಿಸ್ಟಾಟಲ್, ಆನಂದವರ್ಧನರ ಕಾಲದಿಂದಲೂ ನಡೆಯುತ್ತಾ ಬಂದಿದೆ. ಕಣವಿಯವರು ಈ ವಿಚಾರವನ್ನೆತ್ತಿಕೊಂಡು ಸಾಹಿತ್ಯಕೃತಿಗಳಿಗೆ ವಸ್ತುವಿನ ಕೊರತೆ ಇಲ್ಲ ಮತ್ತು ಕಾವ್ಯದಲ್ಲಿ ರೂಪದ ಅನ್ವೇಷಣೆ ಗೌಣವಾದ ಪ್ರಶ್ನೆಯೇ ಆಗಿದೆ. ಕಾವ್ಯದ ಅರ್ಥ ಸಂವಹನದ ಸಮಸ್ಯೆಯನ್ನು ಕೆಲವರು ಎತ್ತಿದ್ದಾರೆ. ಇವುಗಳೆಲ್ಲಾ ಪಾಶ್ಚಾತ್ಯ ಸಾಹಿತ್ಯದ ಸುತ್ತ ನಡೆಯುತ್ತಿರುವ ಚರ್ಚೆಗಳು, ಭಾರತೀಯ ಲೇಖಕರು ದೇಶೀಯ ಹಾಗೂ ಪರಂಪರಾಗತ ಸಾಹಿತ್ಯ ರೂಪಗಳ ಬೇರೆ ಬೇರೆ ಎಳೆಗಳನ್ನು ಅಣಿಗೊಳಿಸಬೇಕಾದ ಅಗತ್ಯವಿದೆ. ಪಾಶ್ಚಾತ್ಯರ ಅಂಧಾನುಕರಣೆ ಸಲ್ಲದು ಎಂಬ ಖಚಿತವಾದ ನಿಲುವನ್ನು ಪ್ರಕಟಿಸಿದ್ದಾರೆ. ಈಗ ಐವತ್ತು ವರ್ಷದ ನಂತರ ಮತ್ತೆ ದೇಶೀಯವಾದ ಚರ್ಚೆಯಾಗುತ್ತಿದ್ದು ಬಹಳ ಹಿಂದೆಯೇ ಕಣವಿಯವರು ಈ ಬಗ್ಗೆ ಚಿಂತಿಸಿದ್ದು ಗಮನಿಸುವ ಅಂಶವಾಗಿದೆ.

'ಕನ್ನಡ ಕಾವ್ಯದಲ್ಲಿ ನೂತನ ಪ್ರತಿಮೆ ಸಂಕೇತಗಳು' (ಕಾವ್ಯಾನುಸಂಧಾನ) ಲೇಖನದಲ್ಲಿ ಕಣವಿಯವರು ಹೊಸ ಕಾವ್ಯದ ಅಭಿವ್ಯಕ್ತಿ ವಿಧಾನದ ಚರ್ಚೆಯನ್ನು ಮುಂದುವರೆಸಿದ್ದಾರೆ. 'ಲೋಕಾನುಭವಕ್ಕೆ ವ್ಯತಿರಿಕ್ತವಾದ, ಶಾಸ್ತ್ರಗಳಲ್ಲಿ ಗೋಚರಿಸದ, ಆದರೆ ಕವಿಯ ಪ್ರತಿಭಾಶಕ್ತಿಯಿಂದ ನಿರ್ಮಿತವಾದ ಅನೇಕ ಕಾಲ್ಪನಿಕ ಸಂಗತಿಗಳು 'ಕವಿ ಸಮಯ'ಗಳೆಂದು ಕರೆಯಲ್ಪಡುತ್ತಿದ್ದು ಅವುಗಳನ್ನು ಪ್ರಾಚೀನ ಕಾವ್ಯಗಳಲ್ಲಿ ಕೇವಲ ಸಂಗತಿಗಳಾಗಿ, ಕೆಲವೆಡೆ ಸಂಕೇತಗಳಾಗಿ, ಕೆಲವೆಡೆ ಅಲಂಕಾರ ನಿರ್ಮಾಣದ ಉಪಮಾನ ಸಾಮಗ್ರಿಯಾಗಿ, ಇನ್ನು ಕೆಲವೆಡೆ ಧ್ವನಿ ವ್ಯಂಜಕವಾದ ಪ್ರತಿಮೆಗಳಾಗಿ ಬಳಸಲ್ಪಟ್ಟಿವೆ. ಕಣವಿಯವರು ಕವಿ ಸಮಯವನ್ನು ಪ್ರತಿಮಾ ವಿಧಾನಕ್ಕೆ ಹಿನ್ನೆಲೆಯಾಗಿ ಅವಲೋಕಿಸುತ್ತ ವಚನಕಾರರು ವಚನಗಳಲ್ಲಿ, ಜನಪದರು ತ್ರಿಪದಿಗಳಲ್ಲಿ ಬಳಸಿದ್ದನ್ನು ವಿವೇಚಿಸುತ್ತ ಹೊಸ ಕಾವ್ಯದಲ್ಲಿ ಕವಿಯ ಜೀವನದೃಷ್ಟಿ, ಅನುಭವದ ಅಭಿವ್ಯಕ್ತಿಯಲ್ಲಿ ಮಾರ್ಪಾಟಾಗಿದ್ದು, ವಿಜ್ಞಾನ, ಮನಶಾಸ್ತ್ರಗಳ ಬೆಳವಣಿಗೆಯೊಡನೆ, ಜೀವನದ ಜಟಿಲತೆಯೂ ಸೇರಿ ಈ ಕಾಲದ ಅನುಭವ ಪ್ರಪಂಚ ಅಚ್ಚರಿಗೊಳಿಸುವಷ್ಟು ಬದಲಾವಣೆ ಪಡೆದಿರುವುದನ್ನು ವಿದಿತಪಡಿಸುತ್ತಾರೆ.

ಕಣವಿಯವರು ಕಾವ್ಯ ಪ್ರತಿಮೆಯ ವ್ಯಾಖ್ಯಾನವನ್ನು ಅತ್ಯಂತ ಮಾರ್ಮಿಕವಾಗಿ ನಮ್ಮ ಮುಂದಿಡುತ್ತಾರೆ. ಒಂದು ಕವಿತೆಯನ್ನು ಓದಿದ ಮೇಲೆ ಅಲ್ಲಿಯ ಶಬ್ದಗಳ ಮೂಲಕ ಆದರೂ ಅವಕೃತಿತವಾಗಿ ನಮ್ಮ ಮನಸ್ಸಿನಲ್ಲಿ ಮೂಡಿ ನಿಲ್ಲುವ ಚಿತ್ರವೇ ಕಾವ್ಯ ಪ್ರತಿಮೆ. ತೋರಿಕೆಗೆ ಉಪಮೆ, ರೂಪಕಗಳಾಗಿ, ಕಂಡರೂ ಕವಿಯ ಭಾವಾಭಿವ್ಯಕ್ತಿ ನಿರ್ದಿಷ್ಟವಾದ ನುಡಿಚಿತ್ರಗಳನ್ನು ಪಡೆದಾಗ ಅವು ಪ್ರತಿಮೆಗಳನ್ನೇ ಕಂಡರಿಸುತ್ತವೆ. ಅವು ಸರಳವಾಗಿರಬಹುದು, ಸಂಕೀರ್ಣವಾಗಿರಬಹುದು. ಪ್ರತೀಕ ವ್ಯಾಪಕವಾದ, ಸಂಕೀರ್ಣವಾದ ಅನೇಕ ಪದರುಗಳ ಅರ್ಥಕೋಶವನ್ನು ಪಡೆದಿರುತ್ತವೆ ಭಾಷೆಯ ಈ ಪ್ರತೀಕಾತ್ಮಕವಾದ ಆದಷ್ಟು ಸಮಗ್ರವಾಗಿ ಉಪಯೋಗಿಸಿಕೊಂಡು ತನ್ನ ಸಂವೇದನೆಯನ್ನು ಅಭಿವ್ಯಕ್ತಿಗೊಳಿಸಲು ಇಂದಿನ ಕವಿ ಹವಣಿಸುತ್ತಾನೆ. ಈ ಬಗೆಯ

ರೂಪಕ ಶಕ್ತಿಯಿಂದ ಭಾಷೆಯೂ ಬೆಳೆಯುತ್ತದೆ. ಹೀಗೆ ಭಾಷೆಯ ಬೆಳವಣಿಗೆಯಲ್ಲಿಯೇ ಕಾವ್ಯಾಂಶವೂ ಸೇರಿಕೊಳ್ಳುತ್ತದೆ. ಬದಲಾದ ರೂಪಕ – ಪ್ರತಿಮೆಗಳು ಬದಲಾದ ಜೀವನವನ್ನೂ ಅದರ ಪರಿಸರವನ್ನೂ ಸೂಚಿಸುತ್ತವೆ. ಹೀಗೆ ಆಧುನಿಕ ಕನ್ನಡ ಕಾವ್ಯದಲ್ಲಿ ಪ್ರತಿಮೆ ಮತ್ತು ಸಂಕೇತಗಳ ಪ್ರಯೋಗದ ಬಗೆಗೆ ಸೂಕ್ಷ್ಮವಾದ ಚಿಂತನೆಯನ್ನು ನಡೆಸಿದ ಕಣವಿಯವರು ಕೆಲವು ಕವಿಗಳ ಕವಿತೆಗಳ ಪ್ರತಿಮಾಸೃಷ್ಟಿಯನ್ನೂ ಕುರಿತು ಚರ್ಚಿಸಿದ್ದಾರೆ.

ಉತ್ತಮವಾದ ಕವಿತೆಯನ್ನು ರಚಿಸುವವರು ಹೇಗೆ ಎಂಬ ಜಿಜ್ಞಾಸೆಯನ್ನು ಕಣವಿಯವರು ನಡೆಸುತ್ತಲೇ ಬಂದಿದ್ದು ಅದರ ಬಗೆಗೆ ಅವರು ಹೇಳಿದ್ದು ಹೀಗೆ 'ಕವಿತೆಯನ್ನು ಬರೆಯುವವರು ಬಹು ಸುಲಭ ಎಂದು ನಮ್ಮಲ್ಲಿ ಅನೇಕರ ಭಾವನೆಯಾಗಿದೆ. ನಿಜವಾದ ಒಳ್ಳೆಯ ಕವಿತೆಯನ್ನು ಬರೆಯುವುದು ಅಷ್ಟು ಸುಲಭವಲ್ಲ. () ಕವಿಯ ಅಖಂಡ ಜೀವನಾನುಭವದ ಪ್ರತೀಕವಾಗಿ ಬರುವ ಕವಿತೆ ಅದೊಂದು ಸರ್ವೋತ್ಕೃಷ್ಟವಾದ ಕಲೆಯೂ ಅಹುದು. ಆದುದರಿಂದ ಅದನ್ನು ಸರ್ವಾಂಗ, ಪರಿಪೂರ್ಣವಾಗಿ, ಸಂಪುಷ್ಟವಾಗಿ ರೂಪಿಸುವಲ್ಲಿ ಕವಿಯು ಮರಹು, ಆಲಸ್ಯಗಳಿಗೆ ಎಡೆಗೊಡದೆ, ಸತತವಾದ ಪರಿಶ್ರಮದಿಂದಲೂ, ಚಿತ್ತೈಕಾಗ್ರತೆಯಿಂದಲೂ ಕಲಾ ಸಂಯಮದಿಂದಲೂ ಸಾಧಿಸಬೇಕಾಗುತ್ತದೆ. ಘನತರ ಚಿತ್ರದ ರೂಹ ಬರೆಯಬಹುದಲ್ಲದೆ ಪ್ರಾಣವ ಬರೆಯಬಹುದೇ' ಎಂದು ಅಲ್ಲಮಪ್ರಭು ಕೇಳಿದ್ದಾರೆ. ಒಂದೆಡೆ ಪ್ರಾಣವನ್ನು ಬರೆಯಬಲ್ಲಶಕ್ತಿ ಕಾವ್ಯಕ್ಕಿದೆ. ಅಂಥ ಕಾವ್ಯವನ್ನು ಕನ್ನಡ ಮರೆಯಲಿಕ್ಕಿಲ್ಲವಷ್ಟೇ?' – (ಸಾಹಿತ್ಯ ಚಿಂತನ ಸಮಗ್ರ ಗದ್ಯ ಒಂದು ಪು. ೪೨೩) ಎಚ್ಚೆಸ್ವಿಯವರೊಡನೆ ಸಂವಾದ ಮಾಡುತ್ತ ಕಣವಿಯವರು ಹೇಳಿದ ವಿಚಾರಗಳು ಅರ್ಥಪೂರ್ಣವಾಗಿವೆ. 'ಅನುಭವದ ಪರಿಣಾಮವಾಗಿ, ಮಾಧ್ಯಮವಾದ ಭಾಷೆಯ ಮೂಲಕ ಅಮೂರ್ತತೆಗೆ ಹೊಳಹಾಗಿ ಕಾಣಿಸಿಕೊಂಡು ನಂತರ ದೇಹಧಾರಣೆ ಮಾಡುತ್ತದೆ. ಎಷ್ಟು ಒಳ್ಳೆಯ ಕವಿತೆ ಆಗುತ್ತದೋ ಬಿಡುತ್ತದೋ ಇದನ್ನು ಮೀರಿದ ವಿಷಯ. ಹೊಟ್ಟೆಯೊಳಗಿನ ಕೂಸು ಹ್ಯಾಗಿದೆ ಎಂಬುದು ತಾಯಿಗೇ ಗೊತ್ತಿರುವುದಿಲ್ಲ. ವೈದ್ಯರಿಗೂ ಕೂಡ (ಅವಿನಾಭಾವ ಪು. ೨೧೫)

ಕವಿಯಾದವನು ತಾನು ಯಾರಿಗಾಗಿ ಬರೆಯುತ್ತಿದ್ದೇನೆ ಎಂಬುದನ್ನು ಆಲೋಚಿಸಬೇಕು. ಕವಿತೆ ಇರುವದು ಸಹೃದಯರಿಗಾಗಿ. ಕವಿತೆ ಕವಿಯಲ್ಲೇ ಹುಟ್ಟಿ ಕೊನೆಯಾಗಬಾರದು. ಆದ್ದರಿಂದ ಓದುಗ ಲೋಕದ ಬಗೆಗೂ ಅವನು ಯೋಚಿಸಬೇಕು. ಅದಕ್ಕೆ ಸಂಬಂಧಿಸಿದಂತೆ ಕಣವಿಯವರು ಹೇಳುತ್ತಾರೆ : 'ಕಾವ್ಯ ರಚನೆ, ಮನಸ್ಸಿನ ಏಕಾಂತದಲ್ಲಿ, ಏಕಾಗ್ರತೆಯಲ್ಲಿ ನಡೆಯುವ ಕ್ರಿಯೆಯಾಗಿದ್ದರೂ ಕವಿಯ ಸುಪ್ತ ಪ್ರಜ್ಞೆಯಲ್ಲಿ ಓದುಗ ಲೋಕವೊಂದು ಇದ್ದೇ ಇರುವುದು. ಕವಿ ಬರೆಯುತ್ತ ಹೋದಮತೆ ತನಗೆ ತಾನೇ ಸಂಬೋಧಿಸಿಕೊಳ್ಳುತ್ತಾನೆ. ಆಗ ಅವನು ಓದುಗರ ಪ್ರತಿನಿಧಿಯೂ ಆಗಿರಬೇಕಾಗುತ್ತದೆ. 'ಕಾವ್ಯಮಾನಂದಾಯ' ಎನ್ನುವದು ನಿತ್ಯ ಸತ್ಯವಾಗಿದ್ದರೂ

ಆನಂದವನ್ನು ಹಂಚಿಕೊಳ್ಳಲಿಕ್ಕೆ ಸಹೃದಯರು ಇಲ್ಲದಿದ್ದರೆ ಕವಿಗೆ ಸಮಾಧಾನ ಆಗದು. ತಕ್ಕ ಮನಸ್ಸನ್ನು ಹೋಗಿ ಮುಟ್ಟುವದರಲ್ಲಿ, ಹೃದಯವನ್ನು ತಟ್ಟುವುದರಲ್ಲಿ ಕಾವ್ಯದ ಸಾರ್ಥಕತೆ ಇದೆ. ತನ್ನ ಕಾವ್ಯದ ಗುಣಮಟ್ಟವನ್ನು ಕಾಯ್ದುಕೊಳ್ಳುತ್ತಲೇ ಅದು ತನ್ನ ಸಂವಹನವನ್ನು ಸಾಧಿಸುವಂತಿರಬೇಕು. ಓದುಗರ ಅಥವಾ ಕೇಳುಗರ ಪ್ರತಿಕ್ರಿಯೆಯನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದರೆ ಸಂವಹನದ ಏರುಪೇರುಗಳು ಕವಿಗೇ ಹೊಳೆಯಬಲ್ಲವು' (ಕವಿ ಕಣವಿ ಸಂದರ್ಶ ಚೆನ್ನವೀರ ಕಣವಿ ಬದುಕು–ಬರೆಹ ಪುಟ ೭೦)

ಕನ್ನಡದಲ್ಲಿ ಬೇಂದ್ರೆ, ಕುವೆಂಪು, ಪು.ತಿ.ನ. ಶಿವರುದ್ರಪ್ಪನವರಂತೆ ಕಣವಿಯವರೂ ಕವಿತೆಗಳಲ್ಲಿ ಕಾವ್ಯಮೀಮಾಂಸೆಯನ್ನು ಪ್ರಕಟಿಸಿದ್ದಾರೆ.

ಕಣವಿಯವರು ಕಾವ್ಯಾಕ್ಷಿಯಿಂದ ಇತ್ತೀಚಿನವರೆಗೂ ಕಾವ್ಯಮೀಮಾಂಸೆಯನ್ನು ತಮ್ಮ ಕವಿತೆಗಳ ಮೂಲಕವೂ ಪ್ರಕಟಿಸಿರುವದು ಪ್ರತ್ಯೇಕ ಅಧ್ಯಯನ ವಿಷಯವಾಗಿದೆ. ಕವಿತೆ ಹೇಗೆ ಹೊರಹೊಮ್ಮುತ್ತದೆ ಎಂಬ ಕುತೂಹಲ ಸಹೃದಯಲೋಕಕ್ಕೆ ಇದ್ದೇ ಇದೆ. ಕಣವಿಯವರು ತನಗೆ ತಾನೆ ತಿಳಿಯದಂತೆ ತುಳುಕಿತಹಹ ಭಾವನಾ, ಕಮ್ಮಲರಿಗೆ ಕವಿ–ಗಾಳಿಗೆ ಕಾವ್ಯಾಕ್ಷಿಗೆ ವಂದನಾ' ಎಂದು ಪ್ರಾರಂಭದಲ್ಲಿಯೇ ಹೇಳಿದ್ದಾರೆ. ಇದನ್ನೇ ವರ್ಡ್ಸ್‌ವರ್ತ್ ಕೂಡ ಕವಿಯಾದವನಲ್ಲಿ ಭಾವನೆಗಳು ಓತಪ್ರೋತವಾಗಿ ಹರಿದು ಬಂದು ಪ್ರಶಾಂತವಾದ ಜಾಗೃತ ಸ್ಥಿತಿಯಲ್ಲಿ ಒಡಮೂಡುತ್ತದೆ ಎಂದಿದ್ದಾನೆ. ಕಣವಿಯವರ 'ಕಾವ್ಯಾಕ್ಷಿ'ಯಲ್ಲಿ ಬರುವ 'ಸ್ಫೂರ್ತಿ' ಸುದೀರ್ಘವಾದ ಕಾವ್ಯಮೀಮಾಂಸೆಯ ಕವಿತೆ.

ಅರಿವಿನಾಳದ ಕಲ್ಪನೆಯುದಾತ್ತತೆಗೆ
ಜೀವನದುಸಿರಾಡಿಸುವ ಸ್ಫೂರ್ತಿಕನ್ಯೆ
ನಿನ್ನ ದರ್ಶನ ಫಲಕೆ ಸ್ಪರ್ಶನದ ಚೇತನೆಗೆ
ದೇಹ ರೋಮಾಂಚಿತವು ಎದೆಯ ರನ್ನೆ

ಕವಿತೆ ರಚಿಸಲು 'ಸ್ಫೂರ್ತಿ' ಅತ್ಯವಶ್ಯಕ. ಕವಿಯ ಕಲ್ಪನೆಯನ್ನು ಉದಾತ್ತಗೊಳಿಸಿ ಅರಿವಿನ ಭಾವವನ್ನು ಕವಿತೆ ಮೂಲಕ ಆಕೃತಿಗೊಳಿಸಲು 'ಸ್ಫೂರ್ತಿ' ಕಾರಣವಾಗುತ್ತದೆ. ಕವಿ ಕಾವ್ಯಸ್ಫೂರ್ತಿಯಿಂದ ಕವಿತೆ ಕಟ್ಟುವ ಬಗೆಯನ್ನು ಕಣವಿಯವರು ವರ್ಣಿಸುತ್ತ ಹೋಗುತ್ತಾರೆ. 'ಎಂದಾದರೊಮ್ಮೆ ನೀ ಬಂದು ಮರೆಯಾಗುತಿಹೆ ಸಂಜೆ ಮುಗಿಸಲಿನ ಸ್ವರ್ಣವರ್ಣದಂತೆ' ಎಂದು ಅದರ ಸ್ವರೂಪವನ್ನು ವಿವರಿಸುತ್ತಾರೆ. 'ರಾಗರಸ ಪಾಕದಲಿ ಛಂದೋವಿಲಾಸದಲಿ ಕಮನೀಯ ಕವಿತೆ ತಾ ಕಣ್ದೆರೆವಳು' ನವೋದಯ ಕವಿಗಳೆಲ್ಲ ಹೇಳುವಂತೆ ಸ್ಫೂರ್ತಿ ತತ್ವವನ್ನು ಕಣವಿಯವರೂ ಹೇಳಿದ್ದಾರೆ.

ಸ್ಫೂರ್ತಿ ಸುಂದರಿ ರಸೋನ್ಮಾದಿನಿಯು, ಚಂಚಲೆಯು
ಕಟ್ಟುಕಟ್ಟಳೆಗೆಲ್ಲ ಸಿಲುಕದವಳು;
ಜೀವನದ ವಿವಿಧಾಂಗ ರಂಗದಲಿ ಮೈಮರೆತು
ನಿಂತಿರಲು ಅರಿಯದೆಯೆ ಮಿಂಚಿ ಬಹಳು.

ಕಣವಿಯವರು 'ಭಾವಜೀವಿಯು ನಾನು, ನನ್ನೆದೆಯ ನಂಬಿರುವ ತುಂಬಿರುವ ಕನಸುಗಳ ಕಲ್ಪವೃಕ್ಷ!' ಎಂದು ತಮ್ಮ ಕವಿ ವ್ಯಕ್ತಿತ್ವದ ಸ್ವರೂಪವನ್ನು 'ಭಾವಜೀವಿ'ಯಲ್ಲಿ ಹೇಳಿದ್ದಾರೆ. ಅವರು 'ಕವಿತೆಗೆ' ಬರೆದ ಸುನೀತ ಒಂದು ಭಾವಸಂವಾದವಾಗಿದೆ,

ಕವಿತೆ ೧ ಸುಲಲಿತ ಭಾವಸಂಪ್ರೀತೆ, ನನ್ನೆದೆಯ
ಸುಪ್ತ ಸುಖದುಃಖ ವೀಣಾಕ್ವಣಿತ ಸಂಗೀತ
ಚೈತ್ರಮುಖಿ ಕಣ್ಣನರಳಿಸು ವಿಮಲ ವಿಖ್ಯಾತೆ !

ಏನಿದ್ದರೇನು ವಿಶ್ವಂಭರಿತೆ ನಿನ್ನುದಯ
ಚಿರನೂತನೋತ್ಸಾಹ ಚೇತನಂ ಪಡೆವನಕ

ಕವಿಮನವು ಬರಿಯುದಾಸೀನ ರಸಹೀನತೆಯ
ದೀನತೆಯ ತವರು ಅದೋ ವಿಶ್ವಮೋಹಿನ ಉಷೆಯ

ಚುಂಬನೋತ್ಕರ್ಷತೆಗೆ ಭೂಮಿಗಿಳಿದಿದೆ ನಾಕ !
ಅವುದೋ ಮೂಲೆಯಲಿ ಕುಳಿತು ಭೂರಂಗದಲಿ

ನಡೆವ ಅಕಟೋವಿಕಟ ನಾಟಕದ ಹಿನ್ನೆಲೆಯ
ಬಗಿದು ನೋಡುವ ಬಯಕೆ ಬಗೆಯೊಳಿದೆ. ಮನ್ನಣೆಯ
ಅಳಿಯಾಸೆ ಮಣ್ಣುಗೂಡಲಿ, ಮಹಾಪುರದಲಿ

ಜಾಲಿಸಲಿ ಬಾಳಕೊಳೆ, ಬದುಕು ಮಡಿಯಾಗಿರಲಿ
ಮೂಡು ಮುದ್ದಿನ ಕವಿತೆ ಋತ ಶಿವಾನಂದದಲಿ

(ಕವಿತೆಗೆ – ಸುನೀತ ಸಂಪದ)

ಕಣವಿಯವರು ಶಬ್ದಗಳ ದೀಪಮಾಲೆಯನ್ನು ಹಚ್ಚುತ್ತ ಬಂದವರು. ಕವಿಯಾದವನು ತನ್ನ ಪ್ರತಿಭೆಯ ಮಿಂಚು ಆರದಂತೆ ಕವಿತೆಯ ಸೃಷ್ಟಿ ಕಾರ್ಯದಲಿ ತೊಡಗಿರಬೇಕಾದ ಅಗತ್ಯವನ್ನು ಅವರು ಪ್ರತಿಪಾದಿಸಿದ್ದಾರೆ. ಅವರ ಪ್ರಸಿದ್ಧವಾದ ಕವಿತೆಯ ಸಾಲುಗಳಿವು:

ಏನಾದರೂ ಇರಲಿ, ಹಾಡು ನಿಲ್ಲಿಸಬೇಡ
ದೀಪ ಪಟ್ಟನೆ ಆರಿಹೋಗಬಹುದು !

ನನ್ನೆದೆಯ ಕತ್ತಲೆಯ ಕಣ್ಣುಕಪ್ಪಡಿ ಮತ್ತೆ
ಮೂಲೆ ಮೂಲೆಗೆ ಹೋಗಿ ಹಾಯಬಹುದು!

ಬದುಕು ಸೋಲಾದರೂ ಕಾಡು ಪಾಲಾದರೂ
ಹಾಡ ಬಿಟ್ಟಳಿದವನ ಪಾಡು ಬೇಡ;

ನೀನೆನ್ನ ದೈವತವು ಹಾಡೆನ್ನ ಜೀವಿತವು
ಮತ್ತೆ ಮುತ್ತುಳಿದವರ ಮಾತು ಬೇಡ

(ಮತ್ತೊಂದು ಪುಟ್ಟ ಹಕ್ಕಿಗೆ – ಮಧುಚಂದ್ರ)

ಕಣವಿಯವರು ಏಳು ದಶಕಗಳ ಕಾಲ ಕವಿತೆ ರಚಿಸುತ್ತ 'ಜೀವನವೆ ಕವಿತೆ'ಯಾಗಿ ಬಾಳಿದವರು ಅವರ ಸಮಗ್ರ ಕಾವ್ಯದ ತುಂಬ ಕಾವ್ಯಮೀಮಾಂಸೆಯ ವಿಚಾರಗಳು ಹರಳುಗಟ್ಟಿವೆ. ಕಾವ್ಯ ಪ್ರಯೋಜನದ ಚಿಂತನೆಗಳಿವೆ. 'ಒಂದು ಕವಿತೆಗೆ ಕೂಡ ಮನ ಕರಗಬಹುದು' ಎಂಬ ಕಾವ್ಯ ಜಿಜ್ಞಾಸೆಯನ್ನು ಅವರು ಪ್ರಕಟಪಡಿಸಿದ್ದಾರೆ.

ಕಣವಿಯವರ 'ನನ್ನವೇ ನಾಲ್ಕುಶಬ್ದ' ಸುನೀತದಲ್ಲಿ ಕವಿ ಅಧುನಿಕ ಮಾಂತ್ರಿಕ ಬದುಕಿನಲ್ಲಿ ಕವಿತೆ, ಆಕೃತಿಗೊಳ್ಳುವ ಬಗ್ಗೆ ಚಿಂತಿಸುವದನ್ನು ಕಾಣುತ್ತೇವೆ. ಇಷ್ಟೊಂದು ಸದ್ದು ಗದ್ದಲದಲ್ಲಿ ಒದ್ದಾಡುತ್ತಿರುವಾಗ ಎಲ್ಲಡಗಿ ಮುದ್ದೆಯಾಗಿರಬಹುದು. ನನ್ನವೇ ನಾಲ್ಕು ಶಬ್ದಗಳು? ಶಬ್ದ ಮಾಲಿನ್ಯ ಸುತ್ತುಮುತ್ತಲದಲ್ಲಿರುವ ಗದ್ದಲದಲ್ಲಿ ಕವಿಯ ಕವಿತೆ ಅಡಗಿ ಮುದ್ದೆಯಾಗಿರಬಹುದು. ಕವಿಯ ಭಾವಕೋಶದಿಂದ ಹೊರಹೊಮ್ಮಿ ಬಣ್ಣಬಣ್ಣದ ರೆಕ್ಕೆ ಬಿಚ್ಚಿ ನಿಂತ ಸ್ಥಾಯಿ ಸಂಚಾರಿ ಭಾವಗಳು ಕವಿತೆಯಲ್ಲಿ ಅಂತಸ್ಥವಾಗಿರುತ್ತವೆ. ಹೂವಿನ ಸಖ್ಯದಿಂದ ಪರಿಮಳ ಹರಡಿ ಬರುವಂತೆ ಕವಿತೆ ಸಹೃದಯನ್ನು ಮುದಗೊಳಿಸುತ್ತದೆ. ಕವಿಗೆ ಕಾವ್ಯಕ್ಕೇರುವ ಕಾಳಜಿ ಮುಖ್ಯವಾದದ್ದು. ವಾಹನಗಳ ಓಡಾಟದ ಭರಾಟೆಯಲ್ಲಿ ಚಕ್ರ ಸಿಕ್ಕ ಬೆಕ್ಕಿನ ಮರಿಯನ್ನು ತಂದು ಹೋದಂತೆ ಕವಿಗೆ ತನ್ನ ಕವಿತೆಯ ಬಗೆಗೆ ಆತಂಕ, ಕಾಳಜಿ ಇದೆ. ಕವಿತೆಯ ಕೊನೆಯಲ್ಲಿ ಕಣವಿಯವರು ಬರೆದ ಎರಡು ಸಾಲುಗಳು ಅತ್ಯಂತ ಧ್ವನಿಪೂರ್ಣವಾಗಿವೆ.

ಮೋಡ ಮಳೆಗರೆಯಲಿ, ಆಮೇಲೆ ಬರಲಿ ಸೂರ್ಯ.

ಈಗ ಪದಪಂಕ್ತಿಯಲಿ ಅದರಿಂದ ಭೂಮಿ ಹದಗೊಂಡು ಬೀಜ ಬಿತ್ತಲು ಆಗುವಂತೆ ಕವಿಗೆ ತನ್ನ ಕಾವ್ಯಕೃತಿಗೆ ಬೇಕಾಗುವ ಬಿತ್ತನೆಯ ಕಾರ್ಯದಲ್ಲಿ ಮಗ್ನಗೊಳ್ಳಲು ಸಾಧ್ಯವಾಗುತ್ತದೆ. ರೈತನಂತೆ ಕವಿಯೂ ಕಾವ್ಯಕೃಷಿ ಕಾರ್ಯದಲ್ಲಿ ತೊಡಗಿಕೊಳ್ಳುತ್ತಾನೆ ಎಂದು ಕವಿ ವ್ಯಕ್ತಪಡಿಸಿದ್ದಾರೆ.

ಕಣವಿಯವರ 'ಕವಿಯ ಧನ್ಯತೆ' ವಿಶಿಷ್ಟವಾದ ಸುನೀತ ಕವಿ ನಿಸರ್ಗ ಪ್ರಪಂಚವನ್ನು ಸೂಕ್ಷ್ಮವಾಗಿ ಅವಲೋಕಿಸುತ್ತಿದ್ದಾರೆ. ನಗರೀಕರಣ ಕೈಗಾರಿಕೋದ್ಯಮ, ಯಾಂತ್ರಿಕತೆಯಿಂದ ನಿಸರ್ಗ ನಾಶವಾಗುತ್ತಿದೆ. ಪಕ್ಷಿಲೋಕ ಕಣ್ಮರೆಯಾಗುತ್ತಿದೆ. ಎಲ್ಲೆಡೆ ಕಾಂಕ್ರೀಟ್ ಕಾಡು ಬೆಳೆಯುತ್ತಿದೆ. ಮನುಷ್ಯರಿಗಂಟಿಕೊಂಡೂ ಅಂಟಿಕೊಳ್ಳದೆ ಕಿಟಕಿಯಲಿ ಕುಳಿತು ತಂಟೆ ತೆಗೆಯುತ್ತಿದ್ದ ಗುಬ್ಬಚ್ಚಿ ಈಗ ನಾಪತ್ತೆಯಾಗಿವೆ. ಭಾರತದ ಮಹಾನಗರ ಮುಂಬಯಿಯಲ್ಲಿ ಮೇಲೆ ವಿಮಾನ ಕೆಳಗೆ ಗುಬ್ಬಿಗಳ ಚಿಲಿಪಿಲಿ ಕವಿಗೆ ಬಿದ್ದು ಕವಿಯನ್ನು ಬಿಡದೆಬ್ಬಿಸಿತು. ಅಲ್ಲಿ ಊರಿನಲಿ ಕಣ್ಮರೆಯಾದ ಪುಟ್ಟ ಜೀವಿ ಇಲ್ಲಿ ಬದುಕಿದೆಯಲ್ಲ ಧನ್ಯನಾದನು ಕವಿ ಎಂದು ಕಣವಿ ಉದ್ಗರಿಸುತ್ತಾರೆ. ಕವಿಗೆ ಮನುಷ್ಯ ಸಂಬಂಧಗಳು

ಎಷ್ಟು ಮುಖ್ಯವೋ ಹಾಗೆಯೇ ಪ್ರಪಂಚದ ಜೀವಕೋಟಿಗಳ ಬಗೆಗೆ ಮಮತೆಯಿದೆ. ಕವಿ ಯಾವಾಗಲೂ ವಿಶ್ವಕುಟುಂಬಿಯಾಗಿಯೇ ಚಿಂತಿಸುತ್ತಾನೆ. ಅದನ್ನು ಇಲ್ಲಿ ನಾವು ಅನುಭವಿಸುತ್ತೇವೆ.

ಕಣವಿಯವರ ಒಂದು ಹಲವು ಪ್ರಸಿದ್ಧವಾದ ಸುನೀತ ಅದರಲ್ಲಿ ಕಾವ್ಯ ಪ್ರಯೋಜನದ ಲೋಕೋತ್ತರವಾದ ಭಾವನೆಗಳಿವೆ.

ಎಷ್ಟು ಕವಿತೆಗೆ ಜಗದ ಕಣ್ಣು ತೆರೆಯುವದು?
ಒಂದಿದ್ದರೂ ಸಾಕು ಮನೆಗೆ ಬೆಳಕಾಗುವುದು.

ಒಂದು ಕವಿತೆಗೆ ಕೂಡ ಮನ ಕರಗಬಹುದು. ಕವಿ ಬರೆದ ಎಲ್ಲ ಕವಿತೆಗಳೂ ಜಗದ ಕಣ್ಣು ತೆರೆಸುತ್ತವೆಂದು ಹೇಳಲಾಗದು. ಹಣತೆ ಹೇಗೆ ಮನೆಯ ಕತ್ತಲೆಯನ್ನು ಕಳೆದು ಬೆಳಕು ಚಿಮ್ಮಿಸುವದೋ ಅದೇ ರೀತಿ ಕವಿ ಬರೆದ ಒಂದು ಕವಿತೆಯೂ ನಮ್ಮ ಮನಸ್ಸನ್ನು ಪರಿವರ್ತಿಸಬಹುದು. ಕವಿ ಈ ಸುನೀತದಲ್ಲಿ ಮುಂದುವರಿದು ಹೇಳುತ್ತಾರೆ.

ಹಲವು ಬಣ್ಣದ ಕಣ್ಣು ಸೆಳೆಯುವ ಗುಲಾಬಿಗಳು
ಸುಂದರ ಪ್ರದರ್ಶನಕೆ ಕಸಿಗೊಂಡ ಒನಪು
ಚೆಂಗುಲಾಬಿಯ ಕಂಪುಕೋಮಲತೆ, ನಯವೊಂದೆ
ಕಣ್ಣು ಮನಸಿಗೆ ತಣ್ಣಗೊಂದು ಸವಿನೆನಪು

ಹಲವು ಬಣ್ಣಗಳಿಂದ ಕೂಡಿರುವ, ಗುಲಾಬಿಹೂಗಳು ಸೌಂದರ್ಯ ಪ್ರದರ್ಶನ ಮಾಡುವಂತೆ ಅವುಗಳ ಕಂಪು ಕೋಮಲತೆ ಮನಸ್ಸಿಗೆ ಉತ್ಸಾಹವನ್ನು ಉಂಟುಮಾಡುವಂತೆ ಕವಿಯ ಕವಿತೆಗಳ ಅನುಭೂತಿ ವಿಶಿಷ್ಟ ಪರಿಣಾಮವನ್ನು ಚೆಲ್ಲುತ್ತವೆ.

ಆಕಾಶದಲ್ಲಿ ಹಲವು ಚಿಕ್ಕೆ ಚೆಲ್ಲಾಪಿಲ್ಲಿ
ಬಿದಿಗೆ ಚಂದ್ರನ ಬದಿಗೆ ಒಂದು ಕಿರು ತಾರೆ
ಉದಾಯಸ್ತಗಳ ಹೊನ್ನ ಬೆಳಕು ಚಿಮ್ಮುವ ತವಕ
ತುಂಬಿ ತುಳಕದ ಹಾಗೆ ಆ ಕ್ಷಿತಿಜ ಮೇರೆ

ಆಕಾಶದಲ್ಲಿ ನಕ್ಷತ್ರಗಳು ಅಸಂಖ್ಯಾತ ಸಂಖ್ಯೆಯಲ್ಲಿದ್ದರೂ ಬಿದಿಗೆ ಚಂದ್ರನ ಬದಿಗೆ ಇರುವ ಒಂದು ಕಿರುತಾರೆ ನಮ್ಮನ್ನು ಆಕರ್ಷಿಸುತ್ತದೆ ಉದಯಾಸ್ತಗಳಲ್ಲೂ ಬೆಳಕ ಚಿಮ್ಮುವ ತವಕ ನಿಸರ್ಗದ ಪ್ರಧಾನ ಗುರಿಯಾಗಿದೆ. ಹಾಗೆಯೇ ಕವಿತೆ ಸಹೃದಯವನ್ನು ಸದಾ ಆಕರ್ಷಿಸುತ್ತಲೇ ಇದೆ. ಸುನೀತದ ಕೊನೆಯ ಎರಡು ಸಾಲುಗಳು ಅರ್ಥದ ಹೊಸಲೋಕವೆಡೆಗೆ ಕೊಂಡೊಯ್ಯುತ್ತವೆ.

ಹಲವಕ್ಕೆ ತೆಕ್ಕೆ ಬಿದ್ದರೆ ಎಲ್ಲ ದಕ್ಕಬಹುದೆ?

ವೈವಿಧ್ಯಕ್ಕೂ ಒಂದೆಡೆಗೆ ಮಧ್ಯಬಿಂದುವಿರದೇ?

ಕವಿ ಬರೆದ ಎಲ್ಲ ಕವಿತೆಗಳೂ ಎಲ್ಲ ಓದುಗರನ್ನೂ ಒಂದೇ ರೀತಿಯಲ್ಲಿ ಪ್ರಭಾವಿಸುತ್ತವೆ ಎಂದು ಹೇಳಲಾಗದು. ವೈವಿಧ್ಯಮಯ ಅನುಭವವನ್ನು ಕಟ್ಟಿಕೊಡದೆ ಕವಿತೆಯ ನಿಜವಾದ ಆತ್ಯಂತಿಕ ಲಕ್ಷ್ಯವಾಗಿರುತ್ತದೆ. ಹೀಗೆ ಕಣವಿಯವರ ಕವಿತೆಗಳಲ್ಲಿ ಕಾವ್ಯಮೀಮಾಂಸೆಯ ಜಿಜ್ಞಾಸೆ ಅವರ ಸಮಗ್ರ ಕಾವ್ಯದುದ್ದಕ್ಕೂ ಪ್ರಕಟವಾಗಿದೆ. ಅದರ ಚರ್ಚೆ ಚಿಂತನೆ ಪ್ರತ್ಯೇಕ ಕಾವ್ಯಾನುಸಂಧಾನಕ್ಕೆ ವಸ್ತುವಾಗುತ್ತದೆ.

ಅಡಿ ಟಿಪ್ಪಣಿಗಳು

೧. ಕಾವ್ಯಸೃಷ್ಟಿ ಕಣವಿ ಸಮಗ್ರ ಗದ್ಯ ಸಂಪುಟ ೧ ಪುಟ ೧೨೫
೨. ಅದೇ ಪುಟ ೧೨೫
೨. ಅದೇ ಪುಟ ೧೨೫
೪. ಅದೇ ಪುಟ '೧೨೬
೫. ಅದೇ ಪುಟ ೧೨೬
೬. ಅದೇ ಪುಟ ೧೨೬
೭. ಅದೇ ಪುಟ ೧೨೭
೮. ಅದೇ ಪುಟ ೧೨೯
೯. ಅದೇ ಪುಟ ೧೩೧
೧೦. ಕಾವ್ಯದಲ್ಲಿ ವಸ್ತು ಮತ್ತು ರೂಪ ಕಣವಿ ಸಮಗ್ರ ಗದ್ಯ ಸಂಪುಟ ೧ ಪುಟ ೧೩೨–೧೩೩

೧೧. ಕನ್ನಡ ಕಾವ್ಯದಲ್ಲಿ ನೂತನ ಪ್ರತಿಮೆ ಸಂಕೇತಗಳು ಕಣವಿ ಸಮಗ್ರ ಗದ್ಯ ಸಂಪುಟ ೧ ಪುಟ ೩೯೪

೧೨. ಅದೇ ಪುಟ ೩೯೭–೩೯೮

೧೩. ಕನ್ನಡ ಕಾವ್ಯದ ಹೊಸ ಬದುಕು – ಕಣವಿ ಸಮಗ್ರ ಗದ್ಯ ಸಂಪುಟ ೧ ಪುಟ ೪೨೩

ಈ ಸಂಚಿಕೆಯ ಲೇಖಕರು


* ಕೆ.ಪಿ.ಭಟ್ಟ, ೧೮,೮ ಮುಖ್ಯರಸ್ತೆ, ಬನಶಂಕರಿ ೩ನೇ ಘಟ್ಟ, ೨ನೇ ಹಂತ, ೪ನೇಬ್ಲಾಕ್, ಬೆಂಗಳೂರು– ೫೬೦೦೮೫, ಮೊ– ೯೯೮೦೧ ೮೮೨೮೮
* ಡಾ. ಆರ್ ಲಕ್ಷ್ಮೀನಾರಾಯಣ , ನಂ:೧೨, ಶ್ರೀನಿಕೇತನ, ೨ನೇ ಕ್ರಾಸ್, ಶಿವಾನಂದ ನಗರ, ಮೂಡಲಪಾಳ್ಯ, ಬೆಂಗಳೂರು–೫೬೦೦೭೨, ಮೊ: ೯೪೪೯೦೨೪೯೯೬
* ಡಾ.ಸಂಧ್ಯಾ.ವಿ, # ೧೫೩, ೫ನೆಯ ಅಡ್ಡರಸ್ತೆ, ಮೊದಲನೆಯ ಹಂತ, ಆರ್.ಕೆ.ಬಡಾವಣೆ, ಪದ್ಮನಾಭನಗರ, ಬೆಂಗಳೂರು–೭೦, ಮೊ.೯೯೮೬೧೬೪೪೯೦
* ಎಂ.ಎನ್. ಪ್ರಭಾಕರ್, ನಂ. ೪೨, ಪದ್ಮಪ್ರಭ, ಬ್ಲಾಕ್ ೧೭, ಬ್ಯಾಂಕ್ ಕಾಲೋನಿ, ಶ್ರೀರಾಮಪುರ, ೨ನೇ ಹಂತ, ಮೈಸೂರು – ೫೭೦೦೨೩, ಮೊ: ೯೮೪೫೪೯೧೫೪೫
* ಡಾ. ಎಂ.ಜಿ.ವಾರಿ, Redt Professor, SSBM Degree College, Badami-587201, Cell:8762277537
* ಶ್ರೀ ಬಿ.ಎಸ್. ಚಂದ್ರಶೇಖರ್
* ಆಜಪ್ಪ ಬಾಬು ಕಂಬಾರ, ಕನ್ನಡ ಸಂಪನ್ಮೂಲ ವ್ಯಕ್ತಿ, ಅಜೀಮ್ ಪ್ರೇಮಾಜಿ ಪೌಂಡಷೇನ್ , ಶಿಕ್ಷಕರ ಕಲಿಕಾ ಕೇಂದ್ರ , ಸರಕಾರಿ ಬಾಲಕರ ಪ್ರೌಢ ಶಾಲೆ ಮುದಗಲ್ಲ, ತಾ// ಲಿಂಗಸ್ಗೂರು ಜಿ// ರಾಯಚೂರು, ಮೊ: ೮೧೯೭೪೩೦೯೦
* ಬಸವರಾಜ ಕೋಡಗುಂಟಿ, ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ, ಕಡಗಂಚಿ, ಕಲಬುರಗಿ, bkodagunti@gmail.com
* ಡಾ.ಎಚ್.ಎಸ್.ಅನಂತನಾರಾಯಣ, ಭಾಷಾಶಾಸ್ತ್ರ ಪ್ರಾಧ್ಯಾಪಕ (ನಿವೃತ್ತ), ಬೆಂಗಳೂರು, ಮೊಬೈಲ್: ೯೯೮೦೬೩೨೮೧೦
* ಡಾ. ಜಿ.ಎಂ. ಹೆಗಡೆ, ೭ನೆಯ ಕ್ರಾಸು, ಕಲ್ಯಾಣನಗರ, ಧಾರವಾಡ – ೫೮೦೦೦೭, ಮೊ: ೯೯೪೫೯೯೨೭೨

ಬೆನ್ನುಡಿ

'ಇಸಿಲ'ವು ಕನ್ನಡ ಪದವಲ್ಲ ಎಂಬ ಅವರ ನಿರ್ಧಾರ ಸರಿಯೆಂದೇತೋರುತ್ತದೆ. ಆದರೆ 'ಇಸಿಲ'ವು ಕನ್ನಡದಲ್ಲಲ್ಲದೇ ಕೇವಲ ಪ್ರಾಕೃತ ಶಾಸನಗಳಲ್ಲಿ ಮಾತ್ರ ದೊರೆಯುತ್ತದೆಎಂಬುದು, ಇದನ್ನು ನಿರ್ಧರಿಸುವ ಸಂಗತಿಯಾಗದು.........

* ಕೃಷ್ಣ ಪರಮೇಶ್ವರ ಭಟ್ಟ

ಕವಿಗೆ ಮನುಷ್ಯ ಸಂಬಂಧಗಳು ಎಷ್ಟು ಮುಖ್ಯವೋ ಹಾಗೆಯೇ ಪ್ರಪಂಚದ ಜೀವಕೋಟಿಗಳ ಬಗೆಗೆ ಮಮತೆ ಇದೆ. ಕವಿ ಯಾವಾಗಲೂ ವಿಶ್ವಕುಟುಂಬಿಯಾಗಿಯೇ ಚಿಂತಿಸುತ್ತಾನೆ. ಅದನ್ನು ಇಲ್ಲಿ ನಾವು ಅನುಭವಿಸಿದ್ದೇವೆ.

* ಡಾ.ಜಿ.ಎಂ. ಹೆಗಡೆ

ಭಾಷೆ ಮೊದಲು, ನಂತರ ವ್ಯಾಕರಣ ಶಾಸ್ತ್ರ ವಿವೇಚನೆ ಎಂಬಂತೆ ಮೊದಲು ವಾಸ್ತುರಚನೆ ವಿಕಾಸ, ಬೆಳವಣಿಗೆಗಳು, ಇವನ್ನು ಕಟ್ಟಿ ಹಾಕಿದ ಶಾಸ್ತ್ರ ಸಂದೋಹಗಳು ನಂತರ ಕಾಲದ್ದು, ದಾಕ್ಷಿಣಾತ್ಯವು ಈ ಪರಿಸರದಲ್ಲೇ ಹುಟ್ಟಿ ಬೆಳೆದು ಹಲವು ಶೈಲಿ ಪ್ರಭೇದಗಳನ್ನು ಪ್ರದರ್ಶಿಸಿ ಇಲ್ಲಿಯೇ ನೆಲೆಯೂರಿತು–

* ಎಂ.ಎನ್. ಪ್ರಭಾಕರ್

ರತ್ನಾಕರನ ಸಮನ್ವಯದೃಷ್ಟಿಗೆ ಅವನ ಹಾಡುಗಳು ಬಲವಾದ ಪುರಾವೆಯನ್ನೂ ಒದಗಿಸುತ್ತವೆ. ಆತ್ಮತತ್ವ, ಸಂಸಾರನಿರಸನ, ವೈರಾಗ್ಯ, ಕರ್ಮಬಂಧನ ಮತ್ತು ಅದರಿಂದ ಬಿಡುಗಡೆ, ಮುಕ್ತಿ ಈ ಪರಿಕಲ್ಪನೆಗಳು ಜೈನವೂ ಸೇರಿದಂತೆ ಬಹುತೇಕ ಭಾರತೀಯ ಧರ್ಮ ಮತ್ತು ದರ್ಶನಗಳ ತಿರುಳಾಗಿರುವುದು ಕೂಡ ರತ್ನಾಕರನ ಧಾರ್ಮಿಕ ದೃಷ್ಟಿಕೋನ ಉದಾರವಾಗಲು ಕಾರಣವಾಗಿದೆ.

* ಡಾ. ಆರ್. ಲಕ್ಷ್ಮೀನಾರಾಯಣ

ಶ್ರೀಮತಿ ಎಂಬ ಪದವು 'ಕಂತಿ' ಗುಡ್ಡಿ, ಎಂಬಂತೆ ಜೈನ ಸನ್ಯಾಸಿನಿಯರನ್ನು ಸಂಬೋಧಿಸುತ್ತಿದ್ದ ಪಾರಿಭಾಷಿಕ ಪದವಿರಬಹುದು, ಎಂದು ಪರಿಗಣಿಸಲು ಸಾಧ್ಯವಾಗುವುದಿಲ್ಲ. ಶ್ರವಣಬೆಳಗೊಳ, ಕೊಪ್ಪಳ, ಮೊದಲಾದ ಹಲವಾರು ಶಾಸನಗಳಲ್ಲಿ ಜೈನ ಸನ್ಯಾಸಿನಿಯರ, ವ್ರತಧಾರಿಗಳ ಉಲ್ಲೇಖ ದೊರಕುವೆಡೆಯಲ್ಲಿ 'ಶ್ರೀಮತಿ' ಪ್ರಯೋಗ ಬಂದಿಲ್ಲ. ಹಾಗಾಗಿ 'ಶ್ರೀಮತಿ 'ಎನ್ನುವುದು ಅಂಕಿತನಾಮವೇ ಆಗಿದೆ.

* ಸಂಧ್ಯಾ ಎ.

ವ್ಯಾಕರಣದ ವಿಧಾನಗಳು, ಕಾತಂತ್ರ ವ್ಯಾಕರಣದಲ್ಲಿ ಕಂಡು ಬರುವ ಕ್ರಮದಲ್ಲೇ (ಅಂದರೆ, ಸಂಜ್ಞಾ ಸಂಧಿವಿಭಕ್ತಿಕಾರಕ)ಇರುವುದು ವಿಶೇಷ ಈ ಕ್ರಮ ಪಾಣಿನಿಯ ವ್ಯಾಕರಣದಲ್ಲಿಲ್ಲ. ಆದ್ದರಿಂದ ನಾಗವರ್ಮ ಕಾತಂತ್ರದಿಂದಲೇ ಹೆಚ್ಚು ಪ್ರಭಾವಿತನಾಗಿದ್ದಾನೆ.

* ಡಾ. ಎಚ್.ಎಸ್. ಅನಂತನಾರಾಯಣ

'ಪಿಕಳಿಹಾಳ' ಆದಿಮಾನವನು ಜೀವಿಸಿರುವ ಸ್ಥಳಗಳಲ್ಲಿ ಪ್ರಮುಖವಾಗಿದೆ. ಆದಿಮಾನವನು ಬಿಡಿಸಿದ ಚಿತ್ರಗಳಲ್ಲಿ ನುಡಿಸಿದ ಸಂಗೀತ ಕಲ್ಲುಗಳು, ಆಡಿದ ಪಗಡೆಯನಾನೆ ಇತ್ಯಾದಿ ಅಂಶಗಳು ಪಿಕಳಿಹಾಳದಲ್ಲಿ ಸಿಗುತ್ತವೆ.

* ಆಜಪ್ಪ ಬಾಬು ಕಂಬಾರ

ಕನ್ನಡದಜಾಯ ಮಾನಕ್ಕೆ 'ಶ್ಲೋಕ'ವೆಂಬತೆಭಂದ ಅಳವಡಲಿಲ್ಲ. ಕವಿರಾಜ ಮಾರ್ಗದ ಎರಡನೆಯ ಪರಿಚ್ಛೇಧದಲ್ಲಿ ೨೮ ಶ್ಲೋಕಗಳಿವೆ. ಶ್ಲೋಕದ ಲಕ್ಷಣವನ್ನೂ ಹೇಳಿರುವವವನು ನಾಗವರ್ಮನೊಬ್ಬನೇ

* ಬಿ.ಎಸ್. ಚಂದ್ರಶೇಖರ್

'ಶಮದ' ಒಟ್ಟಾರೆ ಸಾರವನ್ನುಅರಿಯದೆ, ಕಣ್ಣಿಗೆ ಪಟ್ಟಿಕಟ್ಟಿಕೊಂಡಿರುವ ಹಾಗೆ ಕೇಶಿರಾಜನೊಂದಿಗೆ 'ಶಮದ' ವನ್ನು ಸಾರಸವಾಗಿ ದೂರ ಇಡುವುದು ಎಷ್ಟು ಸರಿ?ಇದನ್ನು
ಮತ್ತೊಮ್ಮೆ ನಮ್ಮೊಳಗೆ ಪ್ರಶ್ನೆ ಹಾಕಿಕೊಳ್ಳಬೇಕಿದೆ.

* ಡಾ. ಎಂ.ಜಿ.ವಾರಿ

ಈ ಸಂಚಿಕೆಯ ಲೇಖಕರು

* ಕೆ.ಪಿ.ಭಟ್ಟ, ೧೮,೮ ಮುಖ್ಯರಸ್ತೆ; ಬನಶಂಕರಿ ೩ನೇ ಘಟ್ಟ, ೨ನೇ ಹಂತ, ೪ನೇಬ್ಲಾಕ್, ಬೆಂಗಳೂರು–೫೬೦೦೮೫, ಮೊ– ೯೯೮೦೧ ೮೮೨೮೮
* ಡಾ. ಆರ್ ಲಕ್ಷ್ಮೀನಾರಾಯಣ , ನಂ:೧೨, ಶ್ರೀನಿಕೇತನ, ೨ನೇ ಕ್ರಾಸ್, ಶಿವಾನಂದ ನಗರ, ಮೂಡಲಪಾಳ್ಯ, ಬೆಂಗಳೂರು–೫೬೦೦೭೨,
ಮೊ: ೯೪೪೯೦೨೮೯೯೬
* ಡಾ.ಸಂಧ್ಯಾ.ವಿ, # ೧೫೩, ೫ನೆಯ ಅಡ್ಡರಸ್ತೆ, ಮೊದಲನೆಯ ಹಂತ, ಆರ್.ಕೆ.ಬಡಾವಣೆ, ಪದ್ಮನಾಭನಗರ, ಬೆಂಗಳೂರು–೭೦, ಮೊ.೯೯೮೬೧೬೪೮೯೦
* ಎಂ.ಎನ್. ಪ್ರಭಾಕರ್, ನಂ. ೪೨, ಪದ್ಮಪ್ರಭ, ಬ್ಲಾಕ್ ೧೭, ಬ್ಯಾಂಕ್ ಕಾಲೋನಿ, ಶ್ರೀರಾಮಪುರ, ೨ನೇ ಹಂತ, ಮೈಸೂರು – ೫೭೦೦೨೩, ಮೊ: ೯೮೪೫೪೯೧೫೪೫
* ಡಾ. ಎಂ.ಜಿ.ವಾರಿ, ನಿವೃತ್ತ ಪ್ರಾಧ್ಯಾಪಕರು ಎಸ್.ಎಸ್.ಬಿ.ಎಂ ಪದವಿ ಕಾಲೇಜು ಬಾದಾಮಿ–587201, Cell:8762277537
* ಶ್ರೀ ಬಿ.ಎಸ್. ಚಂದ್ರಶೇಖರ್, ನಂ–೫೯, ಬೆಳಗು, ೬ನೇ ಮುಖ್ಯರಸ್ತೆ, ೯ನೇಕ್ರಾಸ್, ಆವಲಹಳ್ಳಿ ಬಿಡಿಎ ಪಾರ್ಕ್, ಬನಶಂಕರಿ, ೩ನೇ ಘಟ್ಟ, ಬೆಂಗಳೂರು–೫೬೦೦೮೫ ಮೊ– ೯೯೮೦೦೭೧೭೧೫.
* ಆಜಪ್ಪ ಬಾಬು ಕಂಬಾರ, ಕನ್ನಡ ಸಂಪನ್ಮೂಲ ವ್ಯಕ್ತಿ, ಅಜೀಮ್ ಪ್ರೇಮಾಜಿ ಪೌಂಡಷೇನ್ , ಶಿಕ್ಷಕರ ಕಲಿಕಾ ಕೇಂದ್ರ , ಸರಕಾರಿ ಬಾಲಕರ ಪ್ರೌಢ ಶಾಲೆ ಮುದಗಲ್ಲ, ತಾ// ಲಿಂಗಸ್ಗೂರು ಜಿ// ರಾಯಚೂರು, ಮೊ: ೮೧೯೭೪೩೦೯೦
* ಬಸವರಾಜ ಕೋಡಗುಂಟಿ, ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ, ಕಡಗಂಚಿ, ಕಲಬುರಗಿ, bkodagunti@gmail.com
* ಡಾ.ಎಚ್.ಎಸ್.ಅನಂತನಾರಾಯಣ, ಭಾಷಾಶಾಸ್ತ್ರ ಪ್ರಾಧ್ಯಾಪಕ (ನಿವೃತ್ತ), ಬೆಂಗಳೂರು, ಮೊಬೈಲ್: ೯೯೮೦೬೩೨೮೧೦
* ಡಾ. ಜಿ.ಎಂ. ಹೆಗಡೆ, ೬ನೆಯ ಕ್ರಾಸು, ಕಲ್ಯಾಣನಗರ, ಧಾರವಾಡ – ೫೮೦೦೦೭, ಮೊ: ೯೯೪೫೨೯೯೨೭೨

‘ಇಸಿಲ’ವು ಕನ್ನಡ ಪದವಲ್ಲ ಎಂಬ ಅವರ ನಿರ್ಧಾರ ಸರಿಯೆಂದೇ ತೋರುತ್ತದೆ. ಆದರೆ ‘ಇಸಿಲ’ವು ಕನ್ನಡದಲ್ಲಲ್ಲದೇ ಕೇವಲ ಪ್ರಾಕೃತ ಶಾಸನಗಳಲ್ಲಿ ಮಾತ್ರ ದೊರೆಯುತ್ತದೆ ಎಂಬುದು, ಇದನ್ನು ನಿರ್ಧರಿಸುವ ಸಂಗತಿಯಾಗದು... * ಕೃಷ್ಣ ಪರಮೇಶ್ವರ ಭಟ್ಟ

ಕವಿಗೆ ಮನುಷ್ಯ ಸಂಬಂಧಗಳು ಎಷ್ಟು ಮುಖ್ಯವೋ ಹಾಗೆಯೇ ಪ್ರಪಂಚದ ಜೀವಕೋಟಿಗಳ ಬಗೆಗೆ ಮಮತೆ ಇದೆ. ಕವಿ ಯಾವಾಗಲೂ ವಿಶ್ವ ಕುಟುಂಬಿಯಾಗಿಯೇ ಚಿಂತಿಸುತ್ತಾನೆ. ಅದನ್ನು ಇಲ್ಲಿ ನಾವು ಅನುಭವಿಸಿದ್ದೇವೆ. * ಡಾ.ಜಿ.ಎಂ. ಹೆಗಡೆ

ಭಾಷೆ ಮೊದಲು, ನಂತರ ವ್ಯಾಕರಣ ಶಾಸ್ತ್ರ ವಿವೇಚನೆ ಎಂಬಂತೆ ಮೊದಲು ವಾಸ್ತುರಚನೆ ವಿಕಾಸ, ಬೆಳವಣಿಗೆಗಳು ಇವನ್ನು ಕಟ್ಟಿ ಹಾಕಿದ ಶಾಸ್ತ್ರ ಸಂದೋಹಗಳು ನಂತರದ ಕಾಲದ್ದು, ದಾಕ್ಷಿಣಾತ್ಯವು ಈ ಪರಿಸರದಲ್ಲೇ ಹುಟ್ಟಿ ಬೆಳೆದು ಹಲವು ಶೈಲಿ ಪ್ರಭೇದಗಳನ್ನು ಪ್ರದರ್ಶಿಸಿ ಇಲ್ಲಿಯೇ ನೆಲೆಯೂರಿತು, * ಎಂ.ಎನ್. ಪ್ರಭಾಕರ್

ರತ್ನಾಕರನ ಸಮನ್ವಯ ದೃಷ್ಟಿಗೆ ಅವನ ಹಾಡುಗಳು ಬಲವಾದ ಪುರಾವೆಯನ್ನು ಒದಗಿಸುತ್ತವೆ. ಆತ್ಮತತ್ವ, ಸಂಸಾರನಿರಸನ, ವೈರಾಗ್ಯ, ಕರ್ಮಬಂಧನ ಮತ್ತು ಅದರಿಂದ ಬಿಡುಗಡೆ, ಮುಕ್ತಿ ಈ ಪರಿಕಲ್ಪನೆಗಳು ಜೈನವೂ ಸೇರಿದಂತೆ ಬಹುತೇಕ ಭಾರತೀಯ ಧರ್ಮ ಮತ್ತು ದರ್ಶನಗಳ ತಿರುಳಾಗಿರುವುದು ಕೂಡ ರತ್ನಾಕರನ ಧಾರ್ಮಿಕ ದೃಷ್ಟಿಕೋನ ಉದಾರವಾಗಲು ಕಾರಣವಾಗಿದೆ.
ಡಾ. ಆರ್. ಲಕ್ಷ್ಮೀನಾರಾಯಣ

ಶ್ರೀಮತಿ ಎಂಬ ಪದವು ‘ಕಂತಿ’ಗುಡ್ಡಿ, ಎಂಬಂತೆ ಜೈನ ಸನ್ಯಾಸಿನಿಯರನ್ನು ಸಂಬೋಧಿಸುತ್ತಿದ್ದ ಪಾರಿಭಾಷಿಕ ಪದವಿರಬಹುದು ಎಂದು ಪರಿಗಣಿಸಲು ಸಾಧ್ಯವಾಗುವುದಿಲ್ಲ. ಶ್ರವಣಬೆಳಗೊಳ, ಕೊಪ್ಪಳ, ಮೊದಲಾದ ಹಲವಾರು ಶಾಸನಗಳಲ್ಲಿ ಜೈನ ಸನ್ಯಾಸಿನಿಯರ, ವ್ರತಧಾರಿಗಳ ಉಲ್ಲೇಖ ದೊರಕುವೆಡೆಯಲ್ಲಿ ‘ಶ್ರೀಮತಿ’ ಪ್ರಯೋಗ ಬಂದಿಲ್ಲ. ಹಾಗಾಗಿ ‘ಶ್ರೀಮತಿ ‘ಎನ್ನುವುದು ಅಂಕಿತನಾಮವೇ ಆಗಿದೆ. * ಸಂಧ್ಯಾ ವಿ.

ವ್ಯಾಕರಣದ ವಿಧಾನಗಳು, ಕಾತಂತ್ರ ವ್ಯಾಕರಣದಲ್ಲಿ ಕಂಡು ಬರುವ ಕ್ರಮದಲ್ಲೇ (ಅಂದರೆ, ಸಂಜ್ಞಾ ಸಂಧಿ ವಿಭಕ್ತಿಕಾರಕ) ಇರುವುದು ವಿಶೇಷ. ಈ ಕ್ರಮ ಪಾಣಿನಿಯ ವ್ಯಾಕರಣದಲ್ಲಿಲ್ಲ. ಆದ್ದರಿಂದ ನಾಗವರ್ಮ ಕಾತಂತ್ರದಿಂದಲೇ ಹೆಚ್ಚು ಪ್ರಭಾವಿತನಾಗಿದ್ದಾನೆ. * ಎಚ್.ಎಸ್. ಅನಂತನಾರಾಯಣ

‘ಪಿಕಳಿಹಾಳ’ ಆದಿಮಾನವನು ಜೀವಿಸಿರುವ ಸ್ಥಳಗಳಲ್ಲಿ ಪ್ರಮುಖವಾಗಿದೆ. ಆದಿಮಾನವನು ಬಿಡಿಸಿದ ಚಿತ್ರಗಳಲ್ಲಿ ನುಡಿಸಿದ ಸಂಗೀತ ಕಲ್ಲುಗಳು, ಆಡಿದ ಪಗಡೆಯನಾನೆ ಇತ್ಯಾದಿ ಅಂಶಗಳು ಪಿಕಳಿಹಾಳದಲ್ಲಿ ಸಿಗುತ್ತವೆ. * ಆಜಪ್ಪ ಬಾಬು ಕಂಬಾರ

ಕನ್ನಡದ ಜಾಯಮಾನಕ್ಕೆ ‘ಶ್ಲೋಕ’ ಛಂದಸ್ಸು ಅಳವಡಲಿಲ್ಲ. ಕವಿರಾಜ ಮಾರ್ಗದ ಎರಡನೆಯ ಪರಿಚ್ಛೇಧದಲ್ಲಿ ೨೮ ಶ್ಲೋಕಗಳಿವೆ. ಶ್ಲೋಕದ ಲಕ್ಷಣವನ್ನೂ ಹೇಳಿರುವವನು ನಾಗವರ್ಮನೊಬ್ಬನೇ
* ಬಿ.ಎಸ್. ಚಂದ್ರಶೇಖರ್

‘ಶಮದ’ ಒಟ್ಟಾರೆ ಸಾರವನ್ನು ಅರಿಯದೆ, ಕಣ್ಣಿಗೆ ಪಟ್ಟಿ ಕಟ್ಟಿಕೊಂಡಿರುವ ಹಾಗೆ ಕೇಶಿರಾಜನೊಂದಿಗೆ ‘ಶಮದ’ ವನ್ನು ಸಾರಸವಾಗಿ ದೂರ ಇಡುವುದು ಎಷ್ಟು ಸರಿ? ಇದನ್ನು ಮತ್ತೊಮ್ಮೆ ನಮ್ಮೊಳಗೆ ಪ್ರಶ್ನೆ ಹಾಕಿಕೊಳ್ಳಬೇಕಿದೆ. * ಡಾ. ಎಂ.ಜಿ.ವಾರಿ